ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

# ಮೋಜಿನ ಜೀವನ

ಅಥವಾ

# ಮೋಹನ.



ಲೇಖಕ:

ಜಿ. ಆರ್. ಮಹಾಬಲಭಟ್ಟ,

ವೇದಾಂತ ಶಿರೋಮಣಿ,-ವೇದಾಂತ ವಿಶಾರದ,

ಮುಳಬಾಗಿಲು ಮಠ,

ದೂರ್ವಾಸಪುರಂ



ಪ್ರಕಾಶಕ:

ಭಿ. ಪ. ಕಾಳೆ,

ಆನಂದವನ-ಅಗಡಿ



ಜುಲೈ ೧೯೩೫

ಬೆಲೆ ೧-೪-೦ ರೂ.

# ಸಮರ್ಪಣ ಪತ್ರಿಕಾ.



**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಶಿಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವಮದರ್ಪಣಮ್ ॥**

ಎಂಬ ಗೀತಾವಚನಾನುಸಾರವಾಗಿ ಈ ಗ್ರಂಥಕುಸುಮವನ್ನು
ಶ್ರೀ ಪರಮಾತ್ಮನ ಚರಣಾರವಿಂದಗಳಲ್ಲಿ ಅರ್ಪಿಸುವೆನು.

ಇತಿ ಅರ್ಪಯಿತಾ-

**ಮಹಾಬಲ.**



# ಪ್ರಕಾಶಕರ ಎರಡು ಮಾತುಗಳು.



ಮೋಜಿನ ಜೀವನ ಅಥವಾ ಮೋಹನ ಎಂಬೀ ಹೊಸ ಮಾದರಿಯ ಪುಸ್ತಕವನ್ನು ನಮ್ಮ ಪ್ರಿಯ ಕನ್ನಡಿಗರ ಮುಂದಿರಿಸಲಿಕ್ಕೆ ನಮಗೆ ತುಂಬಾ ಸಂತೋಷವಾಗುತ್ತಿದೆ. ಇದರೊಳಗಿನ ಮೋಹನನ ಪ್ರತಿಯೊಂದು ಕೃತಿಯು "ದುಷ್ಟಸಂಹಾರಕ-ಶಿಷ್ಟಪರಿಪಾಲಕ" ಎಂಬ ಉಚ್ಚ ತತ್ವಕ್ಕನುಸರಿಸಿ ಇರುವದು; ಹಾಗು ಅದನ್ನನುಸರಿಸಿಯೇ ಆತನು ತನ್ನ ಹಾಗು ತನ್ನ ಮಿತ್ರರ ಜೀವನವನ್ನು ಒಳ್ಳೆ ಮೋಜಿನಿಂದ ಸಾಗಿಸಿರುವನು. ಆರ್ಥಿಕ ಮುಗ್ಗಟ್ಟಿನ ಮತ್ತು ಸುಶಿಕ್ಷಿತ ಬೇಕಾರಿಗಳ ಈ ಕಾಲದಲ್ಲಿ ಈ ಪುಸ್ತಕ ವಾಚನದಿಂದ ಕೆಲ ಜನರಿಗಾದರೂ ತಮ್ಮ ಉಪಜೀವನದ ಯೋಗ್ಯ ಮಾರ್ಗವು ಲಭಿಸಿದರೆ ಪುಸ್ತಕ ಲೇಖಕರ ಶ್ರಮ ಸಾಫಲ್ಯವಾಯಿತೆಂದು ಭಾವಿಸುವೆವು.

ಆನಂದವನ,
ತಾ|| ೪-೭-೧೯೩೫

— ಪ್ರಕಾಶಕ.

# ಪ್ರಧಾನ ಪಾತ್ರ ಪರಿಚಯ.

| | |
|---|---|
| ಮೋಹನ | (ಕಥಾನಾಯಕ) |
| ಪ್ರಿಯನಾಥ | (ಮೋಹನನ ಮಿತ್ರ) |
| ಮದನ | ( ,, ) |
| ಲಕ್ಷ್ಮೀಶ | ( ,, ) |
| ಗುಣಾನಂದ | ( ,, ) |
| ರಾಕಾಚಂದ್ರ | (ಪತ್ತೇದಾರ) |
| ಸುಖಾನಂದ | (ಪತ್ತೇದಾರ) |
| ಗೋವಿಂದರಾಯರು | (ಶ್ರೀಮಂತರು) |
| ಗುರುನಾಥರಾಯರು | ( ,, ) |
| ರಘುರಾಮನ್ | (ಪೋಲೀಸ್ ಇನ್ಸಪೆಕ್ಟರ) |
| ವಾಮನರಾಯ | (ಒಬ್ಬ ವಕೀಲ) |
| ಸುರೇಂದ್ರನಾಥ | (ಮೋಹನನ ಮಾವ) |
| ರಾಮಣ್ಣ | (ಸುರೇಂದ್ರನಾಥನ ಸೇವಕ) |
| ರಘು | (ದೊಡ್ಡ ಕಳ್ಳ) |
| ಸುಖೇಶ | (ರಘುವಿನ ಮಿತ್ರ) |
| ರಮೇಶ | (ರಘುವಿನೊಡನೆ ಸೇರಿದ ಪತ್ತೇದಾರ) |
| ಕವೀಶ | (ಸುರೇಂದ್ರನಾಥನ ಚಿಕ್ಕತಂದೆಯ ಮಗನು) |
| ರಾಮಚಂದ್ರರಾಯರು | (ರಘುವಿನ ಮಿತ್ರರು) |
| ಕೋಮಲೆ | (ಮೋಹನನ ಲೀನೆ) |
| ಸುಮತಿ | (ಕೋಮಲೆಯ ಸಖಿ) |
| ರಾಗಿಣಿ | (ಶೂದ್ರ ಸ್ತ್ರೀ) |
| ವಿರಕ್ತೆ | (ರಘುವಿನಿಂದ ವಂಚಿತಳು) |

# ಮೋಜಿನ ಜೀವನ.

ಅಥವಾ

# ಮೋಹನ.

## ಪ್ರಥಮಗುಚ್ಛ.

ರಾತ್ರಿಕಾಲ. ಕಾಡಿಗೆಯಂತೆ ಕಪ್ಪಾದ ಕತ್ತಲೆಯಿಂದ ಲೋಕವೆಲ್ಲವೂ ಕಪ್ಪಾಗಿ ತೋರುತ್ತಲಿದೆ. ಇಂತಹ ಸಮಯದಲ್ಲಿ ಯಮುನಾಪುರಿಯ ಒಂದು ಉಪ್ಪರಿಗೆ ಮನೆಯ ಕೋಣೆಯೊಂದರಲ್ಲಿ ಆ ಮನೆಯ ಯಜಮಾನರಾದ ಗೋವಿಂದರಾಯರೆಂಬೊಬ್ಬ ಗೃಹಸ್ಥರು ಖುರ್ಚಿಯೊಂದರಲ್ಲಿ ಕುಳಿತುಕೊಂಡಿದ್ದರು. ಆ ಕೋಣೆಯು ಅತ್ಯಂತ ಸುಸಜ್ಜಿತವಾಗಿತ್ತು. ಕೋಣೆಯ ವಸ್ತುಗಳ ಸನ್ನಿವೇಶವನ್ನು ನೋಡಿದೊಡನೆಯೇ ಆ ಮನೆಯು ದೊಡ್ಡ ಐಶ್ವರ್ಯವಂತರದೆಂದು ತಿಳಿಯುತ್ತಿತ್ತು.

ನೆಲಕ್ಕೆ ಬಹಳ ಬೆಲೆಬಾಳುವ ರತ್ನಕಂಬಳಿಯನ್ನು ಹಾಸಿದ್ದರು. ಬಣ್ಣಬಣ್ಣದ ಚಿತ್ರಗಳಿಂದ ಚಿತ್ರಿತವಾದ ಗೋಡೆಯಲ್ಲಿ ನಾಲ್ಕೂಕಡೆಗಳಲ್ಲಿರುವ ಚಿತ್ರಪಟಗಳು ನೋಟಕರ ಮನವನ್ನು ಸೆಳೆಯುತ್ತಿದ್ದವು. ಕೋಣೆಯ ಒಂದು ಭಾಗದಲ್ಲಿ ದೊಡ್ಡದಾದೊಂದು ಬೀರಿನಲ್ಲಿ ಬಗೆಬಗೆಯ ಗ್ರಂಥಗಳು ವಿರಾಜಿಸುತ್ತಲಿದ್ದವು. ಕೋಣೆಯ ಮಧ್ಯಭಾಗದಲ್ಲೊಂದು ದುಂಡಾದ ಮೇಜಿದ್ದು ಅದರ ಸುತ್ತಲೂ ನಾಲ್ಕಾರು ಖುರ್ಚಿಗಳಿದ್ದವು. ಇಂತಹ ಮನೋಹರವಾದ ಆ ಕೊಠಡಿಯಲ್ಲಿ ಗೋವಿಂದರಾಯರು ಕಾಗದವೊಂದನ್ನು ಹಿಡಿದು ಆಲೋಚಿಸುತ್ತಿದ್ದರು.

ಕಾಗದದಲ್ಲಿ ಹೀಗೆ ಬರೆಯಲ್ಪಟ್ಟಿತ್ತು:—

"ನಾಳೆ ರಾತ್ರಿ ಒಂದು ಗಂಟೆಯ ಸಮಯದಲ್ಲಿ ನಾವು ನಿಮ್ಮನ್ನು ನೋಡಲಿಚ್ಛಿಸಿರುವೆವು. ನೋಡಲು ಕಾರಣವನ್ನು ನೀವೇ ಊಹಿಸಿರಿ.

ಇತಿ ಮೋಹನ."

ಮೋಹನನ ವಿಚಾರವು ರಾಯರನ್ನು ದಂಗುಬಡಿಸಿತ್ತು. ತಮ್ಮ

ನಿಪುಣತೆಗೆ ಪ್ರತೀಕಾರವನ್ನು ಮಾಡಲು ಮೋಹನನು ಯೋಚಿಸಿರುವನೆಂದು ರಾಯರು ತಿಳಿದರು. ತಮ್ಮಂತಹ ಶ್ರೀಮಂತರಲ್ಲಿ ಕೆಲವರು ಈ ಮೊದಲೇ ಮೋಹನನಿಂದ ವಂಚಿಸಲ್ಪಟ್ಟಿದ್ದನ್ನು ತಿಳಿದಿದ್ದರು. ಸ್ವಲ್ಪ ಯೋಚಿಸಿ ರಾಯರು ಸೇವಕನೊಬ್ಬನನ್ನು ಕರೆದು ಏನನ್ನೋ ಹೇಳಿ ಪೋಲೀಸ್‌ಸ್ಟೇಷ ನ್ನಿಗೆ ಕಳುಹಿಸಿದರು. ಸ್ವಲ್ಪ ಹೊತ್ತಾದ ಮೇಲೆ ಸೇವಕನು ಹಿಂದಿರುಗಿ ಬಂದು: "ಇನ್‌ಸ್ಪೆಕ್ಟರರ ಹತ್ತರ ತಿಳಿಸಿದೆನು. ಆ ಸಮಯಕ್ಕೆ ಬರುವೆನು. ಎಂಬದಾಗಿ ಹೇಳಿದರು" ಎಂದು ತಿಳಿಸಿದನು.

ರಾಯರು ಅದರಿಂದ ಸ್ವಲ್ಪ ಮನಸ್ಸಿಗೆ ಧೈರ್ಯವನ್ನು ತೆಗೆದು ಕೊಂಡರೂ, ಚಿಂತೆಯಿಲ್ಲದೆ ನಿದ್ರಿಸಲು ಮನವು ಒಡಂಬಡಲಿಲ್ಲ. ಪೋಲೀ ಸರ ಸಹಾಯವಿದ್ದರೂ ಮೋಹನನು ಯಾವುದಾದರೂ ಒಂದು ಉಪಾಯ ದಿಂದ ತಮ್ಮನ್ನು ಮೋಸಗೊಳಿಸಬಹುದೆಂಬ ಹೆದರಿಕೆಯು ರಾಯರಿಗೆ ಬಲ ವಾಗಿತ್ತು. ಬಹುಕಾಲದಿಂದ ಕಾಪಾಡಿಕೊಂಡು ಬಂದಿರುವ ಧನವನ್ನು ಕೈಬಿಡಲು ಮನಸ್ಸು ಒಪ್ಪುವುದಿಲ್ಲ. ಇಂತಹ ನಾನಾತರಹದ ಯೋಚನೆ ಯಿಂದ ರಾಯರು ರಾತ್ರಿಯನ್ನು ಕಳೆದರು.

ಬೆಳಿಗ್ಗೆ ಎಂಟುಘಂಟೆಯ ಸಮಯದಲ್ಲಿ ಟಪ್ಪಾಲಿನವನು ಕೆಲವು ಕಾಗದ ಗಳನ್ನು ಕೊಟ್ಟು ಹೋದನು.

ಅವುಗಳಲ್ಲಿ ಕೆಂಪು ಬಣ್ಣದ ಲಕೋಟೆಯೊಂದು ಇದ್ದುದನ್ನು ಕಂಡು ರಾಯರು ಸಂದೇಹಪಟ್ಟು ಆ ಲಕೋಟೆಯನ್ನು ಹರಿದು ಒಳಗಿರುವ ಕಾಗದ ವನ್ನೋದಿದರು.

"ಪ್ರಿಯ ಶ್ರೀಮಂತರೇ?

ನಾನು ಬರೆದಿರುವ ಕಾಗದವನ್ನು ನೋಡಿ ಭೀತರಾಗಿ ನೀವು ನನ್ನ ಕಾರ್ಯಕ್ಕೆ ವಿಘ್ನವನ್ನುಂಟು ಮಾಡಲು ಯತ್ನಿಸಿರುವದನ್ನು ತಿಳಿದೆನು. ಅದರಿಂದ ನನಗೇನೂ ಭಯವಿಲ್ಲ. ನ್ಯಾಯಮಾರ್ಗದಲ್ಲಿ ನಡೆಯುವವರನ್ನು ದೇವರು ಎಲ್ಲೆಲ್ಲಿಯೂ ರಕ್ಷಿಸುವನು. ನನ್ನ ಕಾರ್ಯವು ನ್ಯಾಯವಾದುದೇ ಹೊರತು ಅನ್ಯಾಯವಾದುದಲ್ಲವೆಂಬದು ನನಗೆ ದೃಢ ನಿಶ್ಚಯವಿದೆ. ಇದು ನ್ಯಾಯವಾದುದೆಂಬದನ್ನು ಲೋಕಸಾಕ್ಷಿಯಾದ ಈಶ್ವರನು ತಿಳಿದು ನನಗೆ

ಸಹಾಯಮಾಡುತ್ತಿರುವದರಿಂದ ನಿಮಗಾರಿಗೂ ಭಯ ಪಡದೆ ನನ್ನ ಕಾರ್ಯ ವನ್ನು ನಡಿಸುತ್ತಿರುವೆನು.

ಈ ಕಾರ್ಯದಿಂದ ಸಂಪಾದಿಸಿದ ಹಣವನ್ನು ನನ್ನ ಸ್ವಂತ ಖರ್ಚಿಗಾಗಿ ಉಪಯೋಗಿಸದೆ ಅನಾಥರ ಉದ್ಧಾರಕ್ಕಾಗಿ ವ್ಯಯ ಮಾಡುತ್ತಿರುವುದನ್ನು ನೀವು ಈ ಮೊದಲೇ ತಿಳಿದಿರಬಹುದು

ಉಳಿದ ವಿಚಾರವು ಹಿಂದಿನಿಂದ. ಇತಿ ಮೋಹನ."

ಮೋಹನನು ಪೋಲೀಸರಿಗೆ ಬೆದರದೆ ಕಾರ್ಯವನ್ನು ಕೊನೆಗಾಣಿಸುವ ನೆಂದು ರಾಯರು ನಿಚ್ಚೈಸಿ, ಹೃದಯದಲ್ಲಿ ತಲ್ಲಣಿಸಿದರು. ಯೋಚಿಸಲೂ ಅವಕಾಶವಿರಲಿಲ್ಲ ಕೊನೆಗೆ ಒಂದು ಯುಕ್ತಿಯು ಹೊಳೆಯಿತು. ಆ ಉಪಾಯದಿಂದ ಸ್ವಲ್ಪ ಅನುಕೂಲವಾದರೂ ಆಗಬಹುದೆಂದು ತಿಳಿದು ಕೆಲವು ಕಾಗದಗಳನ್ನು ಬರೆದು ಸೇವಕನೊಬ್ಬನನ್ನು ಕರೆದು ಅವನ ಕೈಯಲ್ಲಿ ಇತ್ತು ಕೆಲವು ಪ್ರಮುಖವಾದ ಸ್ಥಳಗಳನ್ನು ತಿಳಿಸಿ ಆ ಸ್ಥಳಗಳಲ್ಲಿ ಹಸುರುಬಣ್ಣದ ದೊಡ್ಡ ದೊಡ್ಡದಾದ ಆ ಕಾಗದಗಳನ್ನು ಅಂಟಿಸಲು ಅಪ್ಪಣೆ ಮಾಡಿದರು.

ಸೇವಕನು ರಾಯರು ಹೇಳಿದಂತೆ ಅಲ್ಲಲ್ಲಿ ಕಾಗದಗಳನ್ನು ಅಂಟಿಸಿ ಬಂದನು.

+ + + +

ಇತ್ತ ಯಮುನಾಪುರಿಯ ರಾಜಮಾರ್ಗದಲ್ಲಿರುವ ಒಂದು ಎರಡಂತ ಸ್ತಿನ ಮನೆಯಲ್ಲಿ ಸುಂದರ ನವತರುಣರಿಬ್ಬರು ಕುಳಿತುಕೊಂಡು ಮಾತ ನಾಡುತ್ತಿದ್ದರು.

ಇವರಲ್ಲಿ ಒಬ್ಬನು ಕಥಾನಾಯಕನಾದ ಮೋಹನ. ಇನ್ನೊಬ್ಬನು ಮೋಹನನ ಪ್ರಿಯಸ್ನೇಹಿತ ಮದನ.

ಸ್ವಲ್ಪ ಹೊತ್ತಿನಲ್ಲಿಯೇ ಇನ್ನೊಬ್ಬ ತರುಣ ಯುವಕನು ಅಲ್ಲಿಗೆ ತ್ವರೆ ಯಿಂದ ಬಂದನು.

ಮೋಹನ—ಏನು ಪ್ರಿಯನಾಥ? ವಿಶೇಷವೇನು?

ಪ್ರಿಯನಾಥ-ಗೋವಿಂದರಾಯರು ಬೆಳಿಗ್ಗೆ ನಿನ್ನ ಕಾಗದವನ್ನು ನೋಡಿ ಸ್ವಲ್ಪ ಆಲೋಚನೆಯಿಟ್ಟು ಕೆಲಸ ಮಾಡುತ್ತಿರುವರೆಂದು ತೋರುತ್ತದೆ.

ಮೋಹನ—ಅದೇನು?

ಪ್ರಿಯನಾಥ—ಕೆಲವು ಸ್ಥಳಗಳಲ್ಲಿ ದೊಡ್ಡ ದೊಡ್ಡ ಹಸುರು ಬಣ್ಣದ ಕಾಗದಗಳನ್ನು ಅಂಟಿಸಿರುವರು. ಅದರಲ್ಲಿ "ಮೋಹನ? ನಿನ್ನ ಇಚ್ಛೆ ಇದ್ದಂತೆ ಹಣವನ್ನು ವಿನಿಯೋಗಿಸಲು ಇಚ್ಛಿಸಿರುವೆನು. ಅದಕ್ಕಾಗಿ ನೀನೇನೂ ಪ್ರಯತ್ನಿಸಬೇಕಾಗಿಲ್ಲ.

ನನ್ನ ಮಾತಿನ ಸತ್ಯಸ್ಥಿತಿಯನ್ನು ಇನ್ನೂ ಎರಡು ಮೂರು ದಿನಗಳೊಳಗೆ ನೀನೇ ನೋಡುವಿ." ಈ ರೀತಿ ಬರೆದಿದೆ.

ಮದನ—ರಾಯರು ಇಷ್ಟು ಬೇಗನೆ ಸನ್ಮಾರ್ಗಕ್ಕೆ ಬಂದಿರುವುದು ಸಂದೇಹಾಸ್ಪದವಾಗಿದೆ.

ಮೋಹನ—ಸಂದೇಹವೇನು? ನಮ್ಮನ್ನು ಮೋಸ ಪಡಿಸುವುದಕ್ಕಾಗಿಯೇ ರಾಯರು ಉದ್ಯುಕ್ತರಾಗಿರುವರು.

ಪ್ರಿಯನಾಥ—ಆದರೂ ನಾವಾಗಿಯೇ ಮುಂದುವರಿಯುವದು ಯುಕ್ತವಾಗಿ ತೋರುವುದಿಲ್ಲ

ಮೋಹನ—ಹಾಗಾದರೆ ಹೀಗೊಂದು ಉಪಾಯವನ್ನು ಹೂಡೋಣ. ಮದನಾ? ನೀನೀಗ ಇನ್‌ಸ್ಪೆಕ್ಟರರ ಮನೆಯ ಸೇವಕನಂತೆ ತೋರ್ಪಡಿಸಿಕೊಂಡು ಗೋವಿಂದರಾಯರ ಮನೆಗೆ ಹೋಗಿ ರಾಯರ ಹತ್ತಿರ "ಇನ್‌ಸ್ಪೆಕ್ಟರರು ನನ್ನನ್ನು ನಿಮ್ಮ ಹತ್ತಿರ ಹೋಗಿ, "ನನ್ನ ಹತ್ತಿರ ಬರುವಂತೆ ಹೇಳಿ ಈಗ ಹಾಗೇಕೆ ಕಾಗದಗಳಲ್ಲಿ ಪ್ರಕಟಿಸಿದ್ದೀರಿ" ಎಂಬುವನ್ನು ಕೇಳಿ ನಿಜಸ್ಥಿತಿಯನ್ನು ತಿಳಿದುಕೊಂಡು ಬಾ ಎಂದು ಹೇಳಿರುತ್ತಾರೆ.' ಎಂದು ಹೇಳು.

ಅನಂತರ ರಾಯರು ಏನನ್ನು ಹೇಳುತ್ತಾರೋ ಅದನ್ನು ಕೇಳಿಕೊಂಡುಬಾ.

ಮದನನು ಮೋಹನನ ಮಾತಿನಂತೆ ಹೊರಟು ಹೋದನು. ಸ್ವಲ್ಪ ಹೊತ್ತಿನಲ್ಲಿಯೇ ಮದನನು ಹಿಂದಿರುಗಿ ಬಂದು "ಕೆಲಸವಾಯಿತು" ಎಂದನು.

ಮೋಹನ—ಏನು?

ಮದನ—ನೀನು ತಿಳಿಸಿದಂತೆ ರಾಯರ ಹತ್ತಿರ ತಿಳಿಸಿದೆನು. "ಈ ಕಾಗದವನ್ನು ಇನ್‌ಸ್ಪೆಕ್ಟರರ ಹತ್ತಿರ ಕೊಡು" ಎಂದು ಒಂದು ಕಾಗದವನ್ನು ಕೊಟ್ಟರು, ಎಂದು ಕಾಗದವನ್ನು ಮೋಹನನ ಕೈಯಲ್ಲಿಟ್ಟನು. ಮೋಹನನು ಓದಿದನು.

"ಎಂ॥ ಇನ್‌ಸ್ಪೆಕ್ಟರರ ಸ॥ ಕ್ಕೆ

ಮೋಹನನನ್ನು ಮೋಸಗೊಳಿಸಲು ಹಾಗೊಂದು ಉಪಾಯವನ್ನು ನಡಿಸಿದೆನು. ಎರಡುದಿನಗಳವರಿಗಾದರೂ ಮೋಹನನು ತಟಸ್ಥನಾದರೆ ಮನೆಯಲ್ಲಿದ್ದುದನ್ನು ಸುರಕ್ಷಿತವಾಗಿ ಇಡಬಹುದು. ಇದರಿಂದಲೂ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ಇದರಿಂದ ಮೋಹನನು ತಟಸ್ಥನಾಗುವನೆಂಬ ನಿಶ್ಚಯವೂ ಇಲ್ಲ. ಆದ್ದರಿಂದ ಯಾವಾಗಲೂ ನಿಮ್ಮ ಸಹಾಯವು ಇದ್ದೇ ತೀರಬೇಕು. ಈದಿನ ರಾತ್ರಿ ಪೋಲೀಸರೊಡನೆ ನೀವು ಬರಬೇಕು. ಮೋಹನನಿಂದ ನನಗೆ ಯಾವ ವಿಧವಾದ ಬಾಧೆಯೂ ಉಂಟಾಗದಂತೆ ನೀವು ಯತ್ನಿಸಿದರೆ ಯತ್ನಕ್ಕೆ ಫಲವನ್ನು ಹೊಂದುವಿರಿ.

ಇತಿ ಗೋವಿಂದರಾಯ."

ಮೋಹನ—ರಾಯರ ನಿಜಸ್ಥಿತಿಯು ಹೊರಪಟ್ಟಿದೆ. ಅವರ ಸಹಾಯಕ್ಕೆ ಇನ್‌ಸ್ಪೆಕ್ಟರರು ಅಲ್ಲಿಗೆ ಬರದೇ ಇರುವಂತೆ ಮಾಡಲು ಯಾರು ಹೋಗುವಿರಿ?

ಪ್ರಿಯನಾಥ—ಈ ಕೆಲಸವು ನನಗಿರಲಿ

ಮದನ—ಪೋಲೀಸರ ಪ್ರತಿಬಂಧವು ತಪ್ಪಿದರೆ ನಾವು ನಿಶ್ಚಯವಾಗಿಯೂ ರಾಯರನ್ನು ಮೋಸಗೊಳಿಸುವೆವು.

ಮೋಹನ—ಈಗ ನಮಗೆ ರಾಯರ ಪ್ರಕಟನೆಯ ಕಾಗದವನ್ನು ನೋಡಿ ಸಂದೇಹ ಬಂದಂತೆ ಇನ್‌ಸ್ಪೆಕ್ಟರರಿಗೂ ಬರಬಹುದು. ಆಗ ಅವರು ರಾಯರಿದ್ದಲ್ಲಿಗೆ ನಿಜಸ್ಥಿತಿಯನ್ನು ತಿಳಿಯಲು ಹೋಗಲೂ ಬಹುದು. ಆಗ ನಮ್ಮೀ ಗುಟ್ಟು ರಟ್ಟಾದೀತು. ಆದ್ದರಿಂದ ಮದನಾ? ನೀನೀಗ ರಾಯರು ಕಳುಹಿಸಿದ ಸೇವಕನಂತೆ ನಟಿಸಿ ಇನ್‌ಸ್ಪೆಕ್ಟರರ ಹತ್ತಿರ ರಾಯರು ಕಳುಹಿಸಿದ ಈ ಕಾಗದವನ್ನು ಕೊಟ್ಟು ಬಾ.॥........॥ಎಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ಉದ್ಯುಕ್ತರಾದರು ........

ಎಂದಿನಂತೆ ಈ ದಿನ ಸಾಯಂಕಾಲ ಐದು ಘಂಟೆಯ ಸಮಯದಲ್ಲಿ ಇನ್‌ಸ್ಪೆಕ್ಟರ್ ರಘುರಾಮರವರು ವಾಯುಸಂಚಾರಕ್ಕೆ ಪೋಷಾಕನ್ನು ಧರಿಸಿ ಹೊರಗೆ ಹೊರಟರು. ದಾರಿಯಲ್ಲಿಯೇ ಇದ್ದ ಪೋಲೀಸ್ ಸ್ಟೇಷ

ನ್ನಿಗೆ ಹೋಗಿ "ಈದಿನ ರಾತ್ರಿ ಒಂದು ಕೆಲಸವಿದೆ. ಇಪ್ಪತ್ತು ಜನ ಪೋಲಿ ಸರು ಸಿದ್ಧರಾಗಿರಬೇಕು. ಆ ಸಮಯಕ್ಕೆ ನಾನು ಬರುವೆನು. ನನ್ನ ಅಪ್ಪಣೆಯು ಹೊರತು ಯಾರೂ ಇಲ್ಲಿಂದ ಹೊರಗೆ ಹೊರಡಲಾಗದು" ಎಂದು ಆಜ್ಞೆಮಾಡಿ ಮುಂದೆ ಹೊರಟು ಪಟ್ಟಣದ ಹೊರಗೆ ಇರುವ ಒಂದು ಮೈದಾನಕ್ಕೆ ಹೋಗಿ ವಿಶ್ರಾಂತಿಗಾಗಿ ಅಲ್ಲಿ ಒಂದೆಡೆಯಲ್ಲಿ ಕುಳಿತರು. ಏಕಾಕಿಯಾಗಿ ಕುಳಿತಿರುವಾಗ ಇಲ್ಲದ ಸಲ್ಲದ ಆಲೋಚನೆಯುಂಟಾಗುವುದು ಎಲ್ಲರಿಗೂ ಸ್ವಾಭಾವಿಕವಷ್ಟೆ? ಅದರಂತೆಯೇ ಇನ್‌ಸ್ಪೆಕ್ಟರರು ಯೋಚಿಸುತ್ತಿದ್ದರು. "ಗೋವಿಂದರಾಯರ ಕಾರ್ಯದಲ್ಲಿ ಏನೂ ಕಷ್ಟವಿಲ್ಲದೆ ನನಗೆ ದ್ರವ್ಯ ಸಂಪಾದನೆಯೂ ಆಗುವುದು. ರಾಯರ ಪ್ರಕಟನೆಯ ಕಾಗದದಿಂದ ಮೋಹನನು ಖಂಡಿತವಾಗಿಯೂ ಮೋಸಹೊಂದುವನು.

ಮೋಹನನು ಮೋಸದಿಂದ ಎಚ್ಚರವಾಗುವುದರೊಳಗೆ ರಾಯರು ಇದ್ದದ್ದನ್ನು ಭದ್ರಗೊಳಿಸುವರು. ರಾಯರು ಮೊದಲೇ ಮಾತುಕೊಟ್ಟಂತೆ ನನ್ನನ್ನು ಪುರಸ್ಕರಿಸುವರು. ಆಯಾಸವಿಲ್ಲದೆ ಕೈ ಬೆಚ್ಚಗಾಗುವವುದು ನನ್ನ ಪುಣ್ಯೋದಯವೇ ಸರಿ. ಅದಕ್ಕಾಗಿ ರಾಯರ ಮನವು ಮೆಚ್ಚುವಂತೆ ನಾನು ತೋರ್ಪಡಿಸಬೇಕು."

ಹೀಗೆಯೇ ಮನೋರಾಜ್ಯದಲ್ಲಿ ಇನ್‌ಸ್ಪೆಕ್ಟರರು ಸುತ್ತುತ್ತಿರಲು ಸೂರ್ಯನಸ್ತಂಗತನಾದುದು ತಿಳಿಯಲಿಲ್ಲ.

ವಾಯುಸೇವನೆಗೆ ಬಂದಿದ್ದ ಪಟ್ಟಣಿಗರಲ್ಲಿ ಒಬ್ಬೊಬ್ಬರೇ ಪಟ್ಟಣದ ಕಡೆಗೆ ಹೋಗುತ್ತಿದ್ದರು.

ಸೂರ್ಯನಸ್ತಾಚಲವನ್ನು ಸೇರಿದ್ದನ್ನು ಕಂಡು ಇನ್‌ಸ್ಪೆಕ್ಟರರಿಗೆ ಫಕ್ಕನೆ ತಮ್ಮ ಕಾರ್ಯದ ನೆನಪಾಯಿತು.

ಕೂಡಲೆ ಎದ್ದು ವೇಗವಾಗಿ ಪಟ್ಟಣದ ಕಡೆಗೆ ಹೊರಟರು. ಸ್ವಲ್ಪ ದೂರದಲ್ಲಿ ಇನ್‌ಸ್ಪೆಕ್ಟರರ ಹಿಂದೆ ಒಂದು ಮೋಟಾರ್ ಕಾರು ಬರುತ್ತಿದ್ದಿತು.

ಇನ್‌ಸ್ಪೆಕ್ಟರರನ್ನು ನೋಡಿ ಮೋಟಾರ ಮೆಲ್ಲಗೆ ಬಂದು ಅವರ ಬಳಿಯಲ್ಲಿ ನಿಂತಿತು. ಅದು ಬಾಡಿಗೆ ಕಾರೆಂದು ತಿಳಿದು, ಕೂಡಲೆ ತಮ್ಮ ಕಾರ್ಯಕ್ಕೆ ಹೋಗಬೇಕಾದುದರಿಂದ ಇನ್‌ಸ್ಪೆಕ್ಟರರು ಡ್ರೈವರನಿಗೆ ಹೇಳಿ

ಮೋಟಾರನ್ನು ಹತ್ತಿ ಪೋಲೀಸ್‌ಸ್ಟೇಷನ್ನಿಗೆ ಬಿಡಲು ಸೂಚಿಸಿದರು ಮೋಟಾರು ವೇಗವಾಗಿ ಹೊರಟು ಅಲ್ಲಲ್ಲಿ ಸುತ್ತಿ ಒಂದು ಮನೆಯ ಹತ್ತಿರ ಬಂದು ನಿಂತಿತು. ಇನ್‌ಸ್ಪೆಕ್ಟರರಿಗೆ ತಮ್ಮ ಯೋಚನೆಯಿಂದಲೂ, ಮೋಟಾರಿನ ವೇಗದಿಂದಲೂ, ರಾತ್ರಿಯ ಕತ್ತಲೆಯಿಂದಲೂ ಮೋಟಾರು ನಿಂತ ಸ್ಥಳವು ಫಕ್ಕನೆ ಹೊಳೆಯದೆ "ಇದೇನು? ಇಲ್ಲಿ ಯಾಕೆ ನಿಂತಿತು? ಸ್ಟೇಶನ್ನಿಗೆ ಹೋಗಲಿ. ನನಗೆ ತುಂಬಾ ಕೆಲಸವಿದೆ. ವಿಲಂಬವಾಗುವಂತಿಲ್ಲ. ಹೂ"ಎಂದರು.

ಡ್ರೈವರನು ಇನ್‌ಸ್ಪೆಕ್ಟರರ ಮಾತು ಮುಗಿಯುವದರೊಳಗೆ ಥಟ್ಟನೆ ಎದ್ದು ಬಂದು ಅವರ ಮುಖಕ್ಕೆ ಕರವಸ್ತ್ರವನ್ನಿಟ್ಟು ಒತ್ತಿದನು. ಕರವಸ್ತ್ರಕ್ಕೆ

ಕ್ಲೋರೋಫಾರವಿನ ಸಮ್ಮಿಶ್ರವಿದ್ದುದರಿಂದ ಇನ್‌ಸ್ಪೆಕ್ಟರರು ಪ್ರಜ್ಞೆ ತಪ್ಪಿ ಅಲ್ಲಿಯೇ ಒರಗಿದರು ಇನ್‌ಸ್ಪೆಕ್ಟರರು ತಿರುಗಿ ಎಚ್ಚರವಾದಾಗ ತಮ್ಮ ಮನೆಯ ಹೊರಜಗಲಿಯ ಮೂಲೆಯೊಂದರಲ್ಲಿ ತಾವು ಬಿದ್ದಿರುವದಾಗಿ ತಿಳಿದರು.

ಜೇಬಿನ ಗಡಿಯಾರದಲ್ಲಿ ಆಗಲೇ ಬೆಳಗಿನ ಐದು ಗಂಟೆಯಾಗಿತ್ತು. ತಾವು ಕಳ್ಳನ ಮೋಟಾರನ್ನು ಹತ್ತಿ ಅವನಿಂದ ಮೂರ್ಛೆಗೊಳಿಸಲ್ಪಟ್ಟರೆಂದೂ, ಮೂರ್ಛೆ ಹೊಂದಿದಾಗ ಮನೆಗೆ ತಾವು ಒಯ್ಯಲ್ಪಟ್ಟರೆಂದೂ, ತಾವು ಹೀಗೆ ಮೋಸ ಹೊಂದಿದಾಗ ಗೋವಿಂದರಾಯರೂ ಕಳ್ಳರ ಬಲೆಗೆ ಬಿದ್ದಿರಬಹುದೆಂದೂ ತಿಳಿದುಕೊಂಡರು............

ಇನ್‌ಸ್ಪೆಕ್ಟರರು ಸ್ಮೃತಿತಪ್ಪಿ ಮೋಸಹೋದಂತೆ ಇತ್ತ ರಾಯರು ಕೂಡ ಅದೇ ದಿನ ಕಳ್ಳರಿಂದ ಪರಾಜಿತರಾಗಿದ್ದರು. ಆ ರಾತ್ರಿ ರಾಯರು ಇನ್‌ಸ್ಪೆಕ್ಟರರ ಬರುವಿಕೆಯನ್ನು ನಿರೀಕ್ಷಿಸುತ್ತಾ ಆಗಾಗ ಮನೆಯಿಂದ ಹೊರಗೆ ಬಂದು ನೋಡುತ್ತಿದ್ದರು. ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ರಾಯರ ಮನೆಯ ಮುಂಭಾಗದಲ್ಲೊಂದು ಮೋಟಾರು ಬಂದು ನಿಂತಿತು. ಮೋಟಾರು ಯಾರದ್ದೆಂದು ತಿಳಿಯಲು ರಾಯರು ಹೊರಗೆ ಬಂದು ನೋಡುತ್ತಿದ್ದಾಗ ಮೋಟಾರಿನಿಂದ ಥಟ್ಟನೆ ಇಬ್ಬರು ಇಳಿದು ರಾಯರ ಬಳಿಗೆ ಬಂದು ರಾಯರು ಕೂಗದಂತೆ ಬಾಯನ್ನು ಒತ್ತಿ ಹಿಡಿದು ಅತ್ತಿತ್ತ ಉಲುಕುವುದಕ್ಕೂ ಬಿಡದೆ ರಾಯರನ್ನು ಎತ್ತಿ ತೆಗೆದುಕೊಂಡು ಹೋಗಿ

ಮೋಟಾರಿನಲ್ಲಿ ಕಟ್ಟಿ ಉರುಳಿಸಿದರು.

ಒಬ್ಬನು ರಾಯರನ್ನು ಕಾಯಲು ಅಲ್ಲಿಯೇ ನಿಂತನು. ಇನ್ನು ಮೂರ ಜನರು ಸೇವಕರು ಯಾರೂ ಅಲ್ಲಿಗೆ ಬರದೇ ಇರುವಂತೆ ನೋಡುತ್ತಿದ್ದರು. ಇನ್ನೊಬ್ಬನು ರಾಯರ ಸೊಂಟದಲ್ಲಿದ್ದ ಬೀಗದ ಕೈಗೊಂಚಲನ್ನು ತೆಗೆದುಕೊಂಡು ರಾಯರ ಆಫೀಸ್‌ಕೋಣೆಗೆ ನುಗ್ಗಿದನು. ಅಲ್ಲಿ ಕುಳಿತು ತೂಕಡಿಸುತ್ತಾ ಕುಳಿತಿದ್ದ ಸೇವಕನ ಮೇಲ್ಬಿದ್ದು ನೆಲಕ್ಕೆ ಕೆಡವಿ ಕೂಗದಂತೆ ಮಾಡಿ ಒಂದು ಮೂಲೆಯಲ್ಲಿ ಉರುಳಿಸಿದನು.

ತನಗೆ ಬೇಕಾದ ವಸ್ತುವನ್ನು ಸುತ್ತಲೂ ಹುಡುಕಿದನು. ಸಿಕ್ಕಲಿಲ್ಲ. ಕೊನೆಗೆ ಸೂಕ್ಷ್ಮವಾಗಿ ನೋಡಲು ಒಂದು ಕುರ್ಚಿಯ ಕೆಳಭಾಗವು ಎಲ್ಲಾ ಕುರ್ಚಿಗಳಿಗಿಂತಲೂ ದಪ್ಪವಾಗಿ ಕಂಡುಬಂದಿತು ಕೂಡಲೆ ಅದನ್ನು ಹೆಚ್ಚು ರೀತಿಯಿಂದ ಪರೀಕ್ಷಿಸಿ ಮೂಲೆಯೊಂದರಲ್ಲಿ ಸಣ್ಣ ತೂತನ್ನು ನೋಡಿ ಅದರಲ್ಲಿ ಸಣ್ಣದಾದ ಕೈಯ್ಯೊಂದನ್ನು ಹಾಕಿ ತಿರುಗಿಸಿ, ಎಳೆದೊಡನೆ ಚಿಕ್ಕ ಹಲಿಗೆಯೊಂದು ಹೊರಬಂದಿತು. ಅದರಲ್ಲಿ ಕೆಲವು ನೋಟುಗಳ ಕಟ್ಟುಗಳೂ ಬೆಲೆಬಾಳುವ ಮುತ್ತು, ರತ್ನಗಳೂ ಅಡಕವಾಗಿದ್ದವು. ಆ ಪುರುಷನು ಅಷ್ಟನ್ನೂ ಜೇಬಿಗೆ ಸೇರಿಸಿ, ಆ ನೋಟುಗಳ ನಂಬರ್ ಪುಸ್ತಕವನ್ನು ತೆಗೆದುಕೊಂಡು ಹೊರಗೆ ಹಾರಿ ಮೋಟಾರನ್ನು ಸೇರಿದನು. ಒಡನೆ ರಾಯರನ್ನು ಕೆಳಗೆ ಮಲಗಿಸಿ ಕಟ್ಟನ್ನು ಬಿಚ್ಚಿದನು. ಕ್ಷಣದೊಳಗೆ ಮೋಟಾರು ಎತ್ತೋ ಹೊರಟುಹೋಯಿತು.

ಕಟ್ಟನ್ನು ಬಿಚ್ಚಿದ ಮೇಲೆ ರಾಯರು ಕೂಗಲಾರಂಭಿಸಿದರು. ಅಲ್ಲಲ್ಲಿದ್ದ ಸೇವಕರು ಓಡಿ ಬಂದರು. ರಾಯರು ಎಲ್ಲಕ್ಕೂ ಮೊದಲು ಆಫೀಸ್ ರೂಮಿಗೆ ಓಡಿದರು ಅಲ್ಲೇನಿದೆ? ಎಲ್ಲವೂ ಮಾಯವಾಗಿತ್ತು. ರಾಯರ ಬಾಯಿಂದ ಮಾತೇ ಹೊರಡಲಿಲ್ಲ. ರಾಯರು ಸ್ವಲ್ಪ ಎಚ್ಚತ್ತು ತಮ್ಮ ಸ್ವಂತ ಮೋಟಾರಿನಲ್ಲಿ ಕೆಲವು ಸೇವಕರನ್ನಿಟ್ಟು ಕಳ್ಳರನ್ನು ಹಿಂಬಾಲಿಸಲು ಹೇಳಿದರು.

ಪೋಲೀಸರ ಸಹಾಯವು ಬರುವದೆಂಬ ನಿರೀಕ್ಷಣೆಯಿಂದ ಸೇವಕರಾರಿಗೂ ಮೊದಲು ಸಿದ್ಧರಾಗುವಂತೆ ರಾಯರು ತಿಳಿಸಿರಲಿಲ್ಲ. ತಮ್ಮ ಬುದ್ಧಿ ಚಾತುರ್ಯಕ್ಕೆ ಬೈದುಕೊಂಡರು. ಕಳ್ಳರನ್ನು ಹಿಡಿಯಲು ಹೋದ ಮೋಟಾರು

ನಿರಾಶೆಯಿಂದ ಹಿಂದಿರುಗಿತು.

ಇನ್‌ಸ್ಪೆಕ್ಟರರನ್ನು ಕರೆಯಲು ಹೋದ ಸೇವಕನು ಹಿಂದಿರುಗಿ ಬಂದು "ಅವರಿನ್ನೂ ಮನೆಗೇ ಬಂದಿಲ್ಲ"ವೆಂದನು.

ರಾಯರಿಗೆ ಚಿಂತೆಯಿಂದಲೇ ಬೆಳಗಾಯಿತು.

ಪ್ರಾತಃಕಾಲ ಏಳು ಘಂಟೆಯ ಹೊತ್ತಿಗೆ ಇನ್‌ಸ್ಪೆಕ್ಟರರು ರಾಯರ ಮನೆಗೆ ಬಂದರು.

ರಾಯರು—ಮೋಹನನು ತನ್ನ ಕಾರ್ಯವನ್ನು ನಡಿಸಿಯೇ ಬಿಟ್ಟನು. ನನ್ನ ಯುಕ್ತಿಯು ನಿಷ್ಫಲವಾಯಿತು, ಮೋಸವು ಬಯಲಾಯಿತು ಧನವೂ ಹೋಯಿತು. ಮರ್ಯಾದೆಯೂ ಹೋಯಿತು. ನನ್ನ ಸರ್ವಸ್ವವೂ ನಷ್ಟವಾಯಿತು. ಮೋಹನನು ಮೋಸಗೊಳಿಸಿದ್ದೇನು ಆಶ್ಚರ್ಯ? ರಕ್ಷಿಸಲು ಒಪ್ಪಿದ ನೀವೇ ಮೋಸಮಾಡಿದಿರಿ. ಮನೆಯಲ್ಲಿದ್ದರೆ ಹೇಳಿಕಳುಹಿಸುವೆನೆಂದು ನೀವು ರಾತ್ರಿ ಮನೆಯಲ್ಲಿಯೂ ಇರಲಿಲ್ಲ ನೀವೇನು ಮಾಡೀರಿ. ನನ್ನ ಅದೃಷ್ಟವು ಚೆನ್ನಾಗಿಲ್ಲ."

ಈ ರೀತಿಯಾಗಿ ದುಃಖಯುಕ್ತವಾಗಿಯೂ ಮಾರ್ಮಿಕವಾಗಿಯೂ ಹೇಳಿದ ರಾಯರ ಮಾತಿನಿಂದ ವ್ಯಥೆಪಟ್ಟು ಇನ್‌ಸ್ಪೆಕ್ಟರರು ತಮಗಾದ ಸ್ಥಿತಿಯನ್ನೆಲ್ಲಾ ವಿವರಿಸಿದರು.

ರಾಯರು—ನೀವು ಇನ್ನಾದರೂ ಕಳ್ಳರನ್ನು ಹಿಡಿಯಲು ಯತ್ನಿಸಿರಿ! ನಿಮ್ಮಿಂದ ಸಾಧ್ಯವಾಗದೆ ಹೋದರೆ ಪ್ರಸಿದ್ಧ ಪತ್ತೆದಾರಿಗಳಿಗಾಗಲಿ ತಿಳಿಸಬೇಕು.

ಇನ್‌ಸ್ಪೆಕ್ಟರರು "ಆಗಬಹುದು" ಎಂದು ಹೇಳಿ ಹೊರಟು ಹೋದರು.

ಸ್ಟೇಷನ್ನಿಗೆ ಬಂದು "ಕಳ್ಳರ ಹಾವಳಿಯು ದಿನೇದಿನೇ ಹೆಚ್ಚುತ್ತಲಿದೆ. ಈ ಪಟ್ಟಣದಲ್ಲೀಗ ವಾಸವಿರುವರು. ನೀವೆಲ್ಲಲ್ಲಿ ಗಸ್ತು ತಿರುಗುವಾಗ ಸೂಕ್ಷ್ಮವಾಗಿ ಪರೀಕ್ಷಿಸಬೇಕು ಅವರಿರುವ ಸ್ಥಳವನ್ನು ಹುಡುಕಿದವರಿಗೆ ಸರಿಯಾದ ಬಹುಮಾನವು ಸಿಗುವುದು" ಎಂದರು.

ಇತ್ತ ಮೋಹನನು ರಾಯರ ಮನೆಯಿಂದ ತಂದಿರುವ ಹಣವನ್ನು ವಿನಿಯೋಗಿಸಲು ಮಿತ್ರರೊಂದಿಗೆ ಆಲೋಚಿಸುತ್ತಲಿದ್ದನು.

ಮೋಹನ—ಈ ಹಣವನ್ನು ನ್ಯಾಯವಾಗಿ ವಿನಿಯೋಗಿಸಲು ಒಂದು ಸ್ಥಳ ಸಿಕ್ಕಿದೆ. ಸರೋಜಗ್ರಾಮದಲ್ಲೀವರ್ಷ ಮಳೆಯಿಲ್ಲದೆ ಬೆಳೆಯಾಗಲಿಲ್ಲ. ಬಡಜನರು ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದೆ ಮನೆಮನೆಗೆ ಊರಿಂದೂರಿಗೆ ಸುತ್ತುತ್ತಿರುವರು. ಇಂತಹ ಸ್ಥಿತಿಯಲ್ಲಿಯೂ ಸರ್ಕಾರದವರು ಕಂದಾಯವನ್ನು ಕೊಡಲೇ ಬೇಕೆಂದು ಪೀಡಿಸುತ್ತಾ ಅನಾಥರನ್ನು ಎಳೆದೊಯ್ಯುತ್ತಿರುವರು. ಶ್ರೀಮಂತರೊಬ್ಬರೂ ಆ ದೀನರಿಗೆ ಸಹಾಯವನ್ನು ಮಾಡಲು ಮುಂದರಿಯುವುದಿಲ್ಲ.

ಆ ಬಡಜನರ ಈಗಿನ ಅವಸ್ಥೆಯಾದರೋ ಕರುಣಾಜನಕವಾಗಿದೆ. ಆ ಬಡಜನಗಳನ್ನು ಈಗ ಈ ಕಷ್ಟದಿಂದ ರಕ್ಷಿಸಲು ಈ ಹಣವು ಸಾಕಾಗಬಹುದು. ಪ್ರಿಯನಾಥಾ? ನೀನಿದನ್ನು ಒಯ್ದು ಸರೋಜಗ್ರಾಮದಲ್ಲಿ ಅಂತಹ ಬಡಜನರನ್ನು ವಿಮರ್ಶೆಯಿಂದ ತಿಳಿದು ಅವರಿಗಿದನ್ನು ವಿನಿಯೋಗಿಸಿ ಬಾ.

ಪ್ರಿಯನಾಥನು ಹೊರಟು ಹೋದನು. ಚೆನ್ನಾಗಿ ವಿಚಾರಿಸಿ, ಅವರವರ ಕಷ್ಟಗಳಿಗನುಕೂಲವಾಗಿ ಹಣವನ್ನು ವಿನಿಯೋಗಿಸಿದನು.

ಬಡಜನರೆಲ್ಲರೂ ಆನಂದದಿಂದ "ಇಂತಹ ದುರ್ಭಿಕ್ಷಕಾಲದಲ್ಲಿ ಈ ರೀತಿಯಾದ ಸಹಾಯವನ್ನು ಮಾಡಿ ರಕ್ಷಿಸಿದ ಮಹಾಪುರುಷನಿಗೆ ದೇವರು ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕಾಪಾಡಲಿ" ಎಂದು ಕುಣಿದು ಕುಣಿದು ಹರಸುತ್ತಿದ್ದರು.

ಇದೇ ದಿನದ ಯಮುನಾಪುರಿಯ ವರ್ತಮಾನ ಪತ್ರಿಕೆಗಳಲ್ಲಿ ಸರೋಜಗ್ರಾಮದ ದುರ್ಭಿಕ್ಷೆಯ ಕಷ್ಟವೂ ಸರ್ಕಾರದ ಪೀಡನೆಯೂ, ಮೋಹನನ ಉಪಕಾರವೂ ವಿಸ್ತಾರವಾಗಿ ಪ್ರಕಟಿಸಲ್ಪಟ್ಟಿತು.

ಯಮುನಾಪುರಿಯಲ್ಲಿ ದಿನವೂ ಮೋಹನನ ಉಪಟಳವೂ ಐಶ್ವರ್ಯವಂತರಿಗೆ ಅಧಿಕವಾಗತೊಡಗಿತು. ನೂರಾರು ಶ್ರೀಮಂತರ ಧನವು ಮೋಹನನಧೀನವಾಯಿತು. ಕೋಟ್ಯಂತರ ಬಡಜನಗಳು ಮೋಹನನಿಂದ ಉದ್ಧರಿಸಲ್ಪಟ್ಟರು. ಯಮುನಾಪುರಿಯ ಅಧಿಕಾರಿವರ್ಗವು ಬೆದರಿ ಬೆಂಡಾಯಿತು.

---

## ದ್ವಿತೀಯ ಗುಚ್ಛ.

ಯಮುನಾಪುರಿಯ ಅಧಿಕಾರಿಗಳಿಂದ ಮೋಹನನನ್ನು ಹಿಡಿಯಲಸಾಧ್ಯವಾದುದರಿಂದ ಸುವರ್ಣನಗರದಲ್ಲಿ ಪ್ರಸಿದ್ಧ ಪತ್ತೇದಾರಿಯಾದ ರಾಕಾಚಂದ್ರನಿಗೆ ಕೂಡಲೆ ಬರಲು ತಂತಿಯು ಹೋಯಿತು.

"ಸದ್ಯದಲ್ಲಿಯೇ ಬರುವೆನು" ಎಂದು ರಾಕಾಚಂದ್ರನಿಂದ ಉತ್ತರವೂ ಬಂದಿತು.

"ಇನ್ನೇನು ಮೋಹನನು ಸಿಕ್ಕಿದನು. ರಾಕಾಚಂದ್ರನ ಮುಂದೆ ಇವನದ್ದೇನೂ ನಡೆಯಲಾರದು." ಎಂದು ಮುಂತಾಗಿ ಅಧಿಕಾರಿ ವರ್ಗದವರೂ, ಶ್ರೀಮಂತ ಜನರೂ ಹೇಳುತ್ತಿದ್ದರು.

ಬಡಜನರು ಅದಕ್ಕೆ ವಿರುದ್ಧವಾಗಿ "ಬಡತನದ ಕಷ್ಟದಿಂದ ರಕ್ಷಿಸಿದ ಈ ಮಹಾತ್ಮನು ಜಯಶಾಲಿಯಾಗಲಿ" ಎಂದುಕೊಳ್ಳುತ್ತಿದ್ದರು.

ರಾಕಾಚಂದ್ರನು ಯಮುನಾಪುರಿಗೆ ಬರುವ ವರ್ತಮಾನವು ಮೋಹನನಿಗೂ ತಿಳಿಯಿತು. "ಸದ್ಯದಲ್ಲಿಯೇ ಬರುವೆನು" ಎಂದು ಆತನು ತಿಳಿಸಿದುದರಿಂದ ಬೇರೆ ಯಾವ ಕಾರ್ಯದಲ್ಲಿಯೋ ಆಸಕ್ತನಾಗಿ ಕೂಡಲೇ ಬರಲಾರನೆಂದೂಹಿಸಿದನು. ಮೋಹನನ ಎಲ್ಲಾ ಸಂಗಡಿಗರೂ ಒಟ್ಟು ಸೇರಿದರು.

ರಾಕಾಚಂದ್ರನು ಸುವರ್ಣನಗರದಿಂದ ಯಮುನಾಪುರಿಗೆ ಬರುವುದಕ್ಕೆ ಮುಂಚೆಯೆ ತಾವೆಲ್ಲರೂ ರಾಕಾಚಂದ್ರನಿರುವಲ್ಲಿಗೇ ಹೋಗಬೇಕೆಂದು ನಿರ್ಧರಿಸಿದರು. ಅಲ್ಲಿ ಗುಟ್ಟಾಗಿ ವ್ಯವಹರಿಸುವುದಕ್ಕಾಗಿ ಮೋಹನನು ಒಂದು ಭಾಷೆಯನ್ನು ನಿರ್ಮಿಸಿ ಅದನ್ನು ತನ್ನವರಿಗೆ ಹೇಳಿದನು. ಈ ಪದ್ಯವು ಸಂಗ್ರಹಿಸಲ್ಪಟ್ಟು ಇದೆ.

"ಅಮೌ ಕಪೌ ಗಥೌ (ಚಾಪಿ) | ಜಇೌ ಚಜೌ ಟತ್ರೌ ಕ್ಷಣೌ ||
ಡದೌ ಣನೌ ಬಭೌ (ಚಾಪಿ) | ಲಯೌ ರವೌ ಸಷೌ ಹಶೌ ||೧||

ಅರ್ಥ= ಅಮೌ--ಅಕಾರವನ್ನು ಪಯೋಗಿಸುವಲ್ಲಿ ಮಕಾರವನ್ನೂ, ಆಕಾರಕ್ಕೆ ಮಾಕಾರವನ್ನೂ, ಇಕಾರಕ್ಕೆ ಮಿಕಾರವನ್ನೂ, ಈಕಾರಕ್ಕೆ ಮೀಕಾರವನ್ನೂ, ಉಕಾರಕ್ಕೆ ಮುಕಾರವನ್ನೂ, ಊಕಾರಕ್ಕೆ ಮೂಕಾರವನ್ನೂ,

ಉಪಯೋಗಿಸಬೇಕು. ಇತ್ಯಾದಿ.

ಹೀಗೆ ಮಕಾರಕ್ಕೆ ಬದಲಾಗಿ ಅಕಾರವನ್ನೂ ಇತ್ಯಾದಿ ಉಪಯೋಗಿಸಬೇಕು.

ಹೀಗೆ ಕಪೌ—ಕಕಾರಕ್ಕೆ ಪಕಾರವನ್ನೂ, ಪಕಾರಕ್ಕೆ ಕಕಾರವನ್ನೂ, ಶಾಕಾರಕ್ಕೆ ಷಾಕಾರವನ್ನೂ, ಷಾಕಾರಕ್ಕೆ ಶಾಕಾರವನ್ನೂ, ಖಕಾರಕ್ಕೆ ಫಕಾರವನ್ನೂ ಫಕಾರಕ್ಕೆ ಖಕಾರವನ್ನೂ ಇತ್ಯಾದಿಯಾಗಿ ಉಪಯೋಗಿಸಬೇಕು. ಈ ಮೇರೆಗೆ ಉಳಿದ ಅಕ್ಷರಗಳಲ್ಲಿಯೂ ತಿಳಿಯಬೇಕು.

ಸುವರ್ಣನಗರದಲ್ಲಿ ಇದರಿಂದಲೇ ಗುಪ್ತವ್ಯವಹಾರವನ್ನು ನಡಿಸಬೇಕು.

ಮೋಹನನೂ ಅವನ ಸಂಗಡಿಗರೂ ತಮಗೆ ಆವಶ್ಯಕವಾದ ಸಾಮಾನುಗಳನ್ನು ತೆಗೆದುಕೊಂಡು ಸುವರ್ಣನಗರಕ್ಕೆ ಹೊರಟುಹೋದರು.

† | †

ಯಮುನಾಪುರಿಯಂತೆ ಆ ಕಾಲದಲ್ಲಿ ಸವರ್ಣನಗರವೂ ಪ್ರಸಿದ್ಧ ಪಟ್ಟಣವಾಗಿ ಮೆರೆಯುತ್ತಲಿತ್ತು. ದೊಡ್ಡದೊಡ್ಡ ಬೀದಿಗಳಲ್ಲಿ ಮೋಡವನ್ನು ಮುಟ್ಟುವ ಉಪ್ಪರಿಗೆ ಮನೆಗಳು ರಾರಾಜಿಸುತ್ತಲಿದ್ದವು.

ಇಂತಹ ಒಂದು ಭವನದಲ್ಲಿ ಪ್ರಸಿದ್ಧ ಪತ್ತೇದಾರಿಯಾದ ರಾಕಾಚಂದ್ರನು ತನ್ನ ಆಫೀಸ್ ಕೋಣೆಯಲ್ಲಿ ಪತ್ರಿಕೆಯೊಂದನ್ನೋದುತ್ತಾ ಕುಳಿತಿದ್ದನು. ಅವನು ಕುಳಿತ ಕೋಣೆಯು ಮೇಲುಪ್ಪರಿಗೆಯ ಒಂದು ಭಾಗದಲ್ಲಿತ್ತು. ಅಲ್ಲಿಯೇ ಒಂದೆಡೆಯಲ್ಲಿ ಟೆಲಿಫೋನ್ ಯಂತ್ರವಿದ್ದಿತ್ತು. ಮೇಜೊಂದರ ಮೇಲೆ ನಾನಾ ಪ್ರದೇಶಗಳ ದಿನಚರಿ ಪತ್ರಿಕೆಗಳೂ, ವಾರಪತ್ರಿಕೆಗಳೂ, ಪಕ್ಷಪತ್ರಿಕೆಗಳೂ, ಮಾಸಪತ್ರಿಕೆಗಳೂ ಇದ್ದವು.

ರಾಕಾಚಂದ್ರನು ಸುವರ್ಣನಗರದ ಆ ದಿನದ ಪತ್ರಿಕೆಯನ್ನೋದಿ ಮುಗಿಸಿ ಯಮುನಾಪುರಿಯದೊಂದು ಪತ್ರಿಕೆಯನ್ನೋದಲು ಆರಂಭಿಸಿದನು. ಅದರಲ್ಲಿ ಮೋಹನನು ಯಮುನಾಪುರಿಯಲ್ಲಿ ನಡೆಸಿದ ವಿಚಾರಗಳೇ ಹೆಚ್ಚಾಗಿ ತುಂಬಿದ್ದವು. ಆ ಪತ್ರಿಕೆಯನ್ನು ಸಂಪೂರ್ಣವಾಗಿ ಓದಿದನು.

ಸೇವಕನೊಬ್ಬನು ಅಲ್ಲಿಗೆ ಬಂದು ಕೆಲವು ಕಾಗದಗಳನ್ನು ಮೇಜಿನ ಮೇಲಿಟ್ಟು ಹೊರಟು ಹೋದನು. ರಾಕಾಚಂದ್ರನು ಕಾಗದಗಳನ್ನೊಂದೊಂದಾಗಿ ಓದಿದನು. ಒಂದು ಕಾಗದದಲ್ಲಿ ಹೀಗೆ ಇತ್ತು—

"ಮ|ರಾ|ರಾ ಪತ್ತೆದಾರಿಗಳ ಸನ್ನಿಧಾನದಲ್ಲಿ.

ತಮ್ಮ ಹತ್ತಿರ ಸ್ವಲ್ಪ ಮಾತನಾಡುವ ಅವಶ್ಯಕತೆ ಇದೆ. ಮಧ್ಯಾಹ್ನ ನಾಲ್ಕು ಘಂಟೆಯ ಹೊತ್ತಿಗೆ ಸರಿಯಾಗಿ ತಮ್ಮ ಸನ್ನಿಧಾನಕ್ಕೆ ಬರುವೆನು. ಇತಿ

ರಘುರಾಮನ್.

ಪೋಲೀಸ್ ಇನ್‌ಸ್ಪೆಕ್ಟರ್. ಯಮುನಾಪುರಿ."

ರಾಕಾಚಂದ್ರನು ಮನಸ್ಸಿನಲ್ಲಿ "ಇವರೇಕೆ ಯಮುನಾಪುರಿಯಿಂದ ಇಲ್ಲಿಗೆ ಬಂದಿರುವರು! ನಾನು ಬರಲು ವರ್ತಮಾನವನ್ನು ಕೊಟ್ಟ ಮೇಲೆ ಪುನಃ ಏನು ವಿಶೇಷ? "ಸದ್ಯದಲ್ಲಿಯೇ ಬರುವೆನು" ಎಂದಿರುವದನ್ನು ನೋಡಿ ನಾನು ಕೂಡಲೆ ಬರುವದಿಲ್ಲವೆಂದಾಲೋಚಿಸಿ ನನ್ನನ್ನು ಕರೆಯಲು ಬಂದಿರ ಬಹುದೇ? ಏನಾದರೂ ಇರಲಿ." ಎಂದು ಆಲೋಚಿಸಿ ಟೆಲಿಫೋನಿನಿಂದ ಸುಖಾನಂದನೆಂಬೊಬ್ಬ ತನ್ನ ಮಿತ್ರನಿಗೆ "ಮಧ್ಯಾಹ್ನ ಮೂರು ಘಂಟೆಗೆ ಇಲ್ಲಿಗೆ ಬಾ. ಸ್ವಲ್ಪ ಕೆಲಸವಿದೆ"ಎಂದು ತಿಳಿಸಿದನು. "ಆಗಲಿ" ಎಂದುತ್ತರ ಬಂದಿತು.

ಮಧ್ಯಾಹ್ನ ಮೂರು ಘಂಟೆಯ ಹೊತ್ತಿನಲ್ಲಿ ಸುಖಾನಂದನು ರಾಕಾ ಚಂದ್ರನ ಮನೆಗೆ ಬಂದನು.

ಸುಖಾನಂದನು ರಾಕಾಚಂದ್ರನೊಡನೆ ಬಾಲ್ಯದಿಂದಲೂ ಜೊತೆ ಯಾಗಿಯೇ ವಿದ್ಯಾಭ್ಯಾಸ ಮಾಡಿ ನಿಪುಣನಾಗಿ ರಾಕಾಚಂದ್ರನಂತೆ ಪತ್ತೇ ದಾರಿ ಉದ್ಯೋಗಕ್ಕೆ ಸೇರಿ ಸುಪ್ರಸಿದ್ಧನಾಗಿದ್ದನು. ಬಾಲ್ಯಸ್ನೇಹಿತರಾದ ಇಬ್ಬರೂ ಪ್ರತಿಯೊಂದು ಕಾರ್ಯದಲ್ಲಿಯೂ ಪರಸ್ಪರರ ಸಹಾಯಕರಾಗಿದ್ದರು. ಯಮುನಾಪುರಿಯಿಂದ ರಾಕಾಚಂದ್ರನಿಗೆ ತಂತಿ ಬಂದಾಗ ಸುಖಾನಂದನ ಒಂದು ಕಾರ್ಯದಲ್ಲಿ ಮಗ್ನನಾದುದರಿಂದಲೇ ಯಮುನಾಪುರಿಗೆ ಕೂಡಲೆ ಹೊರಡಲು ರಾಕಾಚಂದ್ರನು ಸಿದ್ಧನಾಗಲಿಲ್ಲ. ಸ್ವಲ್ಪ ಹೊತ್ತಿನವರೆಗೆ ಮಿತ್ರ ರಿಬ್ಬರು ಯಮುನಾಪುರಿಗೆ ಹೋಗತಕ್ಕ ವಿಚಾರದಲ್ಲಿ ಮಾತನಾಡುತ್ತಿದ್ದಾಗ ಮನೆಯ ಮುಂಭಾಗದಲ್ಲೊಂದು ಟ್ಯಾಕ್ಸಿಕಾರು ಬಂದು ನಿಂತಿತು. ಅದ ರಿಂದೊಬ್ಬ ಪುರುಷನು ಇಳಿದು ಬಾಗಿಲಿನಲ್ಲಿದ್ದ ಸೇವಕನಿಂದ ರಾಕಾಚಂದ್ರ ನಿಗೆ ಹೇಳಿ ಕಳುಹಿಸಿ ಅನಂತರ ಸೇವಕನನ್ನನುಸರಿಸಿ ಉಪ್ಪರಿಗೆ ಮೇಲೆ

ಬಂದನು.

ರಾಕಾಚಂದ್ರನು "ಬರುತ್ತಿರುವ ಮನುಷ್ಯನೇ ಯಮುನಾಪುರಿಯ ಇನ್‌ಸ್ಪೆಕ್ಟರ"ಂದು ತಿಳಿದನು. ಈ ಮುಂಚೆ ಎಲ್ಲಿಯೂ ಇನ್‌ಸ್ಪೆಕ್ಟರ್ ರಘು ರಾಮನ್‌ರವರನ್ನು ರಾಕಾಚಂದ್ರನು ನೋಡಿ ಇರಲಿಲ್ಲ.

ರಾಕಾಚಂದ್ರನು ಬಂದ ಯುವಕನನ್ನು ಕುರ್ಚಿಯೊಂದರಲ್ಲಿ ಕುಳಿತು ಕೊಳ್ಳಲು ಹೇಳಿದನು. ಬಂದ ಪುರುಷನು ಕೇಳಿದನು.

ಪುರುಷ—ನನ್ನ ಕಾಗದವು ತಲ್ಪಿತಲ್ಲವೇ?

ರಾಕಾಚಂದ್ರ—ತಲ್ಪಿದೆ, ನೀವೀಗ ಇಲ್ಲಿಗೆ ಬರಲೇನುಕಾರಣವೊ ತಿಳಿಯಲಿಲ್ಲ.

ಪುರುಷ—ಮೋಹನನ ಉಪಟಳವು ಹೆಚ್ಚಾಗುತ್ತಲಿದೆ.

ರಾಕಾಚಂದ್ರ—ತಂತಿಯು ತಲ್ಪಿ ನಾನು ಉತ್ತರವನ್ನು ಕೊಟ್ಟೆನಷ್ಟೆ!

ಪುರುಷ—ಉತ್ತರವು ಬಂದಿತು; ಆದರೆ ನೀವು ವಿಲಂಬ ಮಾಡಿ ಬರುವಂತೆ ತೋರಿದುದರಿಂದ ನಾನೇ ಬಂದೆನು.

ರಾಕಾಚಂದ್ರ—ತಂತಿ ಬಂದಾಗ ನಾನೊಂದು ಕಾರ್ಯದಲ್ಲಿ ನಿರತ ನಾದುದರಿಂದ ವಿಲಂಬವಾಯಿತು. ನಾವಿಬ್ಬರು ಯಾವಾಗ ಹೊರಡುತ್ತೇ ವೆಂದು ಯೋಚಿಸಿ ಹೇಳುತ್ತೇವೆ. ನೀವೆಲ್ಲಿರುವಿರಿ?

ಪುರುಷ:—ಇಲ್ಲಿನ ಪ್ಲಾಸಿಯ ಪೋಲೀಸ್ ಸ್ಟೇಷನ್ನಿನಲ್ಲಿರುವೆನು. ಇವರಾರು?

ರಾಕಾಚಂದ್ರ—ಇವರು ನನ್ನ ಮಿತ್ರರು. ಮತ್ತು ಪ್ರಸಿದ್ಧ ಪತ್ರೀ ದಾರಿಗಳು.

ಪುರುಷನು "ನಮಸ್ಕಾರ"ವೆಂದು ಹೇಳಿ ಅಲ್ಲಿಂದ ಹೊರಟು ಕೆಳಗಿ ಳಿದು ಹೋಗಿ ರಾಕಾಚಂದ್ರನ ಸೇವಕನ ಕೈಯಲ್ಲೊಂದು ಕಾಗದವನ್ನು ಕೊಟ್ಟು ಮೋಟಾರನ್ನು ಹತ್ತಿ ವೇಗವಾಗಿ ಹೊರಟು ಹೋದನು.

ಸೇವಕನು ಆ ಕಾಗದವನ್ನು ರಾಕಾಚಂದ್ರನಿಗೆ ಕೊಟ್ಟನು. ರಾಕಾ ಚಂದ್ರನದನ್ನೋದಿದನು.

"ಪ್ರಿಯಪತ್ರೇದಾರರೇ? ನೀವು ನನ್ನನ್ನು ಹಿಡಿಯಲು ಯಮುನಾ

ಪುರಿಗೆ ಹೋಗಲು ಯತ್ನಿಸುತ್ತಿರುವುದನ್ನು ತಿಳಿದು ನಿಮ್ಮ ಹತ್ತಿರವೇ ಬಂದಿರುವೆನು. ಪರಊರಿಗೆ ಹೋಗಿ ಹಿಡಿಯಲು ಎತ್ನಿಸುವುದಕ್ಕಿಂತಲೂ ನಿಮ್ಮಲ್ಲಿಯೇ ಹಿಡಿಯುವುದು ಸುಲಭವಲ್ಲವೇ? ಬಡಜನರನ್ನು ಪೀಡಿಸುವ ನಿಮ್ಮ ಅಧಿಕಾರಿಗಳು ಲೋಕಕ್ಕೆ ಮಾಡತಕ್ಕ ಅಪಕಾರಗಳನ್ನು ನಿಮಗೆ ಸ್ಪಷ್ಟವಾಗಿ ತೋರಿಸಲು ಬಂದಿರುವೆನು.

ನಿಮ್ಮ ಪರಿಚಯವು ಈಗ ಆಯಿತು. ಇನ್ನೊಂದು ಸಮಯದಲ್ಲಿ ತಿರುಗಿ ನಿಮ್ಮ ದರ್ಶನವನ್ನು ಹೊಂದಲಪೇಕ್ಷಿಸುವೆನು. ಇತಿ ಮೋಹನ.”

ರಾಕಾಚಂದ್ರ—ಸುಖಾನಂದ? ಎಲ್ಲವೂ ತಿಳಿಯಿತಷ್ಟೆ? ಯಮುನಾಪುರಿಯ ಇನ್‌ಸ್ಪೆಕ್ಟರರ ಗುರುತು ನಮಗಿಲ್ಲವೆಂದೂಹಿಸಿ ಆ ವೇಷದಿಂದಿಲ್ಲಿಗೆ ಬಂದು ನಮ್ಮನ್ನು ನೋಡಿ ಹೋದನು. ಯಮುನಾಪುರಿಗೆ ನಾನು ಬರುತ್ತೇನೆಂಬ ವರ್ತಮಾನವನ್ನು ಕೇಳಿ ಭಯಪಡದೆ ನಾನಿರುವಲ್ಲಿಗೆ ಬಂದು ನನ್ನೊಡನೆ ಮಾತನಾಡಿ ಧೈರ್ಯದಿಂದ ಹೊರಟು ಹೋಗಿರುವ ಆ ಮೋಹನನ ಶೌರ್ಯವು ಶ್ಲಾಘನೀಯವಾಗಿದೆ. ಆಶ್ಚರ್ಯಕರವಾಗಿಯೂ ಇದೆ.

ಯಮುನಾಪುರಿಯ ಪ್ರತಿ ವರ್ತಮಾನ ಪತ್ರಿಕೆಗಳಲ್ಲಿಯೂ ಮೋಹನನು ದುಷ್ಟರಾದ ಶ್ರೀಮಂತಜನಗಳಿಗೂ, ಅಧಿಕಾರಿಗಳೂ ತೊಂದರೆಯನ್ನುಂಟುಮಾಡಿದನೆಂದಿದೆಯೇ ಹೊರತು ಸಜ್ಜನರಿಗೆ ಉಪಟಳವನ್ನು ಕೊಟ್ಟಂತೆ ತೋರುವುದಿಲ್ಲ. ನಿಜಸ್ಥಿತಿಯನ್ನು ಇಲ್ಲಿಯೇ ನಾವು ತಿಳಿಯೋಣ. ನಿನಗೇನಾದರೂ ಬೇರೆ ಕೆಲಸವಿದೆಯೇ?

ಸುಖಾನಂದ—ಇಲ್ಲ ಮೋಹನನ ಚಾತುರ್ಯವನ್ನು ನೋಡಬೇಕೆಂದು ನನಗೂ ತುಂಬಾ ಇಷ್ಟವಿದೆ.

ರಾಕಾಚಂದ್ರ—ನಾವು ಮೋಹನನನ್ನು ಹುಡುಕಲು ಬೇರೆ ವೇಷದಿಂದಲೇ ತಿರುಗಬೇಕು. ಯಾಕೆಂದರೆ ನಮ್ಮನ್ನು ಮೋಹನನು ಅರಿತಿರುವನು. ನಾವು ಮಾತ್ರ ಅವನನ್ನೀಗ ನೋಡಿರುವುದೇಸರಿ. ಮೋಹನನು ನಮಗೆ ಯಾವಕಾಲದಲ್ಲಿ ಏನೇನು ಉಪದ್ರವವನ್ನು ಕೊಡುತ್ತಾನೋ ತಿಳಿಯಲಸಾಧ್ಯ. ನಾವೂ ಇದ್ದಮಟ್ಟಿಗೆ ಜಾಗರೂಕರಾಗಿರಬೇಕು. ಇಲ್ಲಿ ಹೆಚ್ಚಾಗಿ ಅವನ ದೃಷ್ಟಿಯು ನಮ್ಮ ಮೇಲೆಯೇ ಇದೆ.” ಹಾಗೆ ಹೀಗೆ ಮಾತನಾಡು

ವಷ್ಟರಲ್ಲಿ ಕತ್ತಲೆಯಾಯಿತು. ಎಲ್ಲೆಲ್ಲಿಯೂ ಎಲೆಕ್ಟ್ರಿಕ್‌ದೀಪಗಳು ಪ್ರಜ್ವಲಿಸ ಲಾರಂಭಿಸಿದವು.

ಸುಖಾನಂದನು ಮನೆಗೆ ಹೋಗಲು ಎದ್ದು ನಿಂತನು. ಸ್ನೇಹಿತರಿಬ್ಬರೂ ಮಾತನಾಡುತ್ತಾ ಬೀದಿಬಾಗಿಲಿನ ವರೆಗೆ ಹೋದರು. ಸುಖಾನಂದನು "ಹೋಗಿ ಬರುತ್ತೇನೆ" ಎಂದು ಹೇಳಿ ತನ್ನ ಮೋಟಾರ್‌ಸೈಕಲ್ಲಿನಲ್ಲಿ ಕುಳಿತುಕೊಂಡು ಹೊರಟನು.

ರಾಕಾಚಂದ್ರನು ಮಿತ್ರನನ್ನು ಮನೆಗೆ ಕಳುಹಿಸಿ ಆಫೀಸಕೋಣೆಗೆ ಹೋಗಿ ಟೆಲಿಫೋನಿನಿಂದ ಎಲ್ಲಾ ಪೋಲೀಸ್‌ಸ್ಟೇಷನ್ನುಗಳಿಗೂ "ಮೋಹನನೀಪೂರಿನಲ್ಲಿರುವನು"ಎಂಬುದನ್ನು ತಿಳಿಸಿದನು. ಎಲ್ಲರೂ ಜಾಗರೂಕರಾದರು.

ಸುಖಾನಂದನು ತನ್ನ ಮನೆಗೆ ಹೋದನು. ಬಾಗಿಲಿನಲ್ಲಿ ಸೈಕಲ್ಲಿನಿಂದ ಕೆಳಗಿಳಿದು ಸೈಕಲ್ಲನ್ನು ಸೇವಕನ ವಶಕ್ಕೆ ಕೊಟ್ಟನು. ಬಾಗಿಲಿನ ಹತ್ತಿರ ನಿಂತಿದ್ದ ಸುಂದರಿಯೊಬ್ಬಳನ್ನು ಕಂಡು ಸೇವಕನನ್ನು ಕುರಿತು''ಯಾರದು?'' ಎಂದು ಕೇಳಿದನು.

ಸೇವಕ:—''ಸ್ವಲ್ಪ ಹೊತ್ತಿಗೆ ಮುಂಚೆ ಇಲ್ಲಿಗೆ ಬಂದು ನಿಮ್ಮ ಹತ್ತಿರ ಸ್ವಲ್ಪ ಮಾತನಾಡುವದಕ್ಕಿದೆ ಎಂದು ಹೇಳಿದರು''

ಸುಖಾನಂದನಿಗೆ ಅಪರಿಚಿತ ಹೆಂಗಸರೊಡನೆ ಮಾತನಾಡುವದೆಂದರೆ ಬಲು ಲಜ್ಜೆ. ಅದಕ್ಕಾಗಿ ಅವನು ಮುಂದೆ ಏನೂ ತೋಚದೆ ಸುಮ್ಮನೆ ನಿಂತನು. ಅಷ್ಟರಲ್ಲಿ ಅಲ್ಲಿ ನಿಂತಿದ್ದ ಆ ಸ್ತ್ರೀಯೇ ಮುಂದೆ ಬಂದು"ರಾಯರೇ? ಇಲ್ಲೇ ನಿಂತು ಏನನ್ನು ಯೋಚಿಸುವಿರಿ? ಒಳಗೆ ಹೋಗೋಣ. ಒಂದು ಮೊಕದ್ದಮೆಯಲ್ಲಿ ಕೆಲವು ವಿಚಾರಗಳನ್ನು ನಿಮ್ಮಿಂದ ಕೇಳಬೇಕಾಗಿದೆ" ಎಂದಳು.

ಸುಖಾನಂದನು ಕೂಡ''ಹೊರಗೇ ನಿಂತು ಮಾತನಾಡುವದು ಯುಕ್ತವಲ್ಲ''ವೆಂದರಿತು ಒಳಗೆ ಹೋದನು. ಸುಂದರಿಯೂ ಒಳಹೊಕ್ಕಳು. ಸುಖಾನಂದನು ಉಪ್ಪರಿಗೆಯ ಮೇಲಿದ್ದ ಆಫೀಸಕೋಣೆಗೆ ಹೋಗಿ ಕುರ್ಚಿಯೊಂದರಲ್ಲಿ ಕುಳಿತುಕೊಂಡನು. ಸ್ತ್ರೀಯೂ ಒಳಗೆ ಬಂದು ಕುರ್ಚಿಯೊಂದನ್ನು ಸುಖಾನಂದನ ಹತ್ತಿರ ಎಳೆದುಕೊಂಡು ಅದರಲ್ಲಿ ಕುಳಿತು ಮಾತನಾಡಲಾರಂಭಿಸಿದಳು

ಸ್ತ್ರೀ—"ರಾಯರೇ? ನನ್ನ ವಿಷಯವಾಗಿ ನಿಮ್ಮ ಮನಸ್ಸಿನಲ್ಲಿ ನಾನಾ ಯೋಚನೆಗಳಾಗಿರಬಹುದಷ್ಟೆ! ನಿಮಗೆ ವಿವಾಹವಾಗಲಿಲ್ಲವೆಂಬುದನ್ನು ತಿಳಿದು ನಿಮ್ಮ ಸೌಂದರ್ಯಕ್ಕೆ ಮರುಳಾಗಿ ನಾನಾಗಿಯೇ ನಿಮ್ಮ ಪ್ರೇಮವನ್ನು ಯಾಚಿಸಿ ಬಂದಿರುವೆನು. ತಾವಾಗಿ ಕಾಮಿಸಿ ಬಂದವರನ್ನು ಬಿಡಬಾರದು. ಎಷ್ಟೋ ಜನರು ಸಾವಿರಾರು ರೂಪಾಯಿಗಳನ್ನು ಇದಕ್ಕಾಗಿ ವೆಚ್ಚಮಾಡಿ ಸುಖವನ್ನನುಭವಿಸುವರು. ನಿಮಗೀಗ ಯಾವ ಖರ್ಚೂ ಇಲ್ಲದೆ ಸುಖವು ಲಭಿಸುವದು ಇಂತಹ ಸುಸಮಯವು ನಿಮಗಿನ್ನಾವಾಗಲೂ ಲಭಿಸಲಾರದು"

ಸುಖಾನಂದನು ಏನನ್ನು ಹೇಳಲೂ ತೋರದೆ ಸುಮ್ಮನೆ ಇದ್ದನು. ಆಕೆಯ ಸುಂದರ ರೂಪದಿಂದ ಆತನು ಮುಗ್ಧನಾಗಿದ್ದನು. ಸ್ತ್ರೀಯು ತನ್ನ ಮಾತಿಗೆ ಉತ್ತರವನ್ನು ಕೊಡದೆ ಸ್ತಬ್ಧನಾಗಿರುವುದನ್ನು ನೋಡಿ ಮನಸ್ಸಿನಲ್ಲಿಯೇ ನಕ್ಕು "ಇವನಿನ್ನೂ ಹೆಂಗಸರೊಡನೆ ವಾಸಿಸಿದವನಲ್ಲ. ಮಾತನಾಡಿದವನೂ ಅಲ್ಲ. ಅದಕ್ಕಾಗಿಯೇ ಲಜ್ಜೆಯಿಂದ ಸುಮ್ಮನೆ ಕುಳಿತಿರುವನು. ನನ್ನ ಕಾರ್ಯವು ನೆರವೇರುವಂತಿದೆ" ಎಂದು ಯೋಚಿಸಿ ಮೇಜಿನ ಮೇಲಿದ್ದ ವೀಳ್ಯದ ತಟ್ಟೆಯನ್ನು ಸಮೀಪಕ್ಕೆ ತೆಗೆದುಕೊಂಡು ವೀಳ್ಯದೆಲೆಯಲ್ಲಿ ಸುಖಾನಂದನಿಗೆ ಕಾಣಿಸದಂತೆ ಏನನ್ನೋ ಹಾಕಿ ಮಡಿಸಿ "ರಾಯರೇ? ಏನನ್ನೂ ಯೋಚಿಸಬೇಡಿ. ಇದನ್ನು ಸ್ವೀಕರಿಸಿ ಅನುಗ್ರಹಿಸಿರಿ" ಎಂದು ಹೇಳಿ ಕೊಟ್ಟಳು.

ಮಹಾಪ್ರಸಾದವೆಂದು ಸುಖಾನಂದನದನ್ನು ತಿಂದುಬಿಟ್ಟನು. ತಿಂದೊಡನೆ ಸುಂದರಿಯು ಗಟ್ಟಿಯಾಗಿ ನಗಲಾರಂಭಿಸಿದಳು"

"ಇದೇನು, ಹೀಗೇಕೆ ಅಟ್ಟಹಾಸ ಮಾಡುವಳು" ಎಂದು ಸುಖಾನಂದನು ಯೋಚಿಸುತ್ತಿರುವಷ್ಟರಲ್ಲಿ ಕಣ್ಣಿಗೆ ಕತ್ತಲೆ ಕಟ್ಟಿದಂತಾಗಿ ಕಣ್ಣು ಮುಚ್ಚಿಹೋಯಿತು. ದೇಹವು ನಡುಗಲಾರಂಭಿಸಿ ಅಲ್ಲಿಯೇ ಒರಗಿತು.

ಸ್ತ್ರೀಯು ಇನ್ನೊಂದುಬಾರಿ ನಕ್ಕು ಸುಖಾನಂದನನ್ನು ಮೆಲ್ಲಗೆ ಕೆಳಗೆ ಮಲಗಿಸಿ ಒಂದು ಕಾಗದದಲ್ಲಿ "ಪರಮಪ್ರಿಯರೇ? ಹೇಗಿದೆ ನನ್ನೊಡನೆ ಸುಖ? ಅದಕ್ಕೆ ಪ್ರತಿಫಲವಾಗಿ ನಿಮ್ಮ ಮೋಟಾರ್ ಸೈಕಲ್ಲನ್ನು ಕೆಲವು ದಿನ

ಗಳ ವರೆಗೆ ಇಟ್ಟುಕೊಂಡಿರಲು ಇಚ್ಛಿಸುತ್ತೇನೆ. ಇದಕ್ಕಿಂತಲೂ ಹೆಚ್ಚಿನ ಪ್ರತಿಫಲವನ್ನು ಅಪೇಕ್ಷಿಸುವದಿಲ್ಲ. ಇನ್ನಾದರೂ ಜಾಗರೂಕರಾಗಿರಿ. ನನ್ನ ಸುಖವು ನಿಮ್ಮ ಮಿತ್ರರಿಗೂ ಬೇಕೆ? ಎಂದು ವಿಚಾರಿಸಿರಿ. ಈಗ ನಾನು ಹೊರಟು ಹೋಗಿ ಬೇರೆ ಕಾಲದಲ್ಲಿ ನಿಮ್ಮನ್ನು ನೋಡಬಯಸುವೆನು.

ಇತಿ ನಿಮ್ಮ ಸುಂದರಿ. ಮೋಹನ."

ಈರೀತಿ ಬರೆದಿಟ್ಟು ಕೆಳಗಿಳಿದು ಬಂದು ಬಾಗಿಲಿನಲ್ಲಿದ್ದ ಸೇವಕನ ಹತ್ತಿರ "ರಾಯರು ಕರೆಯುತ್ತಾರೆ. ಹೋಗು" ಎಂದು ಹೇಳಿ ಅವನು ಕಣ್ಮರೆಯಾದೊಡನೆ ಸದ್ದಿಲ್ಲದೆ ಸುಖಾನಂದನ ಮೋಟಾರ್ ಸೈಕಲ್ಲಿನಲ್ಲಿ ಕುಳಿತು ಹೊರಟು ಹೋದಳು.

ಸೇವಕನು ಬಂದು ಸುಖಾನಂದನು ನೆಲದ ಮೇಲೆ ಸಂಜ್ಞೆಯಿಲ್ಲದೆ ಬಿದ್ದುದನ್ನು ನೋಡಿ ಗಾಬರಿಯಾಗಿ ಕೂಡಲೆ ಅಡಿಗೆಯುವನನ್ನು ಕೂಗಿದನು. ಅವನು ಭಯದಿಂದೋಡಿಬಂದು "ಏನು ಏನು" ಎಂದನು. ಸೇವಕನು ಸುಖಾನಂದನನ್ನು ತೋರಿಸಿ, ಸ್ತ್ರೀಯೊಬ್ಬಳು ಬಂದು ಹೋದುದನ್ನು ಹೇಳಿದನು.

ಆ ಹೆಂಗಸೇ ಸುಖಾನಂದನನ್ನೀವಸ್ಥೆಗೆ ಗುರಿಮಾಡಿರಬಹುದಾಗಿ ಇಬ್ಬರೂ ನಿಶ್ಚೈಸಿ, ಸುಖಾನಂದನ ಕಾವಲಿಗೆ ಅಡಿಗೆಯುವನು ನಿಂತು, ಸೇವಕನು ಕೂಡಲೆ ತನ್ನ ಸೈಕಲ್ಲನ್ನು ಹತ್ತಿ ರಾಕಾಚಂದ್ರನ ಭವನದ ಕಡೆಗೆ ವಾಯುವೇಗದಿಂದ ಹಾರಿದನು.

ರಾಕಾಚಂದ್ರನು ಸೇವಕನಿಂದ ನಡೆದ ವಿಚಾರವನ್ನು ಕೇಳಿ ಕೂಡಲೆ ತನ್ನ ಮೋಟಾರ್‌ಸೈಕಲ್ಲಿನಲ್ಲಿ ಸುಖಾನಂದನ ಮನೆಗೆ ಬಂದನು

ಸುಖಾನಂದನು ಸಂಜ್ಞೆಯಿಲ್ಲದೆ ಬಿದ್ದಿದ್ದರೂ ಮುಖದ ಕಾಂತಿಯು ಕೆಡದೇ ಇರುವುದನ್ನು ಕಂಡು ರಾಕಾಚಂದ್ರನು ಸ್ವಲ್ಪ ಧೈರ್ಯಹೊಂದಿ ಕೈ ಹಿಡಿದು ನೋಡಿ ಅದಕ್ಕೆ ಬೇಕಾದ ಚಿಕಿತ್ಸೆಯನ್ನು ಮಾಡಿದನು. ಎಷ್ಟೋ ಹೊತ್ತಿನ ಮೇಲೆ ಸುಖಾನಂದನು ಮೊದಲಿನಂತಾದನು. ಎಲ್ಲಿರೂ ಆನಂದಭರಿತರಾದರು. ರಾಕಾಚಂದ್ರನು ಮೇಜಿನ ಮೇಲಿದ್ದ ಕಾಗದವನ್ನು ನೋಡಿ, ಓದಿ, ಸುಖಾನಂದನಿಗೆ ತೋರಿಸಿದನು. ಸುಖಾನಂದನು ತನ್ನ

ಅವಸ್ಥೆಯನ್ನು ನಿರೂಪಿಸಿದನು. ರಾಕಾಚಂದ್ರನು ನಕ್ಕು ತಲೆದೂಗಿ ಹೇಳಿದನು

ರಾಕಾಚಂದ್ರ—ನೀನು ಪೂರ್ಣವಾಗಿ ಮೋಸ ಹೊಂದಿರುವಿ. ಮೋಹನನು ನಿನ್ನ ಮೋಟಾರ್‌ಸೈಕಲ್ಲನ್ನೂ ಒಯ್ದನು. ಮೋಹನನು ಉಪಾಯದಿಂದಲೇ ಕಾರ್ಯವನ್ನು ಸಾಧಿಸಿದನು. ಯಾವಾಗಲೂ ಹೀಗೆಯೇ ಪ್ರಾಣಾಪಾಯವನ್ನು ಮಾಡದೆ ತನ್ನ ಕೆಲಸದಲ್ಲಿ ಜಯಶೀಲನಾಗುವನು. ಅವನ ಈ ವರ್ತನೆಗಾಗಿ ಎಷ್ಟು ಶ್ಲಾಘಿಸಿದರೂ ಶ್ಲಾಘಿಸಬಹುದು. ಮೊದಲನೇ ದಿನವೇ ಎರಡುಬಾರಿ ನಮ್ಮನ್ನು ಮೋಸಗೊಳಿಸಿದನು. ನಾವು ಅವನಿಗೆ ಮೋಸಪಡಿಸುವುದಕ್ಕೆ ಬದಲಾಗಿ ಅವನೇ ನಮ್ಮನ್ನು ಮೋಸಪಡಿಸುತ್ತಿರುವನು. ಮಿತ್ರಾ? ಇನ್ನಾದರೂ ನಾವು ಜಾಗರೂಕರಾಗಿರಬೇಕು. ನೀನಿನ್ನು ಯಾರನ್ನೂ ನಂಬಬೇಡ.'' ಎಂದು ಹೇಳಿ ಮನೆಗೆ ಹೊರಟು ಹೋದನು.

ಮಾರನೇದಿನ ಸುವರ್ಣನಗರದ ಪತ್ರಿಕೆಗಳಲ್ಲಿ ಮೋಹನನು ಪತ್ತೇದಾರಿಗಳಿಗೆ ತೊಂದರೆ ಪಡಿಸಿದ ರೀತಿಯು ವರ್ಣಿತವಾಗಿತ್ತು. ಇದಾರು ಪ್ರಕಟಿಸಿದವರು? ಮತ್ತಾರಿಗೆ ಈ ವಿಷಯವು ತಿಳಿದಿರುವುದು? ಮೋಹನನೇ ಪ್ರಕಟಿಸಿರಬಹುದು.

---

## ತೃತೀಯ ಗುಚ್ಛ.

ಸುವರ್ಣನಗರದೊಂದು ಮೂಲೆಯ ಬೀದಿಯಲ್ಲಿ ಮೋಹನನು ತನ್ನ ಸಂಗಡಿಗರೊಡನೆ ವಾಸವಾಗಿದ್ದನು. ಮೋಹನನು ಸುವರ್ಣನಗರಕ್ಕೆ ಬಂದು ಎರಡು ದಿನಗಳಾದವು. ಮೂರನೇದಿನ ಬೆಳಿಗ್ಯ ಪಟ್ಟಣದ ವಿಶೇಷವನ್ನು ತಿಳಿಯಲು ಮೋಹನನೂ ಅವನ ಮಿತ್ರರೂ ಹೊರಹೊರಟರು. ವೇಷಧಾರಿಯಾದ ಮುದುಕನೊಬ್ಬನು ಕೈಯಲ್ಲೊಂದು ಕೋಲನ್ನು ಹಿಡಿದು ಭಿಕ್ಷೆಗಾಗಿ ಮನೆಮನೆಗೆ ಹೋಗಿ, ಸಿಕ್ಕಿದಲ್ಲಿ ಭಿಕ್ಷೆಯನ್ನು ತೆಗೆದುಕೊಂಡು ಹೋಗುತ್ತಾ ಬ್ರಾಹ್ಮಣರ ಕೇರಿಗೆ ಬಂದನು. ಅಲ್ಲಿ ಕೆಲವೆಡೆಗಳಲ್ಲಿ ಪಾಠಶಾಲೆಗಳಿದ್ದು ಅದರಲ್ಲಿ ಶಾಸ್ತ್ರ ಮತ್ತು ವೇದವನ್ನು ವಿದ್ಯಾರ್ಥಿಗಳು ಕಲಿಯು

ತ್ತಿದ್ದರು ಅಲ್ಲಿಲ್ಲಿಯೂ ಶಾಸ್ತ್ರ ಚರ್ಚೆಯೂ ವೇದಘೋಷವೂ ಕೇಳಿ ಬರುತ ಲಿತ್ತು. ಮುದುಕನು ಅಲ್ಲಲ್ಲಿ ತಿರುಗಿ ರಂಗಾಚಾರ್ಯರೆಂಬೊಬ್ಬ ಗೃಹಸ್ಥರ ಮನೆಗೆ ಹೋದನು. ಎಲ್ಲಾ ಕಡೆಗಳಂತೆ ಇಲ್ಲಿಯೂ ಕೂಡ ಶಾಸ್ತ್ರಚರ್ಚೆಯನ್ನೊ ವೇದಘೋಷವನ್ನೊ ಕೇಳಬಹುದೆಂದು ಆ ಮುದುಕನು ತಿಳಿದಿದ್ದನು; ಆದರೆ ಇಲ್ಲಿ ಮಾತ್ರ ಅದಕ್ಕೆ ವಿಪರೀತವಾದ ಸ್ಥಿತಿಯು ನಡೆಯುತ ಲಿತ್ತು. ರಂಗಾಚಾರ್ಯರು ಚಾಪೆಯೊಂದರ ಮೇಲೆ ಕುಳಿತಿದ್ದರು. ಹತ್ತಿರವೇ ಏಳೆಂಟುಜನ ಬ್ರಾಹ್ಮಣರೂ, ಶೂದ್ರರೂ ಕುಳಿತಿದ್ದರು "ಇದನ್ನೊಂದು ಪರೀಕ್ಷಿಸೋಣ"ವೆಂದು ಮುದುಕನು ಮುಂದುವರಿದು ನೋಡಿದನು ಅಲ್ಲಿ ಸ್ವಲ್ಪ ಹೊತ್ತು ನಿಂತೊಡನೆ "ಅವರೆಲ್ಲರೂ ಆಚಾರ್ಯರ ಹತ್ತಿರ ಅಡವಿಟ್ಟು ಸಾಲ ತೆಗೆದುಕೊಳ್ಳುವರು" ಎಂಬುದು ಮುದುಕನಿಗೆ ತಿಳಿಯಿತು.

ಇನ್ನೂ ಸ್ವಲ್ಪಹೊತ್ತು ಮುದುಕನು ಅಲ್ಲಿಯೇ ಮರೆಯಲ್ಲಿ ನಿಂತು, ಇಲ್ಲಿಗೆ ಬಂದು ರಂಗಾಚಾರ್ಯರು ಮಾಡುತ್ತಿರುವ ಕಾರ್ಯವನ್ನು ಸಂಪೂರ್ಣವಾಗಿ ತಿಳಿದುಕೊಂಡು, "ಈ ಶನಿಗೆ ಕಾಲಬಂದಿದೆ" ಎಂದುಕೊಂಡು ಭಿಕ್ಷೆಯನ್ನು ಯಾಚಿಸದೆ ಅಲ್ಲಿಂದ ಹೊರಟು ಅಲ್ಲಲ್ಲಿ ಸಂಚರಿಸುತ್ತಾ ಹೊರಟು ಹೋದನು. ಮಾರಾಟಕ್ಕಾಗಿ ಹಣ್ಣುಗಳನ್ನು ಬುಟ್ಟಿಯೊಂದರಲ್ಲಿ ತುಂಬಿಕೊಂಡು ಒಬ್ಬ ಪುರುಷನು ಅಲ್ಲಲ್ಲಿ ಹಣ್ಣುಗಳ ಹೆಸರನ್ನು ಹೇಳುತ್ತಾ ಹೋಗುತ್ತಿದ್ದನು ಯಾರಾದರೂ "ಇಲ್ಲಿ ತೆಗೆದುಕೊಂಡು ಬಾ" ಎಂದು ಕರೆದರೆ ಒಂದಾಣೆಯ ಹಣ್ಣಿಗೆ ನಾಲ್ಕಾಣೆಯಂತೆ ಕ್ರಯವನ್ನು ಹೆಚ್ಚಾಗಿ ಹೇಳಿ ಹಣ್ಣುಗಳನ್ನು ಯಾರೂ ತೆಗೆದುಕೊಳ್ಳದಂತೆ ಮಾಡುತ್ತಿದ್ದನು. "ಸರಿಯಾದ ಬೆಲೆಯನ್ನು ಹೇಳಿದರೆ ಯಾರಾದರೂ ಹಣ್ಣುಗಳನ್ನು ಕೊಂಡುಕೊಂಡು ಬುಟ್ಟಿಯನ್ನು ಖಾಲಿ ಮಾಡಿಬಿಡಬಹುದು. ಆಗ ಹೆಚ್ಚಿನ ಸ್ಥಳವನ್ನು ತಿರುಗಾಡಲಿಕ್ಕಾಗಲಾರದು." ಎಂದು ಆ ಪುರುಷನ ಅಭಿಪ್ರಾಯವಿರಬಹುದು.

ಪುರುಷನು ಅಲ್ಲಲ್ಲಿ ಸಂಚರಿಸಿ ಕೇವಲ ಶ್ರೀಮಂತರೇ ಇರುವ ಒಂದು ದೊಡ್ಡ ಬೀದಿಗೆ ಬಂದನು. ಎಲ್ಲಾ ಬೀದಿಗಳಿಗಿಂತಲೂ ಈ ಬೀದಿಯು

ಎತ್ತರವಾದ ಮನೆಗಳಿಂದ ನಯನಮನೋಹರವಾಗಿತ್ತು. ಪುರುಷನು ಆ ಸ್ಥಳದಲ್ಲಿ ಕೆಲವು ಶ್ರೀಮಂತರ ಮನೆಗಳನ್ನು ಹೊಕ್ಕು ನಿರಾಶನಾಗಿ ಹೊರಹೊರಟನು. ಗುರುನಾಥರಾಯರೆಂಬೊಬ್ಬ ಶ್ರೀಮಂತರ ಮನೆಗೆ ಬಂದನು.

ಅಲ್ಲಿದ್ದ ಐಶ್ವರ್ಯವಂತರಲ್ಲಿ ಗುರುನಾಥರಾಯರೇ ಹೆಚ್ಚಿನವರೆಂದು ಅನ್ನಬಹುದಾಗಿತ್ತು. ಅವರ ಮನೆಯೂ ಎಲ್ಲಾ ಮನೆಗಳಿಗಿಂತಲೂ ದೊಡ್ಡದಾಗಿಯೂ, ಸುಂದರವಾಗಿಯೂ ಶೋಭಿಸುತ್ತಿತ್ತು. ಹೊರಗಿನ ಬಾಗಿಲಿನಲ್ಲಿಯೇ ನಾಲ್ಕಾರು ಜನ ಸೇವಕರು ಕಾವಲಿಗಿದ್ದರು. ಭವನದ ಮುಂಭಾಗದಲ್ಲಿ ಒಂದು ಚಿಕ್ಕ ಹೂತೋಟವಿದ್ದಿತು. ಹೊರಗಿನ ಬಾಗಿಲಿನಿಂದ ಒಳಗೆ ಬಂದು ತೋಟದಲ್ಲಿ ನಿಂತು ನೋಡಿದರೆ, ಆ ಗೃಹದ ಶೋಭೆಯು ಬಹು ಚೆನ್ನಾಗಿ ಕಾಣಿಸುತ್ತಿತ್ತು.

ಮನೆಯ ಅಂದವನ್ನು ನೋಡಲಿಚ್ಛೆಯಿಂದಲೋ, ಇನ್ನಾವ ಇಚ್ಛೆಯಿಂದಲೋ ಹಣ್ಣು ಮಾರುವವನು ಬಾಗಿಲಿನಲ್ಲಿದ್ದ ಸೇವಕರಿಗೆ "ತಾನು ಹಣ್ಣು ಮಾರಾಟಮಾಡಲು ಬಂದವನು" ಎಂದು ತಿಳಿಸಿ ತೋಟದೊಳಕ್ಕೆ ಬಂದನು. ಉಪವನಕ್ಕೆ ಎದುರಾಗಿಯೇ ರಾಯರ ಆಫೀಸ್ ಮಹಾಲಿತ್ತು. ಐದಾರು ಜನ ಗುಮಾಸ್ತರು ಲೆಕ್ಕ ಬರೆಯುತ್ತಿದ್ದರು. ಪುರುಷನು ಹಣ್ಣುಗಳನ್ನು ಮಾರಾಟ ಮಾಡುವ ನೆಪದಿಂದ ಮನೆಯೊಳಗೆ ಹೋಗಿ ಬಂದಿನಂತೆ ಅಲ್ಲಿಂದ ಹಿಂದಿರುಗಿ ಹೊರಬಾಗಿಲಿಗೆ ಬಂದು ಸೇವಕರಿಂದ ಕೆಲವು ವಿಷಯಗಳನ್ನು ತಿಳಿಯಬಿಚ್ಛಿಸಿ ಅವರನ್ನು ಕುರಿತು "ಹಣ್ಣು ಹಾಳಾಗಿವೆ ಎಂದು ಯಾರೂ ಕೊಂಡುಕೊಳ್ಳಲಿಲ್ಲ. ಇದನ್ನು ಇನ್ನೇನು ಮಾಡಲಿ? ನೀವಾದರೂ ತಿನ್ನಿ" ಎಂದು ಹೇಳಿ ಇನ್ನೊಂದು ಹಣ್ಣನ್ನು ಕೊಟ್ಟನು. ಸೇವಕರು ಹಣ್ಣುಗಳನ್ನು ತಿಂದರು.

ಪುರುಷನು ಕೇಳಿದನು....ಇದು ಯಾರ ಮನೆ?

ಸೇವಕನೊಬ್ಬ—ಪ್ರಸಿದ್ಧ ಶ್ರೀಮಂತರಾದ ಗುರುನಾಥರಾಯರ ಮನೆ. ಇದೂ ಕೂಡ ನಿನಗೆ ಗೊತ್ತಿಲ್ಲವೇ?

ಪುರುಷ—ಐಶ್ವರ್ಯವಿದ್ದರೆ ಹೀಗಿರಬೇಕು. ನೋಡಿದರೆ ಎಷ್ಟು

ಆನಂದವಾಗುತ್ತದೆ? ನಾವು ದಿನ ಪೂರಾ ಕಷ್ಟಪಟ್ಟರೂ ಹೊಟ್ಟೆಗಿಲ್ಲದೆ ಕಷ್ಟ ಪಡುತ್ತಿರುವೆವು.

ಇನ್ನೊಬ್ಬ—ಇದನ್ನಿವರ ತಂದೆಯುವರು ಸಂಪಾದಿಸಿ ಇಟ್ಟಿರುವರು. ಇವರು ಸಂಪಾದಿಸುವುದು ತಿಳಿದೇ ಇದೆ. ಇಷ್ಟಿದ್ದರೂ ಒಂದು ಕಾಸನ್ನಾದರೂ ಧರ್ಮವನ್ನೀಡಲು ಪ್ರಾಣವನ್ನೇ ಬಿಡುವರು. ದಿನವೂ ನೋಡುವುದಿಲ್ಲವೇನು? ಎಷ್ಟು ಜನ ಭಿಕ್ಷುಕರು ಪೆಟ್ಟು ತಿಂದು ಹೋಗುವರು! ಇವರು ಮಾಡುವ ಧರ್ಮಕ್ಕೆ ಲಕ್ಷ್ಮಿಯು ಇಲ್ಲಿ ವಾಸವಿರುವುದು ಆಶ್ಚರ್ಯವೇ ಸರಿ.

ಮತ್ತೊಬ್ಬ—ನಮಗೇಕೆ ದೊಡ್ಡವರ ವಿಚಾರ!

ಇನ್ನೊಬ್ಬ—ಗೊತ್ತಿದೆ ನಿನ್ನ ಸಮಾಚಾರ? ನಿನಗೆ ಮಾತ್ರ ತಿಂಗಳಿಗೆ ಸರಿಯಾಗಿ ಸಂಬಳ ಸಿಕ್ಕುವುದೆಂದು ಹೊಗಳುತ್ತೀ. ನಮ್ಮ ಅವಸ್ಥೆಯು ನಮಗೇ ಗೊತ್ತಿದೆ.

ಅಷ್ಟರಲ್ಲಿ ಗುರುನಾಥರಾಯರ ತಮ್ಮನು ಅತ್ತಕಡೆಗೆ ಬಂದನು. ಸೇವಕರು ಜಾಗರೂಕರಾಗಿ ನಿಂತರು. ಹಣ್ಣು ಮಾರಲು ಬಂದ ಪುರುಷನು ಅಲ್ಲಿಂದ ಹೊರಟನು. ಆಗಲೇ ಸಾಯಂಕಾಲ ಐದು ಗಂಟೆಯಾಗಿತ್ತು. ಪುರುಷನು ತನ್ನ ಬಿಡಾರಕ್ಕೆ ಹೋಗಲು ದಾರಿ ಹಿಡಿದನು.

ಸ್ವಲ್ಪ ದೂರ ಹೋಗುತ್ತಿರಲು, ಅವನ ಹಿಂಭಾಗದಲ್ಲಿ ಒಬ್ಬ ಹೂಮಾರುವವನು ಬರುತ್ತಿದ್ದನು. ಮುಂದೆ ಹೋಗುತ್ತಿರುವ ಹಣ್ಣು ಮಾರುವವನನ್ನು ನೋಡಿ ಹೂಮಾರುವವನು ಅವನನ್ನು ಹಿಂಬಾಲಿಸಿ ಹೊರಟನು; ಆದರೆ ಹೀಗೆ ಹಿಂಬಾಲಿಸಿದ್ದನ್ನು ಹಣ್ಣುಮಾರುವವನು ನೋಡಿರಲಿಲ್ಲ. ಅಲ್ಲಲ್ಲಿ ಇನ್ನೊಂದು ಮನೆಯನ್ನು ಮಾತ್ರ ಹೊಕ್ಕು, ಸಂದು ಬೀದಿಗಳಲ್ಲಿ ಸುತ್ತಿ, ತನ್ನ ಬಿಡಾರಕ್ಕೆ ಹೋದನು. ಬಿಡಾರದ ಹತ್ತಿರ ಬಂದೊಡನೆ ಒಂದು ಬಾರಿ ಹಿಂದಿರುಗಿ ನೋಡಿದನು. ಸ್ವಲ್ಪ ದೂರದಲ್ಲಿ ತನ್ನನ್ನು ಹಿಂಬಾಲಿಸಿ ಬರುತ್ತಿದ್ದ ಹೂಮಾರುವವನನ್ನು ನೋಡಿದನು. ಅವನನ್ನು ನೋಡಿದೊಡನೆ ಸ್ವಲ್ಪ ಸಂದೇಹವಾಗಿ ಥಟ್ಟನೆ ಬಿಡಾರಕ್ಕೆ ಹೋಗುವುದು ಯುಕ್ತವಲ್ಲವೆಂದು ತಿಳಿದು ಅಲ್ಲಿಂದ ಮುಂದಕ್ಕೆ ಹೊರಟು ಅಲ್ಲಲ್ಲಿ ಹಣ್ಣುಗಳನ್ನು ಮಾರಲು ವಿಚಾರಿಸಿ ನಡೆದನು. ಹಿಂದಿರುಗಿ ನೋಡಿದನು. ಆಗಲೂ ಹೂಮಾರು

ವವನು ಹಿಂಬಾಲಿಸುತ್ತಿದ್ದನು. ಮುಂದೆ ಹೊರಟನು. ಆಗಲೇ ಸಾಯಂ ಕಾಲವಾಗಿತ್ತು ದೊಡ್ಡ ದೊಡ್ಡ ಬೀದಿಗಳಲ್ಲಿ ಎಲೆಕ್ಟ್ರಿಕ್ ದೀಪಗಳು ಪ್ರಜ್ವಲಿ ಸುತ್ತಿದ್ದವು.

ಹಣ್ಣು ಮಾರುವವನು ದೀಪವಿಲ್ಲದಿರುವ ಒಂದು ಸಣ್ಣಸಂದಿನಲ್ಲಿ ಹೊರಟನು. ಆಗಲೂ ಬೆನ್ನಟ್ಟಿರುವುದನ್ನು ನೋಡಿ ಸ್ವಲ್ಪ ಮುಂದೆ ಹೋಗಿ ಆ ದಾರಿಯು ಕವಲೊಡೆದುದನ್ನು ನೋಡಿ "ಇದೇ ಸಮಯ"ವೆಂದು ನಿಶ್ಚೈಸಿ ಸೊಂಟದಲ್ಲಿದ್ದ ಪಿಸ್ತೂಲನ್ನು ತೆಗೆದು ಬಾರ್ ಮಾಡಿ ಥಟ್ಟನೆ ಹಿಂದುರುಗಿ ಗುಂಡನ್ನು ಹಾರಿಸಿದನು. ಹೂಮಾರುವವನು ಚಮತ್ಕಾರ ದಿಂದ ಬೀದಿಯ ಪಕ್ಕಕ್ಕೆ ಸರಿದು ಗುಂಡನ್ನು ತಪ್ಪಿಸಿಕೊಂಡನು

ಸಮಯವನ್ನು ಕಾಯುತ್ತಿದ್ದ ಪುರುಷನು ಕೂಡಲೆ ಹಣ್ಣಿನ ಬುಟ್ಟಿ ಯನ್ನ ಹಿಂದಕ್ಕೆ ವೇಗವಾಗಿ ಎಸೆದು ಮೊದಲೇ ನೋಡಿಟ್ಟಿದ್ದ ಸಂದು ಬೀದಿ ಯಲ್ಲಿ ಹಾರಿ ಓಡಿ ಹೋದನು

ಹೂಮಾರುವವನು ತಿರುಗಿ ಗುಂಡು ಬರಬಹುದೆಂಬ ನಿರೀಕ್ಷಣೆಯಿಂದ ಸ್ವಲ್ಪಹೊತ್ತು ನಿಂತು ಅನಂತರ ತನ್ನ ಎಲೆಕ್ಟ್ರಿಕ್ ದೀಪವನ್ನು ಹಚ್ಚಿ ಮುಂದೆ ಹಿಡಿದನು ಯಾರೂ ಕಾಣಿಸಲಿಲ್ಲ. "ತಪ್ಪಿಸಿಕೊಂಡು ಓಡಿ ಹೋದನು" ಎಂದು ತಿಳಿದು ವೇಗವಾಗಿ ತಾನೂ ಅದೇ ದಾರಿಯಲ್ಲಿ ಮುಂದೆ ಓಡಿದನು; ಆದರೆ ಸಂದುಬೀದಿಯಿಂದ ಹಣ್ಣು ಮಾರುವವನು ಹಾರಿ ಹೋದುದನ್ನು ತಿಳಿಯದೆ ಹೂಮಾರುವವನು ಎಷ್ಟು ಓಡಿದರೂ ಪ್ರಯೋಜನವಾಗದೆ ನಿರಾಶೆಯಿಂದ ಹಿಂದಿರುಗಿದನು.

ಇತ್ತ ಹಣ್ಣು ಮಾರುವ ಪುರುಷನು ಸಂದು-ಬೀದಿಗಳಲ್ಲಿ ಸುತ್ತಿ ಸುತ್ತಿ ಬಿಡಾರಕ್ಕೆ ಬಂದನು. ಆಗ ಒಂಭತ್ತು ಗಂಟೆಯಾಗಿತ್ತು ಆ ಬಿಡಾರವು ಮೋಹನನದಾಗಿತ್ತು. ಮೋಹನನು ಬಂದ ಪುರುಷನನ್ನು ನೋಡಿ "ಇದೇನು ಪ್ರಿಯನಾಥ? ಏನಾಯಿತು" ಎಂದು ಕೇಳಿದನು. ವಾಚಕರಿಗೆ ಹಣ್ಣು ಮಾರುವ ಪುರುಷನು ಪ್ರಿಯನಾಥನೆಂದು ಈಗ ತಿಳಿಯಿತಷ್ಟೆ?

ಪ್ರಿಯನಾಥ—ನನ್ನ ಅವಸ್ಥೆಯನ್ನೇನು ಹೇಳಲಿ?

ಮೋಹನ—ಏನು ಅಂತಹ ವಿಚಾರ?

ಪ್ರಿಯನಾಥನು ನಡೆದ ವಿಚಾರವನ್ನು ವಿವರಿಸಿದನು.

ಮೋಹನ—ಅಷ್ಟು ದೂರದವರಿಗೂ ಹಿಂಬಾಲಿಸಿದ ಪುರುಷನು ರಾಕಾಚಂದ್ರನೇ ಇರಬಹುದು. ಮತ್ತಾರಿಗೂ ಇಂತಹ ಶೌರ್ಯವಿಲ್ಲ. ರಾಕಾಚಂದ್ರನಿಗೂ ಸಿಕ್ಕದೆ ತಪ್ಪಿಸಿಕೊಂಡು ಬಂದಿರುವ ನಿನ್ನ ಸಾಮರ್ಥ್ಯವನ್ನು ಎಷ್ಟು ಹೊಗಳಿದರೂ ಹೊಗಳಬಹುದಾಗಿದೆ, ಈ ದಿನ ದೊಡ್ಡ ಕೆಲಸವನ್ನು ಮಾಡಿರುವಿ.

ಪ್ರಿಯನಾಥ—ಸರಿಸರಿ. ಹೊಗಳಿಕೆ ಬೇಡ. ನಿನ್ನ ಅನುಗ್ರಹದಿಂದ ಏನನ್ನು ಬೇಕಾದರೂ ಮಾಡಲು ಶಕ್ತನಿರುವೆನು. ಮದನನು ಎಲ್ಲಿಲ್ಲಿ ತಿರುಗಿ ಬಂದನು?

ಮದನನು ಭಿಕ್ಷುಕವೇಷದಿಂದ ಹೋಗಿ ನೋಡಿ ಬಂದ ರಂಗಾಚಾರ್ಯರ ವಿಚಾರವನ್ನು ತಿಳಿಸಿದನು.

ಮೋಹನ—ನಾನು ಸಾಧಾರಣ ವೇಷದಿಂದಲೇ ಅಲ್ಲಲ್ಲಿ ತಿರುಗಿ ಮಿಲ್ಲಿನ ಕೆಲಸಗಾರರು ವಾಸಿಸತಕ್ಕ ಸ್ಥಲಕ್ಕೆ ಹೋದೆನು. ಅವರ ಸ್ಥಿತಿಯನ್ನು ನೋಡಿ ನನ್ನ ಮನವು ವ್ಯಾಕುಲಿತವಾಗಿದೆ. ಪ್ರಾಯಃ ಎಲ್ಲರಿಗೂ ಯಾವುದಾದರೊಂದು ದುರಭ್ಯಾಸವಿದ್ದೇ ಇತ್ತು.

ಕೆಲವರಿಗೆ ಬೀಡಿಸೇವನೆ ಕೆಲವರಿಗೆ ಅಫೀಮ್‌ಸೇವನೆ, ಕೆಲವರಿಗೆ ಇಸ್ಪೀಟ್, ಕೆಲವರಿಗೆ ಮದ್ಯಸೇವನೆ ಹೀಗೆ ಒಂದಿಲ್ಲದಿದ್ದರೂ ಒಂದು ಕೆಟ್ಟ ಮಾರ್ಗವಿತ್ತು. ಸಿಕ್ಕತಕ್ಕ ಅಲ್ಪಸ್ವಲ್ಪ ಹಣದಿಂದ ಇಂತಹ ದುರ್ವ್ಯಯವನ್ನೇ ಮಾಡುತ್ತಿರುವರು. ಗುಡಿಸಲುಗಳಲ್ಲಿ ಅವರ ಹೆಂಡಿರು-ಮಕ್ಕಳು ಉಣ್ಣಲು ಹಿಡಿ ಅನ್ನಕ್ಕೂ, ಉಡಲು ಹರಕು ಬಟ್ಟೆಗೂ ಗತಿಯಿಲ್ಲದೆ ಪೇಚಾಡುತ್ತಿರುವರು. ಪ್ರತಿ ಮಿಲ್ಲುಗಳಲ್ಲಿನ ಕೂಲಿಗಾರರ ಅವಸ್ಥೆಯೂ ಹೀಗೇ ಸರಿ.

“ಇವರನ್ನೆಲ್ಲಾ ಹೇಗಾದರೂ ಮಾಡಿ ದಾರಿಗೆ ತಂದು ಕೈಯಲಾದ ಸಹಾಯ ಮಾಡಬೇಕೆಂದು” ಯೋಚಿಸಿ ಅವರನ್ನು ಒಟ್ಟುಗೂಡಿಸಿ ಅವರೀಗ ಅಭ್ಯಾಸ ಮಾಡಿದ ಕೆಟ್ಟ ನಡತೆಗಳಿಂದಾಗುವ ದುಃಖವನ್ನು ವರ್ಣಿಸಿ “ಇನ್ನಾದರೂ ಇಂತಹ ನಡತೆಗಳನ್ನು ಮನಃಪೂರ್ವಕವಾಗಿಯೂ, ಪ್ರಮಾ

ಣಪೂರ್ವಕವಾಗಿಯೂ ಬಿಡಬೇಕು. ಎಲ್ಲಾ ಕೂಲಿಗಾರರೂ ಈ ರೀತಿ ನಡೆಯಬೇಕು. ಬರುವ ಆದಿತ್ಯವಾರದಲ್ಲಿ ತಿರುಗಿ ನಾನೀ ಸ್ಥಳಕ್ಕೆ ಬರುವೆನು. ಆ ಕಾಲದೊಳಗೆ ನೀವೆಲ್ಲರೂ ದುರಭ್ಯಾಸಗಳಿಂದ ದೂರವಾಗಿರುವುದು. ನನಗೆ ನಿಜವಾಗಿ ತಿಳಿದರೆ ಪ್ರತಿ ಒಬ್ಬೊಬ್ಬರಿಗೂ ನೂರು ನೂರು ರೂಪಾಯಿಗಳನ್ನೂ ಕೊಡುತ್ತೇನೆ" ಎಂದು ಹೇಳಿ ಬಂದೆನು.

ಅವರು ಪ್ರಮಾಣ ಮಾಡಿದಂತೆ ಕೆಟ್ಟ ನಡತೆಗಳನ್ನು ಬಿಟ್ಟರೆ ಆ ಕಾರ್ಯಕ್ಕಾಗಿ ಹಣವನ್ನೆಲ್ಲಿಂದ ತರುವುದೆಂದು ಯೋಚಿಸಿದೆನು; ಆದರೆ ನೀವಿಬ್ಬರದಕ್ಕಾಗಿ ನೋಡಿ ಬಂದಾಗಿದೆ. ಇನ್ನು ಮುಂದಿನ ಕಾರ್ಯವು ನೆರವೇರಿದಂತೆಯೇ ಸರಿ.

ಅನಂತರ ಸ್ವಲ್ಪಹೊತ್ತು ಮುಂದಿನ ಕಾರ್ಯಕ್ಕಾಗಿ ಆಲೋಚಿಸಿದರು. ಮೋಹನನೊಂದು ಕಾಗದವನ್ನು ಬರೆದನು.

"ಮ| ರಾ| ರಾ| ಗುರುನಾಥರಾಯರ ಸ|| ಕ್ಕೆ ಈ ಊರಿನಲ್ಲಿ ಎಲ್ಲಾ ಶ್ರೀಮಂತರಿಗಿಂತಲೂ ನೀವೇ ಹೆಚ್ಚಿನವರೆಂದು ತಿಳಿದು ನಿಮ್ಮನ್ನೊಂದು ವಿಚಾರಕ್ಕಾಗಿ ಪ್ರಾರ್ಥಿಸುತ್ತೇನೆ. ನಿಮ್ಮ ಜನ್ಮಭೂಮಿಯಾದ ಈ ಪಟ್ಟಣದಲ್ಲಿ ಸಾವಿರಾರು ಜನ ಕೂಲಿಗಾರರು ಹೊಟ್ಟೆಬಟ್ಟೆಗೆ ಗತಿಯಿಲ್ಲದೆ ನಾನಾವಿಧವಾದ ದುರಭ್ಯಾಸಗಳಿಗೆ ಸಿಲುಕಿ ದುಃಖಿಸುತ್ತಿರುವರು.

ನಿಮ್ಮ ದೇಶದವರು ದುಃಖಪಡುವುದನ್ನು ವಿಚಾರಿಸಿ ಅವರನ್ನು ಸನ್ಮಾರ್ಗಕ್ಕೆ ತಂದು ರಕ್ಷಿಸಬೇಕಾದುದು ನಿಮ್ಮಂತಹ ಶ್ರೀಮಂತ ಜನರ ಮುಖ್ಯ ಕರ್ತವ್ಯವಾಗಿದೆ. ಈಗ ನೀವಾದರೂ ಅದಕ್ಕಾಗಿ ಯತ್ನಿಸದೆ ಇದ್ದರೂ ನಾನು ಅದನ್ನು ಚನ್ನಾಗಿ ವಿಚಾರಿಸಿ ಅವರ ದುರಭ್ಯಾಸಗಳಿಂದುಂಟಾಗುವ ನಾನಾವಿಧವಾದ ಸಂಕಟಗಳನ್ನು ವಿವರಿಸಿ "ಇನ್ನು ಮೇಲೆ ಆ ಕೆಟ್ಟ ನಡತೆಗಳನ್ನೆಲ್ಲಾ ಬಿಟ್ಟುಬಿಡುತ್ತೇವೆಂದು ಅವರಿಂದ ಪ್ರತಿಜ್ಞಾಪೂರ್ವಕವಾಗಿ ಭಾಷೆಯನ್ನು ತೆಗೆದುಕೊಂಡು ಬಂದಿರುವೆನು; ಮತ್ತು "ಆ ಭಾಷೆ ಕೊಟ್ಟಂತೆ ಇನ್ನೆಂಟು ದಿನಗಳಲ್ಲಿ ದುರಭ್ಯಾಸಗಳನ್ನೆಲ್ಲವನ್ನೂ ಬಿಟ್ಟರೆ ಪ್ರತಿ ಒಬ್ಬನಿಗೂ ನೂರು ನೂರು ರೂಪಾಯಿಗಳನ್ನು ಕೊಡುತ್ತೇನೆಂ"ದು ಹೇಳಿರುವೆನು. ನಿಮ್ಮ ದೇಶೀಯರು ಸನ್ಮಾರ್ಗಿಗಳಾಗಿ ವೃದ್ಧಿ ಹೊಂದುವುದು ನಿಮಗೆ ಸಂತೋಷ

ವಲ್ಲವೇ? ಆ ಸಂತೋಷಸೂಚಕವಾಗಿ ದಯವಿಟ್ಟು ಪ್ರತಿಯೊಬ್ಬರಿಗೂ ನಾನು ತಿಳಿಸಿ ಬಂದಂತೆ ಹಣವನ್ನು ಕೊಡಬೇಕಾಗಿ ಕೋರುತ್ತೇನೆ.

ಇತಿ ನಿಮ್ಮ ಪರಿಚಯಾಪೇಕ್ಷಿ ಮೋಹನ."

ಯಾಥಾ ಕಾಲದಲ್ಲಿ ಪತ್ರವು ರಾಯರಿಗೆ ಮುಟ್ಟಿತು.

ರಾಯರು ಹಿಂದಿನಿಂದಲೂ ಪತ್ರಿಕೆಗಳಿಂದ ಮೋಹನನ ವಿಚಾರವನ್ನು ಅರಿತಿದ್ದರು. ಸುವರ್ಣನಗರಕ್ಕೆ ಬಂದು ಪತ್ತೇದಾರರಿಗೆ ಮೋಸಪಡಿಸಿದ ವಿಚಾರವೂ ತಿಳಿದಿತ್ತು. ಆದಾಗ್ಯೂ ಮೋಹನನ ಕಾಗದದಂತೆ ಹಣವನ್ನು ಕೊಡಲಿಚ್ಛಿಸಲಿಲ್ಲ. ಸಾವಿರಾರು ಜನರಿಗೆ ನೂರು ನೂರು ರೂಪಾಯಿಗಳಂತೆ ವ್ಯರ್ಥವಾಗಿ ಕೊಡುವುದೆಂದರೆ ಯಾರಿಗಾದರೂ ಇಚ್ಛೆ ಬಂದೀತೆ?

ತನ್ನ ಕಾಗದದಂತೆ ಗುರುನಾಥರಾಯರು ಹಣವನ್ನು ಕೊಡುತ್ತಾರೋ ಇಲ್ಲವೋ ಎಂದು ಸಂಶಯ ಪಟ್ಟು ಅಷ್ಟರಲ್ಲಿ ರಂಗಾಚಾರ್ಯರನ್ನು ವಿಚಾರಿಸಿಕೊಳ್ಳಬೇಕೆಂದು ಯೋಚಿಸಿ ಮದನನನ್ನು ರಂಗಾಚಾರ್ಯರ ಮನೆಗೆ ಕಳುಹಿಸಿದನು. ಮದನನು ಆಚಾರ್ಯರ ಮನೆಗೆ ಬಂದಾಗ ಮಧ್ಯಾಹ್ನಸಮಯವಾಗಿತ್ತು. ತಮ್ಮ ಕೆಲಸಕ್ಕೆ ಬಂದ ಎರಡು-ಮೂರು ಜನರು ಹೊರಟು ಹೋದ ಮೇಲೆ ಮದನನು ಆಚಾರ್ಯರನ್ನು ನೋಡಿದನು.

ಹೇಳಿದನು—"ಸ್ವಾಮಿ! ನಾನು ಕಾಳಿಕಾಬೀದಿಯ ಯಮುನಾನಾಥರಾಯರ ಮನೆಯಿಂದ ಬಂದೆನು. ನಾಳೆ ಒಂದು ಕಾರ್ಯಕ್ಕಾಗಿ ಅವರಿಗೆ ಇಪ್ಪತ್ತುಸಾವಿರ ರೂಪಾಯಿಗಳು ಬೇಕಾಗಿವೆ ಅದಕ್ಕಾಗಿ ನಿಮ್ಮ ಮನ ಒಪ್ಪುವಂತೆ ಆಭರಣಗಳನ್ನು ಅಡಾ ಇಡುತ್ತಾರಂತೆ.

ನಿಮ್ಮಲ್ಲಿ ಅಷ್ಟು ರೂಪಾಯಿ ಈಗ ಇದೆಯೇ? ಎಂಬುದನ್ನು ತಿಳಿಯುವದಕ್ಕಾಗಿ ನಾನು ಬಂದಿರುತ್ತೇನೆ.

ರಂಗಾಚಾರರು—ಸಿಕ್ಕಬಹುದು. ಅವರು ಯಾವಾಗ ಇಲ್ಲಿಗೆ ಬರುವರು?

ಮದನ—ಈ ದಿನ ಸಾಯಂಕಾಲ ಇಲ್ಲಿಗೆ ಬರುವರು.

ರಂಗಾಚಾರ್ಯರು—(ಸ್ವಲ್ಪ ಸಂದೇಹಪಟ್ಟು) ಸಾಯಂಕಾಲ ನಾನು ಸಿಕ್ಕುವೆನೋ ಇಲ್ಲವೊ ಹೇಳಲಾರೆನು.

ಮದನ—(ಸ್ವಲ್ಪ ಯೋಚಿಸಿ) ಸಾಯಂಕಾಲ ಏಳು ಘಂಟೆಯವರೆಗೆ ಅವರಿಗೊಂದು ಕಾರ್ಯವಿದೆ. ಅದಕ್ಕಾಗಿ ರಾತ್ರಿ ಬರುತ್ತೇನೆಂದು ಹೇಳಿದರು. ಅವಕಾಶವಿದ್ದರೆ ಸಾಯಂಕಾಲ ೫ ಘಂಟೆಗೆ ಬರುವರು. ಆಗ ಬರಲು ಸಾಧ್ಯವಿಲ್ಲದೆ ಹೋದರೆ ಸಾಯಂಕಾಲ ಬರುವರು.

ರಂಗಾಚಾರ್ಯರು—ಆಗಲಿ.

ಮದನನು ಅಲ್ಲಿಂದ ಹೊರಟು ಹೋದನು. ರಂಗಾಚಾರ್ಯರಿಗೆ ಮದನನ ಗುರುತು ಸಿಕ್ಕದೆ ಇದ್ದರೂ ಮದನನು ರಂಗಾಚಾರ್ಯರ ಗುರುತನ್ನು ಕಂಡು ಹಿಡಿದಿದ್ದನು.

ಇದೇ ರಂಗಾಚಾರ್ಯರು ೮ ತಿಂಗಳ ಹಿಂದೆ ಒಂದೂರಿನಲ್ಲಿ ಒಬ್ಬ ಧನಿಕನ ಮನೆಯಲ್ಲಿ ಅಡಿಗೆ ಕೆಲಸಕ್ಕೆ ಇದ್ದು ಒಂದು ಸಣ್ಣ ತಪ್ಪಿಗಾಗಿ ಯಜಮಾನನಿಂದ ಪೆಟ್ಟುಗಳನ್ನು ತಿಂದು ಆನಂತರ ಆ ಯಜಮಾನನ ಮೇಲಿನ ಕೋಪವನ್ನು ತೀರಿಸಿಕೊಳ್ಳಲು ಹೊಂಚುಹಾಕಿ ಗುಟ್ಟಾಗಿ ಆ ಯಜಮಾನನ ಮನೆಯಿಂದ ಬೆಲೆ ಬಾಳುವ ರತ್ನಪಡಿ ಆಭರಣಗಳನ್ನೂ, ಸಾವಿರಾರು ರೂಪಾಯಿಗಳನ್ನೂ ಕದ್ದು ಅಲ್ಲಿಂದ ಓಡಿ ಬಂದು ಸುವರ್ಣನಗರದಲ್ಲಿ ಈಗ ರಂಗಾಚಾರ್ಯರೆಂಬ ಹೆಸರಿನಿಂದ ಅಡಾ ಇಟ್ಟುಕೊಂಡು ಹಣವನ್ನು ಕೊಡುವ ಕೆಲಸದಲ್ಲಿ ನಿರತರಾಗಿದ್ದರು. ಆಚಾರ್ಯರ ಅದೃಷ್ಟವು ಒಳ್ಳೇದಾಗಿದ್ದುದರಿಂದ ಅವರ ಮೇಲೆ ಯಾರೂ ಕಣ್ಣು ಇಟ್ಟಿರಲಿಲ್ಲ.

ಆದರೆ ಈಗ ಮಾತ್ರ ಸ್ವಲ್ಪ ಅದೃಷ್ಟವು ಕೆಟ್ಟು ಮದನನ ಕಣ್ಣಿಗೆ ಗೋಚರರಾದರು.

ರಾತ್ರಿ ೭॥ ಗಂಟೆಯ ಸಮಯದಲ್ಲಿ ಮೋಹನನು ಮದನನನ್ನು ಮೊದಲೇ ಆಚಾರ್ಯರ ಮನೆಗೆ ಕಳುಹಿಸಿ ಪ್ರಿಯನಾಥನನ್ನು ಕರೆದುಕೊಂಡು ಮೋಟಾರ್‌ಸೈಕಲ್ಲಿನಲ್ಲಿ ರಂಗಾಚಾರ್ಯರ ಮನೆಗೆ ಬಂದನು. ಮೋಹನನು ಬಂದಾಗ ಎಂಟೂವರೆ ಗಂಟೆಯಾಗಿತ್ತು. ಆಚಾರ್ಯರು ಮೋಹನನನ್ನು ಸನ್ಮಾನದಿಂದ ಮನೆಯೊಳಗೆ ಕರೆದುಕೊಂಡು ಹೋದರು.

ಆಚಾರ್ಯರು ಕುಳಿತುಕೊಳ್ಳಲು ಬಗ್ಗಿದೊಡನೆ ಪ್ರಿಯನಾಥನು ಹಾರಿ ನೆಲಕ್ಕೆ ಕೆಡವಿದನು. ಕೂಗದಂತೆ ಮದನನು ಬಾಯಿಗೆ ಬಟ್ಟೆಯನ್ನು ತುರು

ಕಿದನು. ಕ್ಷಣದಲ್ಲಿ ಆಚಾರ್ಯರು ಕೈಕಾಲು ಬಂಧಿಸಲ್ಪಟ್ಟು ಮೂಲೆಯೊಂದರಲ್ಲಿ ಉರುಳಿಸಲ್ಪಟ್ಟರು.

ಮೋಹನನು ಅವರ ಯಜ್ಞೋಪವೀತದಿಂದ ಬೀಗದಕೈಯನ್ನು ತೆಗೆದುಕೊಂಡು ಅಲ್ಲಿದ್ದ ದೊಡ್ಡ ಪೆಟ್ಟಿಗೆಯೊಂದನ್ನು ತೆರೆದು ಬೇಕಾದುದನ್ನು ಸಂಗ್ರಹಿಸಿಕೊಂಡು ಒಂದು ಕಾಗದದಲ್ಲಿ "ಮೋಹನ ಎಂದು ಬರೆದಿಟ್ಟು ಹೊರಗೆ ಬಂದನು. ಎಲ್ಲರೂ ಹಿಂದಿರುಗಿದರು.

ಮಾರುದಿನ ರಾಕಾಚಂದ್ರನಿಗೆ ಕಾಗದವೊಂದು ಬಂದಿತು.

"ಪತ್ತೇದಾರಿ ಮಹಾಶಯರ ಸನ್ನಿಧಿಯಲ್ಲಿ.

ಈ ಪಟ್ಟಣದ ಬ್ರಾಹ್ಮಣರ ಕೇರಿಯಲ್ಲಿರುವ ರಂಗಾಚಾರ್ಯರು ಬಹು ಲೋಕೋಪಕಾರಿಗಳಾಗಿ ನಿನ್ನೆ ಸಾಯಂಕಾಲ ನನಗೆ ಇಪ್ಪತ್ತುಸಾವಿರ ರೂಪಾಯಿಗಿಂತಲೂ ಹೆಚ್ಚಾಗಿ ದಾನ ಮಾಡಿರುವರು. ಈಗ ನೀವೇನು ಮಾಡುತ್ತಿರುವಿರಿ.

ಇತಿ ಮೋಹನ."

ರಾಕಾಚಂದ್ರನು ಕಾಗದವನ್ನೋದಿ ರಂಗಾಚಾರ್ಯರ ಮನೆಗೆ ಬಂದು ಹಿಂದಿನ ರಾತ್ರಿ ನಡೆದುದನ್ನು ವಿಚಾರಿಸಿದನು. ಆಚಾರ್ಯರು "ಬಲಾತ್ಕಾರದಿಂದ ಮೋಹನನು ಬಂದು ತಮ್ಮ ಹಣವನ್ನು ಅಪಹರಿಸಿರುವನೆ"ಂದು ಹೇಳಿದರು. ತಾವು ಮೋಸಪಟ್ಟ ರೀತಿಯನ್ನು ವಿವರಿಸಲೇ ಇಲ್ಲ. ಅದು ಪೋಲೀಸರಿಗೆ ತಿಳಿಯಿತೆಂದರೆ ತಮ್ಮ ಹಿಂದಿನ ಗುಟ್ಟು ರಟ್ಟಾಗಿ ಜೈಲಿಗೆ ಹೋಗಬೇಕಾಗುವುದೆಂದು ಆಚಾರ್ಯರು ಅರಿತು ಸುಮ್ಮನಿದ್ದರು. ರಾಕಾಚಂದ್ರನು ಹೊರಟು ಹೋದ ಮೇಲೆ ರಂಗಾಚಾರ್ಯರಿಗೊಂದು ಕಾಗದ ಬಂದಿತು.

"ಆಚಾರ್ಯರೇ? ನಿಮ್ಮ ಸಕಲ ವೃತ್ತಾಂತವೂ ನಮಗೆ ತಿಳಿದಿದೆ. ಯಾರ ಕಣ್ಣನ್ನು ಮುಚ್ಚಿದರೂ ದೇವರ ಕಣ್ಣನ್ನು ಮುಚ್ಚಲಾರಿರಿ. ನೀವು ಮಾಡಿರುವ ಅನ್ಯಾಯಕ್ಕೆ ಈ ಪ್ರಾಯಶ್ಚಿತ್ತವು ಅಲ್ಪವೇ ಸರಿ. ಇದಕ್ಕಿಂತಲೂ ಅಧಿಕವಾಗಿ ಶಿಕ್ಷಿಸಲು ಈಶ್ವರನಿರುವನು.

ಇನ್ನು ಮುಂದಾದರೂ ನಿಮ್ಮ ಆ ಹಾಳು ಅನ್ಯಾಯವನ್ನೆಲ್ಲಾ ಬಿಟ್ಟು ಸನ್ಮಾರ್ಗದಿಂದಿರಿ. ಇದಕ್ಕೂ ಮೀರಿದರೆ ಸದ್ಯದಲ್ಲಿಯೇ ಅದರ ಫಲವನ್ನು

ಅನುಭವಿಸುವಿರಿ. ನಾವು ನಿಮ್ಮ ಹಣವನ್ನು ಸರಿಯಾಗಿ ವಿನಿಯೋಗಿಸುವುದನ್ನು ನೋಡಿ ಆನಂದಪಡಿರಿ.

ಇತಿ ಮೋಹನ."

ಮೋಹನನು ಆದಿತ್ಯವಾರದವರೆಗೆ ನಿರೀಕ್ಷಿಸಿದರೂ ಗುರುನಾಥರಾಯರು ಕಾಗದದಂತೆ ಮುಂದುವರಿಯದೆ ಇದ್ದದ್ದನ್ನು ನೋಡಿ ಆಚಾರ್ಯರಿಂದ ಸಂಗ್ರಹಿಸಿದ ಹಣದ ಜೊತೆಗೆ ಬೇರೆ ಕಡೆಯಿಂದ ತಂದಿರುವುದನ್ನು ಸೇರಿಸಿ ಕೂಲಿಗಾರರ ಗುಡಿಸಲುಗಳನ್ನು ಸೇರಿ ಅವರು ಸನ್ಮಾರ್ಗಿಗಳಾದುದನ್ನು ಕಂಡು ಸಂತೋಷಿಸಿ ಹಿಂದೆ ಹೇಳಿದಂತೆ ಹಣವನ್ನಿತ್ತು ಹಿಂದಿರುಗಿದನು.

ಮೋಹನನ ಈ ಔದಾರ್ಯವು ಸುವರ್ಣನಗರವನ್ನು ಬೆರಗು ಮಾಡಿತು. ಅವನನ್ನು ದ್ವೇಷಿಸುವ ಜನರೇ ವಿರಳರಾದರು.

---

## ಚತುರ್ಥ ಗುಚ್ಛ.

ಸುವರ್ಣನಗರವು ಹೇರಂಬಾನದಿಯ ಧಡದಲ್ಲಿದ್ದು ದೊಡ್ಡ ರೇವು ಪಟ್ಟಣವಾಗಿತ್ತು. ನದಿಯ ಒಂದು ಪಾರ್ಶ್ವದಲ್ಲಿ ಪಟ್ಟಣವಿದ್ದು ಇನ್ನೊಂದು ಪಾರ್ಶ್ವದಲ್ಲಿ ಎತ್ತರವಾದ ಪರ್ವತಗಳು ಕಂಗೊಳಿಸುತ್ತಿದ್ದವು. ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ನದಿಯ ಮರಳಿನ ದಿಣ್ಣೆಯ ಮೇಲೆ ನಿಂತು ಒಂದು ಪಾರ್ಶ್ವದಲ್ಲಿ ಎತ್ತರವಾದ ಪರ್ವತದ ಸಾಲುಗಳನ್ನೂ, ಇನ್ನೊಂದು ಭಾಗದಲ್ಲಿ ಪಟ್ಟಣದ ಎತ್ತರವಾದ ಉಪ್ಪರಿಗೆ ಮನೆಗಳನ್ನೂ ನೋಡಿ ಆನಂದಿಸುವ ಯೋಗವು ಸುವರ್ಣನಗರದ ಜನಗಳಲ್ಲೊಬ್ಬರಿಗೂ ತಪ್ಪುತ್ತಿರಲಿಲ್ಲ. ಅಂತಹ ನಯನಮನೋಹರವಾದ ಸ್ಥಳವು ಯಾರ ಮನಸ್ಸನ್ನು ತಾನೇ ಸೆಳೆಯಲಾರದೆ ಹೋದೀತು?

ಈ ದಿನ ಸೋಮವಾರ. ಸಂಜೆಯು ಐದುಗಂಟೆಯಿರಬಹುದು. ಹೇರಂಬಾನದಿಯ ಮಳಲಿನ ಪುಲಿನದಲ್ಲಿ ನೆರೆದ ಜನರನ್ನು ತಂಗಾಳಿಯು ಮಂದಮಂದನೆ ಬೀಸುತ್ತಿದ್ದು ಆನಂದಗೊಳಿಸುತ್ತಿತ್ತು. ದೊಡ್ಡದೊಡ್ಡ ಶ್ರೀಮಂತ ಜನರೂ, ಉಚ್ಚತರಗತಿಯ ಅಧಿಕಾರಿಗಳೂ ತಮ್ಮ ತಮ್ಮ ಮೋಟಾರು

ಗಳನ್ನು ರಸ್ತೆಯ ಪಕ್ಕದಲ್ಲಿ ನಿಲ್ಲಿಸಿ ಮರಳಿನ ದಿಣ್ಣೆಯ ಮೇಲೆ ಕುಳಿತು ಮಿತ್ರ ರೊಡನೆ ಸಂಭಾಷಿಸುತ್ತಿದ್ದರು. ಅಲ್ಪ ತರಗತಿಯ ಜನರೂ, ಕಾಲೇಜು ವಿದ್ಯಾರ್ಥಿಗಳೂ, ಸೈಕಲ್ಲು, ಜಟಕಾ ಬಂಡಿಗಳಲ್ಲಿ ಬರುತ್ತಿದ್ದರು. ಇನ್ನೂ ಕೆಳತರಗತಿಯ ಜನರು ನಡೆದು ಬರುತ್ತಿದ್ದರು. ವಿಲಾಸಿಗಳಾದ ತರುಣ ಯುವಕರು ಪಾದಚಾರಿಗಳಾಗಿ ತಮ್ಮ ತರುಣಿಯರ ಹೆಗಲಮೇಲೆ ಕೈಯಿಟ್ಟು ಮಂದಗಮನದಿಂದ ಬರುತ್ತಿದ್ದರು. ಕೆಲ ತರುಣರು ರಮಣಿಯರೊಡನೆ ಮೋಟಾರಿನಲ್ಲಿ ಕುಳಿತು ನದಿಯ ತೀರದ ರಸ್ತೆಯಲ್ಲಿಯೇ ಇತ್ತಿಂದತ್ತ ವಿಲಾಸ ದಿಂದ ತಿರುಗುತ್ತಿದ್ದರು. ಕೆಲ ತರುಣಿಯರು ರಮಣರನ್ನು ಪಕ್ಕದಲ್ಲಿ ಕೂರಿಸಿ ಕೊಂಡು, ಕೆಲವು ತರುಣಿಯರು ಏಕಾಕಿನಿಯರಾಗಿಯೂ ತಾವೇ ಮೋಟಾ ರನ್ನು ನಡಿಸುತ್ತಾ ಸಂಚರಿಸುತ್ತಿದ್ದರು, ಕೆಲವೆಡೆಗಳಲ್ಲಿ ನದಿಯೊಳಗೆ ವಿಲಾ ಸಿಗಳಾದ ವಿದೇಶೀಯರು ಮಿತ್ರರೊಂದಿಗೂ, ತರುಣಿಯರೊಂದಿಗೂ ಜಲ ಕ್ರೀಡೆಯನ್ನಾಡುತ್ತಿದ್ದರು. ದಿಣ್ಣೆಯ ಮಧ್ಯದಲ್ಲಿ ಕಾರ್ಪೊರೇಷನ್ನಿನವರಿಂದ ಏರ್ಪಡಿಸಲ್ಪಟ್ಟ "ರೇಡಿಯೋ"ದಿಂದ ಕೇಳಿಸುತ್ತಿರುವ ಸಂಗೀತವನ್ನು ಸಾನಂದ ವಾಗಿ ಆಲಿಸಲು ಯಂತ್ರಸ್ತಂಭದ ಹತ್ತಿರ ಸಾವಿರಾರು ಜನರು ಸೇರುತ್ತಿದ್ದರು.

ಹೆಚ್ಚಾಗಿ ಏನು ವರ್ಣಿಸಲಿ? ಅಂತಹ ಮನಮೋಹಕವಾದ ನೋಟ ವನ್ನನುಭವಿಸಿಯೇ ಆನಂದಿಸಬೇಕಲ್ಲದೆ ವರ್ಣಿಸಲಸಾಧ್ಯ. ಕ್ರಮೇಣ ಸೂರ್ಯನು ಅಸ್ತಾಚಲವನ್ನು ಸೇರಲುಪಕ್ರಮಿಸಿದನು. ಒಬ್ಬೊಬ್ಬರು ಮೆಲ್ಲಮೆಲ್ಲಗೆ ತಮ್ಮ ತಮ್ಮ ಭವನಕ್ಕೆ ಹೊರಡಲುಪಕ್ರಮಿಸಿದರು. ಎಲ್ಲೆಲ್ಲಿಯೂ ಮಾರ್ಗ ಗಳಲ್ಲಿ ಎಲೆಕ್ಟ್ರಿಕ್ ದೀಪಗಳು ಪ್ರಜ್ವಲಿಸಲಾರಂಭಿಸಿದವು

ಏಳೂವರೆ ಗಂಟೆಗೆ ರೇಡಿಯೋವಿನ ಸಂಗೀತವು ಮುಗಿಯಿತು. ತೀರ ದಲ್ಲಿ ಜನರು ವಿರಳರಾದರು.

ನಿತ್ಯದಂತೆ ವಾಯುಸೇವನೆಗಾಗಿ ಬಂದಿದ್ದ ಗುರುನಾಥರಾಯರು ವಕೀಲ ರೊಬ್ಬರೊಡನೆ ಮಾತನಾಡುತ್ತಾ ಕುಳಿತಿದ್ದರು. ಎಂಟು ಗಂಟೆಯಾಯಿತು.

ರಾಯರು ತಮ್ಮ ಮೋಟಾರಿನ ಹತ್ತಿರ ಬಂದು ಅದನ್ನು ಆರೋಹಿ ಸಿದರು. ಡ್ರೈವರನು ಮೋಟಾರನ್ನು ಗೃಹಾಭಿಮುಖವಾಗಿ ಬಿಟ್ಟನು. ಎರಡು ಮೈಲು ದೂರ ಮೋಟಾರು ಹೋದೊಡನೆ ಮುಂಭಾಗದಲ್ಲೊಂದು

ಮೋಟಾರ್ ವೇಗವಾಗಿ ಬಂದಿತು. ಎರಡಕ್ಕೂ ಢಿಕ್ಕಿ ಹೊಡೆಯಬಹುದೆಂದು ರಾಯರ ಮೋಟಾರ್ ಫಕ್ಕನೆ ನಿಂತಿತು. ಮುಂಭಾಗದ ಮೋಟಾರೂ ನಿಂತು ಅದರಿಂದ ಥಟ್ಟನೆ ಒಬ್ಬ ತರುಣನು ಇಳಿದು ಬಂದು 'ಢಂ' ಎಂದು ಗುಂಡೊಂದನ್ನು ರಾಯರ ಮೇಲೆ ಹಾರಿಸಿ ಮೋಟಾರ್ ಹತ್ತಿ ಓಡಿ ಹೋದನು.

ರಾಯರ ಕಾಲಿಗೆ ಗುಂಡು ತಾಗಿತ್ತು. ಮೋಟಾರಿನಲ್ಲಿ ಡ್ರೈವರ್ ಮತ್ತು ರಾಯರನ್ನು ಬಿಟ್ಟು ಇನ್ನಾರೂ ಇರಲಿಲ್ಲ. ಭೀತನಾದ ಡ್ರೈವರನು ಬೇರೆ ಗತಿಯನ್ನು ಕಾಣದೆ ಮೋಟಾರನ್ನು ವೇಗವಾಗಿ ಮನೆಯ ಕಡೆ ಬಿಟ್ಟನು. ಮನೆಯ ಹತ್ತಿರ ನಿಂತೊಡನೆ ಸಮಾಚಾರವು ಮನೆಯೊಳಗೆ ಹರಡಿ ನಾಲ್ಕಾರು ಜನರು ಬಂದು ಮೋಟಾರಿನಿಂದ ರಾಯರನ್ನು ಮನೆಯೊಳಗೆ ಸಾಗಿಸಿದರು. ಕೂಡಲೆ ಪ್ರಸಿದ್ಧ ಡಾಕ್ಟರುಗಳಿಗೆ ವರ್ತಮಾನವು ಹೋಗಿ ಡಾಕ್ಟರುಗಳು ಬಂದು ರಾಯರಿಗೆ ಚಿಕಿತ್ಸೆ ನಡಿಸಿದರು.

'ಪ್ರಾಣಾಪಾಯವಿಲ್ಲ'ವೆಂದು ತಿಳಿದು ಎಲ್ಲರೂ ಸ್ವಲ್ಪ ಸಮಾಧಾನ ಚಿತ್ತರಾದರು. ಕ್ರಮೇಣ ಡಾಕ್ಟರರ ಚಿಕಿತ್ಸೆಯಿಂದ ರಾಯರಿಗೆ ಸ್ವಲ್ಪ ಅನುಕೂಲವಾಯಿತು.

ಮಂಗಳವಾರದಿನ ರಾಯರ ವಿಳಾಸಕ್ಕೊಂದು ಕಾಗದ ಬಂದಿತು ಅದೀಪರೀತಿ ಇತ್ತು.

"ಪ್ರಿಯ ಶ್ರೀಮಂತರೇ,

ನಾನೀಗ ಒಂದುಬಾರಿ ಸಿಕ್ಕಿದರೆ ನುಂಗಿ ಬಿಡುವಷ್ಟು ಕ್ರೋಧವು ನಿಮ ಗೆಲ್ಲರಿಗೂ ಬಂದಿರಬಹುದಷ್ಟೆ.

ಬರುವುದೂ ಸಹಜವೇ. ಅದಕ್ಕಾಗಿ ಮಾಡುವುದೇನು? ನೀವಿಷ್ಟು ದೊಡ್ಡ ಧನಿಕರಾಗಿ ನಿಮ್ಮ ದೇಶದ ಬಡಜನಗಳಿಗೆ ಸ್ವಲ್ಪ ಸಹಾಯವನ್ನು ಮಾಡಿರಿಯೆಂದು ಕಾಗದವನ್ನು ಬರೆದರೆ ನಿಮಗದರಲ್ಲಿ ಅಸಡ್ಡೆಯುಂಟಾಯಿ ತಲ್ಲವೇ? ಇನ್ನಾದರೂ ನಾನಂದಂತೆ ಮಾಡಿರಿ. ನಿಮಗದರಿಂದ ಹೆಚ್ಚೇನೂ ಖರ್ಚಾಗಲಾರದು.

ಇದಕ್ಕೂ ತಪ್ಪಿದರೆ ನಿಮಗೆ ಹೆಚ್ಚಿನ ಹಾನಿಯುಂಟಾದೀತು. ಜಾಗ ರೂಕರಾಗಿರಿ. ಇತಿ ಮೋಹನ."

ಗುರುನಾಥರಾಯರು ಭೀತಿಯಿಂದ ಹೆಚ್ಚಿಗೆ ಯಾವ ವಿಚಾರವನ್ನೂ ಮಾಡದೆ ಒಡನೆ ತಮ್ಮನಿಂದ ಹಣವನ್ನು ಕಳುಹಿಸಿ ಮೋಹನನ ಇಷ್ಟದಂತೆ ಕೊಡಿಸಿದರು.

† † †

ಬುಧವಾರ ಸುಖಾನಂದನ ಒಂದು ಕಾರ್ಯದ ನಿಮಿತ್ತವಾಗಿ ರಾಕಾ ಚಂದ್ರನೂ, ಸುಖಾನಂದನೂ ಸುವರ್ಣನಗರದ ಹತ್ತಿರವಿದ್ದ ಒಂದು ಹಳ್ಳಿಗೆ ಹೋಗಿ, ಕಾರ್ಯವನ್ನು ಮುಗಿಸಿ ಸುವರ್ಣನಗರಕ್ಕೆ ಹಿಂದಿರುಗಿ ಬರುತ್ತಿದ್ದರು.

ಮಿತ್ರರಿಬ್ಬರೂ ಸಂಜೆಯ ತಂಪಾದ ವಾಯುವಿನಿಂದಾಹ್ಲಾದಿಸುತ್ತಾ ಬರುತ್ತಿದ್ದರು. ನದೀತೀರಕ್ಕೆ ಬರಬೇಕಾದರೆ ಇನ್ನೂ ಅರ್ಧ ಮೈಲಿ ದೂರ ವಿದ್ದಿತ್ತು. ಇವರ ಮುಂಭಾಗದಲ್ಲಿ ನದೀತೀರಕ್ಕೆ ಅಭಿಮುಖವಾಗಿ ನಡೆದು ಹೋಗುತ್ತಿದ್ದ ಪುರುಷನೊಬ್ಬನು ಒಂದು ಬಾರಿ ಹಿಂದಿರುಗಿ ನೋಡಿ ಪತ್ತೇ ದಾರಿಗಳನ್ನು ನೋಡಿ ಗಾಬರಿಯಾಗಿ ನದಿಯ ಕಡೆಗೆ ಹೋಗದೆ ಅಡ್ಡದಾರಿ ಯನ್ನು ಹಿಡಿದು ಓಡಲಾರಂಭಿಸಿದನು

ಮುಂದೆ ಹೋಗುತ್ತಿರುವ ಮನುಷ್ಯನು ಅಕಸ್ಮಾತ್ ತಮ್ಮನ್ನು ನೋಡಿ ದೊಡನೆ ಬೇರೆ ದಾರಿಯನ್ನು ಹಿಡಿದು ಓಡಿದುದನ್ನು ಕಂಡು ಸಂದೇಹಪಟ್ಟು ಮಿತ್ರರಿಬ್ಬರೂ ಹಿಂಬಾಲಿಸಿ ಓಡಿದರು; ಆದರೆ ಆ ಪುರುಷನು ತಿರುಗಿ ಇವರ ಕಣ್ಣಿಗೆ ಕಾಣಿಸಲು ಸಿಕ್ಕಲಿಲ್ಲ. ಸ್ವಲ್ಪ ದೂರದವರೆಗೆ ಹೋಗಿ ಹುಡುಕಿ ನಿರಾಶರಾಗಿ ಹಿಂದಿರುಗಿದರು

ಆಗ ಸೂರ್ಯನಸ್ತಮಿಸುತ್ತಿದ್ದನು. ಮಿತ್ರರಿಬ್ಬರು ನದಿಯ ಕಡೆಗೆ ಬಂದರು. ಸುವರ್ಣನಗರವು ನದಿಯ ಆಚೇ ಧಡದಲ್ಲಿತ್ತು. ನದಿಯನ್ನು ದಾಟಲು ದೋಣಿಯು ಇರತಕ್ಕ ಸ್ಥಳವು ಇನ್ನೂ ಮುಂದೆ ಇತ್ತು

ನದಿಯು ಸಮೀಪಿಸಿತು. ಅಲ್ಲಿಯೇ ತೀರದಲ್ಲೊಂದು ಸಣ್ಣ ದೋಣಿ ಯು ಗಿಡಕ್ಕೆ ಕಟ್ಟಲ್ಪಟ್ಟು ದೋಣಿಯಲ್ಲೊಬ್ಬ ತರುಣಯುವಕನು ಮಲಗಿ ನಿದ್ರಿಸುತ್ತಿದ್ದನು.

ಮಿತ್ರರಿಬ್ಬರು ಅದನ್ನು ನೋಡಿದರು. ಹಿಂದೆಯುಂಟಾದ ಸಂಶ ಯವಿನ್ನೂ ಹೆಚ್ಚಾಯಿತು.

"ಮುಖವು ಮೋಹನನಂತಿದೆ. ವೇಷವು ಮಾತ್ರ ಬದಲಾಯಿಸಿ ದಂತಿದೆ" ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ಮೆಲ್ಲಮೆಲ್ಲಗೆ ದೋಣಿಯ ಹತ್ತಿರ ಬಂದರು.

ಆಗಲೂ ಮಲಗಿದ ತರುಣನು ಎಚ್ಚತ್ತಂತೆ ತೋರಲಿಲ್ಲ. ಮಿತ್ರ ರಿಬ್ಬರೂ ಮೆಲ್ಲಗೆ ದೋಣಿಯನ್ನು ಹತ್ತಿ ಥಟ್ಟನೆ ನಿದ್ರಿತಪುರುಷನ ಮೇಲೆ ಹಾರಿ ಕೈಕಾಲುಗಳನ್ನು ಬಂಧಿಸಿದರು.

ಅಷ್ಟರಲ್ಲಿ ತೀರದಲ್ಲಿ "ಹಾ ಹಾ" ಎಂದು ಬಾಯ್ಬಿಡುತ್ತಾ ಒಬ್ಬ ಪುರುಷನು ಓಡಿ ಬರುತ್ತಿದ್ದನು. ಅದನ್ನು ನೋಡಿ ರಾಕಾಚಂದ್ರನು ಹೇಳಿದನು- "ಸುಖಾನಂದ, ನೀನು ದೋಣಿಯಿಂದ ಕೆಳಗಿಳಿದು ಘಡದಲ್ಲಿ ನಿಂತು ಆ ಮನುಷ್ಯನು ಇತ್ತ ಕಡೆಗೆ ಬರದೇ ಇರುವಂತೆ ನಿರೀಕ್ಷಿಸುತ್ತಿರು. ನಾನೀ ದೋಣಿಯನ್ನು ಜಾಗ್ರತೆಯಾಗಿ ಆಚೇ ದಂಡೆಗೆ ಒಯ್ಯುವೆನು. ನೀನು ಜಾಗರೂಕನಾಗಿ ನಿಂತಿರು. ಪಿಸ್ತೂಲನ್ನು ಸಿದ್ಧಪಡಿಸಿಕೊಂಡಿರು ಜಾಗ್ರತೆ" ಎಂದು ಹೇಳಿ, ಸುಖಾನಂದನು ಕೆಳಗಿಳಿದೊಡನೆ ಹುಟ್ಟೊಂದನ್ನು ತೆಗೆದು ಕೊಂಡು ದೋಣಿಯನ್ನು ವೇಗವಾಗಿ ನಡಿಸಿದನು.

ದೋಣಿಯು ಸ್ವಲ್ಪ ದೂರ ಹೋದೊಡನೆ ಮಲಗಿದ ಯುವಕನು ಕಿಲಿಕಿಲಿನೆ ನಕ್ಕು ಹೇಳಿದನು. ಯುವಕ:—"ದೋಣಿಯು ನದಿಯ ಮಧ್ಯಕ್ಕೆ ಹೋಗಲಿ. ಅಲ್ಲಿ ನಿನ್ನನ್ನು ಮುಳುಗಿಸುವೆನು." ಕಣ್ಣುಗಳನ್ನು ತೆರೆಯದೆ ಯುವಕನು ಮಲಗಿಕೊಂಡೇ ಕಾಲಿನ ಹೆಬ್ಬೆರಳಿನಿಂದ ದೋಣಿಯ ಒಂದು ಭಾಗವನ್ನು ಒತ್ತಿದನು.

ಒಡನೆ ದೋಣಿಯೊಳಗೆ ನೀರು ಬರಲಾರಂಭವಾಯಿತು. ರಾಕಾ ಚಂದ್ರನಿಗೆ ಸ್ವಲ್ಪ ಭಯವುಂಟಾಯಿತು. ಹುಟ್ಟನ್ನು ಕೆಳಗಿಟ್ಟು ತೂತನ್ನು ಮುಚ್ಚಲು ಹೋದರೆ ದೋಣಿಯು ಪ್ರವಾಹದ ವೇಗಕ್ಕೆ ಸಿಲಿಕಿ ಹೊರಟು ಹೋಗಬಹುದಾಗಿತ್ತು. ಕತ್ತಲೆಯೂ ಆವರಿಸುತ್ತಾ ಬರುತ್ತಿತ್ತು. ರಾಕಾಚಂ ದ್ರನು ಬೇರೆ ಉಪಾಯ ಕಾಣದೆ ಯುವಕನನ್ನು ಬೆದರಿಸಿದನು-"ದೋಣಿಯು ಮುಳುಗಿದರೆ ನನಗೇನೂ ತೊಂದರೆಯಿಲ್ಲ. ಕೈಕಾಲು ಬಂಧಿಸಲ್ಪಟ್ಟ ನೀನು ಮಾತ್ರ ನದೀಪಾಲಾಗುವಿ."

ತರುಣ— (ನಕ್ಕು) ಇನ್ನೊಂದು ಘಳಿಗೆಯಲ್ಲಿ ಯಾರ ಪ್ರಾಣಹಾನಿಯು ಆಗುವುದೆಂದು ನೀನೇ ತಿಳಿಯುವಿ. ಅಗೋ ಮುಂದೆ ನೋಡು. ನದಿಯ ಮಧ್ಯಭಾಗವು ನಿನ್ನನ್ನು ನುಂಗಲು ಹೇಗೆ ಹಾತೊರೆಯುತ್ತಿದೆ ನೋಡು. ಹೆಚ್ಚು ವಿಲಂಬವಿಲ್ಲ.

ರಾಕಾಚಂದ್ರನು ತರುಣನ ನಿರ್ಭೀತವಾದ ವಚನದಿಂದ ಬೆದರಿದನು. ಕ್ಷಣಕ್ಷಣವೂ ದೋಣಿಯೊಳಗೆ ನೀರು ತುಂಬುತ್ತಿತ್ತು. ಗತ್ಯಂತರವನ್ನು ಕಾಣದೆ ರಾಕಾಚಂದ್ರನು ಪಿಸ್ತೂಲನ್ನು ಬಾರ್ ಮಾಡಿ ಗರ್ಜಿಸುವ ಧ್ವನಿಯಿಂದ ಹೇಳಿದನು.

ರಾಕಾಚಂದ್ರ—ಇದೋ ನಾನು ಮರಣಹೊಂದುವವನಾದರೂ ಭೀತಿಯಿಲ್ಲ. ಗುಂಡಿನಿಂದ ನಿನ್ನನ್ನು ಸುಟ್ಟೇ ನಾನು ಹೋಗುವೆನು.

ತರುಣ—ತಿಳಿಯಿತು. ಇನ್ನಾವ ಉಪಾಯವೂ ತೋಚದೆ ಇದನ್ನು ಹುಡುಕಿರುವೆಯಾ? ನನ್ನನ್ನು ಭಯಪಡಿಸಲಿಚ್ಛಿಸುವೆಯಾ? ಅಗೋ ತೀರದಲ್ಲಿ ಸುಖಾನಂದನನ್ನು ಹೇಗೆ ಪೀಡಿಸುತ್ತಿರುವರು! ನೋಡು. ನಿಮ್ಮಿಬ್ಬರಿಗೂ ಒಂದೇ ದಿನದಲ್ಲಿ ಮರಣವೆಂದು ತಿಳಿದಿರು.

ರಾಕಾಚಂದ್ರನು ಧಡದ ಕಡೆಗೆ ಹಿಂದಿರುಗಿ ನೋಡಿದನು. ಅಲ್ಲಿ ಯಾರೂ ಕಾಣಿಸಲಿಲ್ಲ. ದೋಣಿಯಲ್ಲಿ ನೀರು ಹೆಚ್ಚಾಗತೊಡಗಿತು. ರಾಕಾಚಂದ್ರನು ಭೀತನಾದನು. ಇನ್ನಾವ ಉಪಾಯವೂ ಹೊಳೆಯದೆ, ರಾಕಾಚಂದ್ರನು ಕೋಟು ಮೊದಲಾದ್ದನ್ನು ಕಿತ್ತೊಗೆದು ನದಿಯಲ್ಲಿ ಹಾರಿ ಈಜುತ್ತಾ ದಂಡೆಯನ್ನು ಮುಟ್ಟಿದನು. ಸುಖಾನಂದನು ತೀರದಲ್ಲಿ ನಿಂತಿದ್ದನು. ರಾಕಾಚಂದ್ರನು ತನ್ನ ಅವಸ್ಥೆಯನ್ನು ವರ್ಣಿಸಿದನು.

ಸುಖಾನಂದ—ನಾನು ಇಲ್ಲಿಗೆ ಓಡಿ ಬರುತ್ತಿದ್ದ ಮನುಷ್ಯನನ್ನು ಬೆನ್ನಟ್ಟಿದರೂ ಪ್ರಯೋಜನವಾಗಲಿಲ್ಲ. ಅವನು ಒಂದು ಕ್ಷಣದೊಳಗೆ ನನ್ನ ಕಣ್ಣಿಗೆ ಕಾಣಿಸದೆ ಅಲ್ಲಿಂದ ಮಾಯವಾದನು. ನಿರಾಶನಾಗಿ ನಾನು ಹಿಂದಿರುಗಿದೆನು.

ರಾಕಾಚಂದ್ರ— ನಿನ್ನನ್ನು ಪೀಡಿಸುತ್ತಿರುವರು ಎಂದು ಮೋಹನನು ಹೇಳಿದ ಮಾತು ಸುಳ್ಳು. ನನ್ನನ್ನು ಭಯಪಡಿಸಲು ಹಾಗೆ ಹೇಳಿರಬಹುದು.

ಆತನು ಕಡೆಗೂ ನಮ್ಮನ್ನು ಮೋಸಗೊಳಿಸಿದನು.

ಸುಖಾನಂದ—ದೋಣಿಯಲ್ಲಿ ನೀರು ತುಂಬಿದರೆ ತನಗೂ ಅಪಾಯವಾಗಬಹುದೆಂಬ ಮತಿಯು ಮೋಹನನಿಗೆ ಉಂಟಾಗಲಿಲ್ಲವೇ?

ರಾಕಾಚಂದ್ರ—ಮೋಹನನು ಅಷ್ಟೇನೂ ಮೂರ್ಖನಲ್ಲ. ನಮ್ಮನ್ನು ಬೆದರಿಸುವದಕ್ಕಾಗಿಯೇ ನಮ್ಮ ಕೈಗೆ ಸಿಕ್ಕಿಬಿದ್ದನು ತೀರದಲ್ಲಿ ಕೆಳಗೆ ಅವನ ಮಿತ್ರರು ಕಾದು ಕುಳಿತಿರಬಹುದು.

ಸುಖಾನಂದ—ಅವರು ಸಮೀಪಿಸುವದರೊಳಗೆ ನೀರು ತುಂಬಿ ದೋಣಿಯು ಮುಳುಗಿ ಹೋಗಲಾರದೇ?

ರಾಕಾಚಂದ್ರ-ದೋಣಿಯಲ್ಲಿ ತೂತಾದುದು ಸ್ವಾಭಾವಿಕವಲ್ಲ. ಮೊದಲೆ ಆ ತೂತನ್ನು ಮಾಡಿಕೊಂಡಿರಬೇಕು. ಸಮಯದಲ್ಲಿ ಅದನ್ನು ಒತ್ತಿ ನೀರು ಬರುವಂತೆ ಯುಕ್ತಿ ಹೂಡಿರಬಹುದು. ಇಷ್ಟು ಉಪಾಯವಿಲ್ಲದೆ ಮೋಹನನು ಮುಂದರಿಯಲಾರನು.

ಸುಖಾನಂದ—ಹಾಗಿದ್ದರೂ "ಕೈಕಾಲು ಕಟ್ಟಿದಾಗ ತನ್ನನ್ನು ಗುಂಡಿನಿಂದ ಸುಡಬಹುದು" ಎಂಬ ಹೆದರಿಕೆಯು ಅವನಿಗಿಲ್ಲವೇ?

ರಾಕಾಚಂದ್ರ—ಅದಕ್ಕಾಗಿಯೇ ಹೊಳೆಯ ಮಧ್ಯಕ್ಕೆ ಹೋಗುವವರೆಗೂ ಮಾತನಾಡದೆ ಅನಂತರ ತನ್ನ ಉಪಾಯಕ್ಕೆ ಆರಂಭಿಸಿದನು. ನಿನ್ನನ್ನೂ ಅದಕ್ಕಾಗಿಯೇ ದೂರವಿರಿಸಿದನು.

ಸುಖಾನಂದ—ಎಲೆಕ್ಟ್ರಿಕ್‌ದೀಪವಿದೆಯಷ್ಟೆ. ಕತ್ತಲೆಯಾದರೂ ಚಿಂತೆಯಿಲ್ಲ. ಹೀಗೆಯೇ ಸ್ವಲ್ಪ ದೂರ ಈ ತೀರದಲ್ಲಿಯೇ ಹೋಗೋಣವೇ? ಕೆಳಗೆ ಯಾರಾದರೂ ಸಿಗಬಹುದು.

ರಾಕಾಚಂದ್ರ—ಹೂ.

ಸುಖಾನಂದನು ಜೇಬಿನಿಂದ ದೀಪವನ್ನು ತೆಗೆದು ಹಚ್ಚಿದೊಡನೆಯೇ ಗುಂಡೊಂದು ಪಕ್ಕದಿಂದ ಬಂದು ದೀಪವು ಪುಡಿಪುಡಿಯಾಯಿತು. ಇನ್ನು ಮಿತ್ರರಿಬ್ಬರಿಗೆ ಆ ರಾತ್ರಿಯ ಕತ್ತಲೆಯಲ್ಲಿ ನಕ್ಷತ್ರಗಳ ಬೆಳಕನ್ನು ಬಿಟ್ಟು ಇನ್ನಾವ ಪ್ರಕಾಶವೂ ಇರಲಿಲ್ಲ. ಸಮೀಪದಲ್ಲಿಯೇ ತಮ್ಮ ವಿರೋಧಿಗಳು ತಮ್ಮನ್ನು ಹೊಂಚಿ ಕಾಯುತ್ತಿರುವರೆಂದು ತಿಳಿದು ಮಿತ್ರರಿಬ್ಬರು ಸ್ವ

ಭಯಪಟ್ಟು ಇನ್ನಾವ ಆಲೋಚನೆಯನ್ನೂ ಮಾಡದೆ ತಮ್ಮ ಗೃಹಾಭಿಮುಖ ವಾಗಿ ಹೊರಟು ಹೋದರು. ಮನೆಯನ್ನು ಮುಟ್ಟುವವರೆಗೆ ಬೇರೆ ಯಾವ ತೊಂದರೆಯೂ ಉಂಟಾಗಲಿಲ್ಲ.

+ + + +

ಈ ದಿನ ಆದಿತ್ಯವಾರವಾದುದರಿಂದ ಹೇರಂಬಾನದಿಯ ತೀರದಲ್ಲಿ ಉಳಿದವಾರಗಳಿಂದ ಹೆಚ್ಚಾಗಿ ಜನರು ಕಿಕ್ಕಿರಿದು ತುಂಬಿದ್ದರು. ಅದರಲ್ಲಿಯೂ ಈ ದಿನ ದಕ್ಷಿಣದೇಶದ ಪ್ರಸಿದ್ಧ ಸಂಗೀತ ವಿದ್ವಾಂಸರೊಬ್ಬರು ಸುವರ್ಣ ನಗರಕ್ಕೆ ಅಹ್ವಾನಿತರಾಗಿ ಬಂದು ಹಾಡುತ್ತಿದ್ದರಾದಕಾರಣ ಆ ಸಂಗೀತವನ್ನು "ರೆಡಿಯೊ" ಯಂತ್ರದಿಂದ ಕೇಳಲು ಜನರು ತುಂಬಿದ್ದರು.

ಹೆಚ್ಚಾಗಿ ಜನಸಂದಣಿಯಿಲ್ಲದೆ ಇರುವ ಒಂದು ಪ್ರದೇಶದಲ್ಲಿ ಮೋಹನನು ನದಿಯ ಶೋಭೆಯನ್ನು ನೋಡುತ್ತಿದ್ದನು. ಮಧ್ಯೆ ಮಧ್ಯೆ ದುರ್ಬಿನ್ನಿನಿಂದ ಪಟ್ಟಣದ ಕಡೆಗೆ ನೋಡುತ್ತಿದ್ದನು. ಹೀಗೆ ಒಂದು ಬಾರಿ ನೋಡುತ್ತಿದ್ದಾಗ ದೂರದಲ್ಲೊಂದು ಕಡೆಯಲ್ಲಿ ರಾಕಾಚಂದ್ರನು ನಿಂತಿರುವಂತೆ ಕಂಡುಬಂದಿತು. ನೋಡುತ್ತಾ ಇದ್ದಾಗ ಸ್ವಲ್ಪ ಹೊತ್ತಿನಲ್ಲಿಯೇ ಅವನ ಹತ್ತಿರಕ್ಕೆ ವೇಷಧಾರಿಗಳಾದ ಕೆಲವು ಜನ ಪೋಲೀಸರು ಬರುತ್ತಿರುವುದನ್ನೂ ನೋಡಿದನು ಇನ್ನೊಂದೆಡೆಯಲ್ಲಿ ಇನ್ನೂ ಹೆಚ್ಚು ಜನ ಪೋಲೀಸರೊಂದಿಗೆ ಸುಖಾನಂದನು ನಿಂತಿರುವುದನ್ನು ನೋಡಿದನು. ಒಡನೆ ಮೋಹನನು ಕೆಲವು ಕಾಗದಗಳನ್ನು ಚೂರು ಚೂರಾಗಿ ಹರಿದು ಅದರಲ್ಲಿ ಈ ರೀತಿ ಬರೆದನು.

"ಣಾಣುಲ ಉಣಾಕುವಿಫೆ ಶೊವತೆಣು"

ಸುಮಾರು ಐವತ್ತು ಕಾಗದಗಳಲ್ಲಿ ಈ ರೀತಿಯಾಗಿ ಬರೆದು, ತಿರುಗಿ ದುರ್ಬಿನ್ನಿನಿಂದ ನೋಡಿದನು. ದೂರದಲ್ಲಿ ಪ್ರಿಯನಾಥನು ತನ್ನ ಕಡೆಗೆ ಬರುತ್ತಿರುವುದು ತಿಳಿಯಿತು. ಆಗಲೇ ಆರೂವರೆ ಗಂಟೆಯಾಗಿತ್ತು ಮೂರೂ ಕಡೆಯಿಂದ ಪೋಲೀಸರು ಮುಂದುವರಿದು ಮೋಹನನ ಕಡೆಗೆ ಬರುತ್ತಿದ್ದರು. ಈ ರೀತಿ ಪೋಲೀಸರು ಹೋಗುತ್ತಿರುವುದನ್ನು ನೋಡಿ ಜನರು "ಇದೇನು ವಿಶೇಷ"ವೆಂದು ಬಾಯ್ಬಿಟ್ಟು ನಿಂತಿದ್ದರು. ಪೋಲೀಸರು ಐವತ್ತು ಮಾರು ಹತ್ತಿರವಿರುವ ಸ್ಥಳಕ್ಕೆ ಬಂದೊಡನೆ ಮೋಹನನು ಬರೆದಿದ್ದ ಕಾಗದಗಳನ್ನು

ಗಾಳಿಗಭಿಮುಖವಾಗಿ ಹಾರಿಸಿ 'ಹರಹರ' ಎನ್ನುತ್ತಾ ನದಿಯ ಪ್ರವಾಹಕ್ಕೆ ಹಾರಿ ಮುಳುಗಿ ಹೋದನು. ಅದನ್ನು ಕಂಡು ಜನರೆಲ್ಲರೂ 'ಹಾಹಾ'ಕಾರ ವನ್ನು ಮಾಡುತ್ತಾ ಓಡಿ ಬಂದರು. ರಾಕಾಚಂದ್ರ ಮತ್ತು ಸುಖಾನಂದರು 'ಹಾ ಇದೇನು ಪ್ರಮಾದ' ಎಂದು ವ್ಯಾಕುಲರಾದರು. ಮುಳುಗಿ ಹೋದ ಮೋಹನನು ತಿರುಗಿ ಯಾರ ಕಣ್ಣಿಗೂ ಕಾಣಿಸಲಿಲ್ಲ. ಸೂರ್ಯ ನಸ್ತಮಿಸಿ ಅಲ್ಪ ಸ್ವಲ್ಪ ಕತ್ತಲೆಯಾದುದರಿಂದ ಮೋಹನನು ದೂರದಲ್ಲಿ ನದಿಯ ಮೇಲಕ್ಕೆ ಎದ್ದರೂ ಕಾಣಿಸುವಂತಿರಲಿಲ್ಲ. ಮುಳುಗಿ ಹೋದವನು ಮೋಹನನೇ ಎಂಬುದು ರಾಕಾಚಂದ್ರನಿಂದ ಎಲ್ಲರಿಗೂ ತಿಳಿಯಿತು. ಎಲ್ಲರೂ ಅತ್ಯಂತ ವ್ಯಥೆಪಟ್ಟರು.

ಮೋಹನನು ಗಾಳಿಗೆ ತೂರಿರುವ ಕಾಗದಗಳಲ್ಲೇನು ವಿಶೇಷವಿರುವು ದೆಂಬದನ್ನು ತಿಳಿಯಲು ರಾಕಾಚಂದ್ರನು ಒಂದು ಕಾಗದವನ್ನು ಕೈಯಲ್ಲಿ ಹಿಡಿದು ನೋಡಿದನು. ಏನೂ ಅರ್ಥವಾಗಲಿಲ್ಲ. ಅರ್ಥವಾಗದೇ ಹೋದರೂ "ಈಗ ಮೋಹನನು ತಪ್ಪಿಸಿಕೊಳ್ಳಲು ಹೊಳೆಗೆ ಧುಮುಕಿದನು" ಎಂಬು ದನ್ನು ರಾಕಾಚಂದ್ರನು ಸುಖಾನಂದನಿಗೆ ತಿಳಿಸುತ್ತಾ ಹೇಳಿದನು—"ಮೋಹ ನನು ತನ್ನವರಿಗೆ ಮಾತ್ರ ತಿಳಿಸಿರುವ ಯಾವುದೊ ಒಂದು ಗುಪ್ತ ಭಾಷೆ ಯಿಂದಿದನ್ನು ಬರೆದು ತನ್ನ ಸಂಗಡಿಗರಿಗಿದು ತಲ್ಪಲು ಪ್ರಯತ್ನಿಸಿರುವನು. ಮೋಹನನು ಇಂತಹ ಸಾಮಾನ್ಯವಾದ ಬಿಕ್ಕಟ್ಟಿನಲ್ಲಿ ಎಂದಿಗೂ ಪ್ರಾಣಾ ಪಾಯಕರವಾದ ಕೆಲಸಕ್ಕೆ ಮುಂದುವರಿಯಲಾರನೆಂದು ನನ್ನ ಮನವು ತಿಳಿ ಸುತ್ತದೆ. ಮೂರೂ ಕಡೆಗಳಿಂದ ನಾವು ಮುತ್ತಿರುವುದರಿಂದ ಉಳಿದ ನದಿಯ ಕಡೆಯಿಂದಲೇ ನಮ್ಮಿಂದ ತಪ್ಪಿಸಿಕೊಳ್ಳಲು ನಿಶ್ಚೈಸಿ ಹಾರಿ ಹೋಗಿರುವನು. ಮೋಹನನ ಒಂದೊಂದು ಸಾಹಸವೂ ಅತ್ಯಾಶ್ಚರ್ಯಕರ ವಾಗಿದೆ. ಅವನ ಪ್ರತಿಯೊಂದು ಕಾರ್ಯವೂ ನನಗೆ ಅತಿಯಾಗಿ ರುಚಿಸು ತ್ತದೆ. ಗುಣಕ್ಕೆ ಮತ್ಸರವಿಲ್ಲ.

ಸುಖಾನಂದ—ಇನ್ನು ಕೆಲವು ದಿನಗಳ ವರೆಗೆ ರೈಲ್ವೆಸ್ಟೇಷನ್ನಿನಲಿ ಸ್ವಲ್ಪ ದೃಷ್ಟಿಯಿರಬೇಕು; ಯಾಕಂದರೆ ಮೋಹನನು ಆ ಕಾಗದದಲ್ಲಿ ಈ ಊರನ್ನು ಬಿಟ್ಟು ಹೋದೆನೆಂದು ತಿಳಿಸಿದ್ದರೆ ಅವನ ಸಂಗಡಿಗರು ಹೊರಟು

ಹೋಗಬಹುದು. ಸ್ಟೇಷನ್ನಿನಲ್ಲಿ ಸಿಕ್ಕಿದರೂ ಸಿಕ್ಕಬಹುದು.

ರಾಕಾಚಂದ್ರ—ಮೋಹನನ ಮಿತ್ರರು ಅಷ್ಟು ಸುಲಭವಾಗಿ ನಮ್ಮ ಗಲ್ಲಿ ಸಿಕ್ಕುವರೆಂಬ ನಂಬಿಕೆಯು ನನಗಿಲ್ಲ. ವೇಷಾಂತರದಿಂದ ತಪ್ಪಿಸಿಕೊಂಡು ಹೋದರೂ ಹೋಗಬಹುದು; ಆದರೆ ನಿನ್ನಿಂದ ಕಿತ್ತುಕೊಂಡು ಮೋಟಾರ್ ಸೈಕಲ್ಲನ್ನು ತೆಗೆದುಕೊಂಡು ಸ್ಟೇಷನ್ನಿಗೆ ಬಂದು ಅವರು ಹೊರಟು ಹೋಗುವವರಾದರೆ ಆಗ ಸಿಕ್ಕಬಹುದು. ಅದೂ ನಂಬಲರ್ಹವಾಗಿದೆ "ಕೆಲವು ದಿನಗಳ ವರೆಗೆ ನನ್ನಲ್ಲಿರಲು ಇಚ್ಛಿಸುತ್ತೇನೆ" ಎಂದು ಮೋಹನನು ಹಿಂದೆ ಕಾಗದವನ್ನು ಬರೆದಿರುವನಾದ ಕಾರಣ ಅದನ್ನು ನಿನಗೆ ತಲ್ಪಿಸಬಹುದೆಂದು ತೋರುತ್ತದೆ. ನಿನಗೆ ಹೇಗೆ ತೋರುವುದು?

ಸುಖಾನಂದ-ಅದು ಹಾಳಾಗಲಿ. ಅದರ ಯೋಜನೆಯನ್ನು ನಾನೆಂದೋ ಬಿಟ್ಟು ಬಿಟ್ಟೆನು. ಮಿತ್ರರಿಬ್ಬರೂ ತಾವು ಬಂದ ಕಾರ್ಯವು ನೆರವೇರದೆ ಇದ್ದುದರಿಂದ ನಿರಾಶರಾಗಿ ಹಿಂದಿರುಗಿದರು. ಮೋಹನನು ನದಿಗೆ ಹಾರಿ ಜನರು ಮುಂದೊತ್ತಿ ಬಂದಾಗ ಪ್ರಿಯನಾಥನೂ ಮುಂದೆ ಬಂದು ಮೋಹನನು ಹಾರಿಸಿದ ಕಾಗದವೊಂದನ್ನು ಸಂಗ್ರಹಿಸಿ ಅರ್ಥವನ್ನು ತಿಳಿದು ಬಿಡಾರಕ್ಕೆ ಸೇರಿ ತನ್ನ ಮಿತ್ರರನ್ನು ಕುರಿತು ಹೇಳಿದನು "ಮೋಹನನು ನದಿಯ ದಂಡೆಯಲ್ಲಿದ್ದಾಗ ಮೂರೂ ಕಡೆಗಳಿಂದ ಪೋಲೀಸರು ಮುಂದುವರಿಯುತ್ತಿರುವುದನ್ನು ನೋಡಿ "ನಾನು ಯಮುನಾಪುರಿಗೆ ಹೊರಟೆನು" ಎಂದು ಕೆಲವು ಚಿಕ್ಕ ಕಾಗದಗಳಲ್ಲಿ ಬರೆದು ಗಾಳಿಗೆ ಅವುಗಳನ್ನು ತೂರಿ ನದಿಯಲ್ಲಿ ಮುಳುಗಿ ಹೋದನು.

ನಾವೀಗ ಎಲ್ಲರೂ ಒಟ್ಟುಗೂಡಿ ಯಮುನಾಪುರಿಗೆ ಹೊರಟರೆ ದಾರಿಯಲ್ಲಿ ರಾಕಾಚಂದ್ರನಿಂದ ತೊಂದರೆ ಬಂದರೂ ಬರಬಹುದು ನೀವೀಗಲೇ ರಾಜಪುರಕ್ಕೆ ಹೊರಡುವ ರೈಲಲ್ಲಿ ಹೊರಟು ರಾಜಪುರಿಗೆ ಹೋಗಿ ಅಲ್ಲಿಂದ ಯಮುನಾಪುರಿಗೆ ಹೋಗಿರಿ. ಹಾಗೆ ಮಾಡಿದರೆ ಯಾರ ಯಾವ ಬಾಧೆಯೂ ನಮಗೆ ಉಂಟಾಗಲಾರದು.

ನಾನು ಇನ್ನೆಂಟುದಿನಗಳ ಮೇಲೆ ಈ ಮೋಟಾರ್ ಸೈಕಲ್ಲನ್ನು ಸುಖಾನಂದನಿಗೆ ತಲ್ಪಿಸಿ ಬರುವೆನು." "ಹಾಗೆಯೇ ಆಗಲಿ" ಎಂದು ಹೇಳಿ ಪ್ರಿಯ

ನಾಥನನ್ನು ಬಿಟ್ಟು ಉಳಿದವರೆಲ್ಲರೂ ವೇಷಾಂತರದಿಂದ ರಾಜಪುರಿಯ ಮಾರ್ಗವಾಗಿ ತೆರಳಿದರು. ಅವರು ಹೊರಟು ಹೋದ ಎಂಟು ದಿನಗಳ ಮೇಲೆ ಪ್ರಿಯನಾಥನಿಂದೊಂದು ಕಾಗದವು ಸುಖಾನಂದನಿಗೆ ತಲ್ಪಿತು. ಅದರಲ್ಲಿ "ಪ್ರಾಸ್ಕಿರೋಡಿನ, ಆರನೇ ನಂಬರಿನ ಗಲ್ಲಿಯ ೫೭೩ನೇ ಮನೆಯಲ್ಲಿ ನಿಮ್ಮ ಮೋಟಾರ್ ಸೈಕಲ್ಲಿದೆ. ಅದನ್ನು ಸ್ವೀಕರಿಸಿರಿ. ನಾವೆಲ್ಲರೂ ಹೊರಟು ಹೋದೆವು" ಎಂದಿದ್ದಿತು. ಸುಖಾನಂದನು ಆ ವಿಳಾಸದ ಮನೆಯನ್ನು ಹುಡುಕಿ ಸೈಕಲ್ಲನ್ನು ತೆಗೆದುಕೊಂಡು ಹೋದನು.

---

## ಪಂಚಮ ಗುಚ್ಛ

ಹೇರಂಬಾನದಿಯು ಉತ್ತರದಿಂದ ಪಶ್ಚಿಮಾಭಿಮುಖವಾಗಿ ಪ್ರವಹಿಸಿ ಪಶ್ಚಿಮೋದಧಿಯನ್ನು ಸೇರಿದ್ದಿತು. ಚೈತ್ರಮಾಸಾಂತ್ಯದೊಂದು ದಿನ ಸಾಯಂ ಕಾಲ ದೊಡ್ಡದಾದೊಂದು ದೋಣಿಯು ಹೋಗುತಲಿತ್ತು. ನದಿಯು ಆಳವಾಗಿಯೂ, ಅಗಲವಾಗಿಯೂ ಇದ್ದುದರಿಂದ ಅಕ್ಕಪಕ್ಕಗಳಲ್ಲಿ ಅನೇಕ ರೇವು ಪಟ್ಟಣಗಳು ವಿರಾಜಿಸುತಲಿದ್ದವು. ಪಟ್ಟಣಗಳನ್ನು ಬಿಟ್ಟರೆ ನದಿಯ ಎರಡು ಪಕ್ಕಗಳಲ್ಲಿಯೂ ಪೈರಿನಿಂದ ಹಸುರಾದ ಹೊಲಗಳೂ, ಅಲ್ಲಲ್ಲಿ ದೊಡ್ಡ ದೊಡ್ಡ ಮರಗಳಿಂದ ದಟ್ಟವಾಗಿಯೂ, ಹುಲಿ, ಚಿರತೆ ಇವೇ ಮೊದಲಾದ ಘಾತುಕ ಜಂತುಗಳಿಂದ ಭಯಂಕರವಾಗಿಯೂ ಇರುವ ಹಲವು ಕಾಡುಗಳೂ ನದಿಯಲ್ಲಿ ಪ್ರಯಾಣಮಾಡುವ ಜನರ ಕಣ್ಮನಗಳನ್ನು ಆಕರ್ಷಿಸುತಲಿದ್ದವು.

ನದಿಯ ನೀರು ಹರಿದು ಹರಿದು ಅವಿರಳವಾಗಿ ಹೋಗುತ್ತಾ, ಗುಡ್ಡ ಮತ್ತು ಪರ್ವತದೆಡೆಗಳಲ್ಲಿ ಬರುತ್ತಾ, ಏರಿನಿಂದ ತಗ್ಗುಗಳಲ್ಲಿ ಹಾರಿ ನೊರೆ ನೊರೆಯಾಗುತ್ತಾ, ಮಂದ ಮಾರುತದಿಂದ ಕುಣಿದಾಡುತ್ತಾ, ತಂಪಾದ ಸಂಧ್ಯಾಸಮಯದ ಬಿಸಿಲಿನಿಂದ ನಗುತನಗುತ್ತಾ, ಆಳವಾದೆಡೆಗಳಲ್ಲಿ ಸುಳಿ ಸುಳಿಯಾಗಿ ಸುತ್ತುತ್ತಾ, ದಂಡೆಗೆ ದಡಕ್ಕನೆ ಬಡಿದು ಮೋಡದಂತೆ ಗರ್ಜಿಸುತ್ತಾ, ಹೇರಂಬಾನದಿಯು ಹೋಗುತಲಿತ್ತು.

"ಸೂರ್ಯನು ಪಶ್ಚಮದಿಗಂಗನೆಯನ್ನು ಸೇರುವುದಕ್ಕಿಂತ ಮೊದಲೇ

ತಾನು ಪಶ್ಚಿಮೋದಧಿಯನ್ನು ಸೇರುವೆನು" ಎನ್ನುತ್ತಿರುವಂತೆ ಹೇರಂಬಾ ನದಿಯು ನವತರುಣಿಯು ಪ್ರಿಯನ ಭವನವನ್ನು ಕುರಿತು ತೆರಳುವಂತೆ ಹೋಗುತಲಿತ್ತು. ಆಕಾಶದಲ್ಲಿ ಅಲ್ಲಲ್ಲ ಸಣ್ಣಸಣ್ಣ ಮೋಡಗಳಿದ್ದು ಅವು ಅಸ್ತಮಿಸುತ್ತಿರುವ ಸೂರ್ಯನ ಹೊಂಬಣ್ಣದ ಕಿರಣಗಳಿಂದ ವಿರಾಜಿಸುತ ಲಿದ್ದವು. ಆಕಾಶವೆಲ್ಲೆಲ್ಲಿಯೂ ಹೊಂಬಣ್ಣವಾಗಿದ್ದಿತು. ಪಶ್ಚಿಮದಿಶೆಯ ಆಕಾಶದಲ್ಲಿ ಸಂಧ್ಯಾಕಾಲದ ಮೋಡಗಳನ್ನು ನೋಡುತ್ತಿದ್ದರೆ ಚಿಕ್ಕಪರ್ವತ ಗಳಂತೆಯೂ, ಉಪವನದಂತೆಯೂ, ಲತಾಗೃಹಗಳಂತೆಯೂ, ಗಜಾದಿಮೃಗ ಗಳಂತೆಯೂ ಸ್ವಲ್ಪಸ್ವಲ್ಪ ಕಾಲದವರೆಗೆ ತೋರುತಲಿದ್ದವು. ಇಂತಹ ನೋಟ ಗಳು ದೋಣಿಯಲ್ಲಿ ಕುಳಿತು ಹೋಗತಕ್ಕವರ ಮನವನ್ನಾನಂದಗೊಳಿಸುತ್ತಿ ದ್ದವು. ಇಂತಹ ಕೆಲವು ದೃಶ್ಯಗಳನ್ನಾದರೂ ನೋಡಲಪೇಕ್ಷಿಸುವವರು ಪಶ್ಚಿಮ ಸಮುದ್ರದ ತೀರದಲ್ಲಿ ಸಂಧ್ಯಾಕಾಲದಲ್ಲಿ ನಿರೀಕ್ಷಿಸಲಿ.

ದೋಣಿಯು ಗಾಳಿಯ ಸಹಾಯದಿಂದ ಆಯಾಸವಿಲ್ಲದೆ ಹೋಗುತಲಿತ್ತು

ಆ ದೋಣಿಯಲ್ಲಿ ಆರು ಜನ ನವತರುಣರು ಕುಳಿತಿದ್ದರು. ಅವರ ಲ್ಲೊಬ್ಬನು "ಅವಿನಯಮಪನಯ ವಿಷ್ಣೋ ದಮಯ ಮನಶ್ಶಮಯ ವಿಷಯ ಮೃಗತೃಷ್ಣಾಂ|| ಭೂತದಯಾಂ ವಿಸ್ತಾರಯ ತಾರಯ ಸಂಸಾರಸಾಗರತಃ||" ಎಂಬ ಪದ್ಯವನ್ನು ತನ್ನ ಮಧುರವಾದ ಕಂಠದಿಂದ ಆಲಾಪನೆಯೊಂದಿಗೆ ಹಾಡುತ್ತಿದ್ದನು. ಉಳಿದ ಯುವಕರು ಅದನ್ನು ಕೇಳಿ ಆನಂದಿಸುತ್ತಿದ್ದರು.

ಪಶ್ಚಿಮೋದಧಿಯಲ್ಲಿ ಅಸ್ತಂಗತನಾಗುತಲಿರುವ ಕೆಂಪಾದ ಸೂರ್ಯನ ಸೊಬಗನ್ನು ಕಣ್ಣುತುಂಬ ನೋಡಿ ಆ ತರುಣರು ಹಿರಿಹಿರಿ ಹಿಗ್ಗುತ್ತಿರಲು ಕ್ರಮೇಣ ಸೂರ್ಯನು ಮುಳುಗಿದನು.

ಏಳೂವರೆ ಗಂಟೆಯ ಸಮಯದಲ್ಲಿ ದೋಣಿಯು ಸಮುತ್ಪಲವೆಂಬಲ್ಲಿಗೆ ಹೋಗಿ ಮುಟ್ಟಿತು. ಸಮುತ್ಪಲದಲ್ಲಿ ಹರಿಯುವ ನದಿಯೋ ಸುವರ್ಣನಗರ ದಲ್ಲಿ ಪ್ರವಹಿಸುವದು. ಸಮುತ್ಪಲದಿಂದ ಸುವರ್ಣನಗರವು ಇಪ್ಪತ್ತು ಮೈಲಿ ದೂರದಲ್ಲಿದೆ. ಸಮುತ್ಪಲವು ಒಂದು ರೇವು ಪಟ್ಟಣವಾಗಿತ್ತು ದೋಣಿಯು ತೀರಕ್ಕೆ ಮುಟ್ಟೆ ಅದರ ಕಾವಲಿಗೆ ಒಬ್ಬನು ನಿಂತು, ಉಳಿದವರು ಊರನ್ನು ಪ್ರವೇಶಿಸಿದರು. ಅರ್ಧ ಮೈಲಿ ದೂರ ಹೋದೊಡನೆ ತರುಣನೊಬ್ಬನು ಮುಂದಕ್ಕೆ ಕೈತೋರಿಸಿ "ಆ ಮೋಟಾರ್ ನಿಂತಮನೆ" ಎಂದನು.

ಆ ಮನೆಯ ಕಡೆಗೆ ತರುಣರು ಹೋಗುವುದರೊಳಗಾಗಿ ಅಲ್ಲಿ ನಿಂತ ಮೋಟಾರು ನದಿಗೆದುರಾಗಿ ಹೊರಟಿತು. ಮೊದಲು ಮಾತನಾಡಿದ ತರುಣನು ಕೂಡಲೆ ದೂರದರ್ಶಕಯಂತ್ರದಿಂದ ಮೋಟಾರಿನೊಳಗೆ ನಿರೀಕ್ಷಿಸಿದನು. ಮೋಟಾರು ವೇಗವಾಗಿ ಹೊರಟು ಹೋಯಿತು. ಮೋಟಾರನ್ನು ನಿರೀಕ್ಷಿಸಿದ ತರುಣನು ಹೇಳಿದನು. "ಸಾವುಕಾರರ ಪತ್ನಿಯು ಇವರಲ್ಲಿಯೇ ಇರುವಳು. ಡಾಕ್ಟರನು ಮೋಸಪಡಿಸಿರುವನು. ಮೋಟಾರಿನಲ್ಲಿ ಮೂರೇ ಜನರು ಇರುವರು."

ಒಡನೆ ತರುಣರೆಲ್ಲರೂ ಮೋಟಾರನ್ನು ಹಿಂಬಾಲಿಸಿ ನದಿಯ ತೀರಾಭಿಮುಖವಾಗಿ ಓಡಿದರು. ನದಿಯ ಧಡಕ್ಕೆ ಹೋಗಿ ದೋಣಿಯ ಕಾವಲಿಗೆ ನಿಂತಿರುವ ಪುರುಷನನ್ನು ವಿಚಾರಿಸಿದರು.

ಮೋಟಾರಿನಲ್ಲಿ ಒಬ್ಬ ಹೆಂಗಸೂ, ಇಬ್ಬರು ಗಂಡಸರೂ ಇದ್ದರು. ಮೋಟಾರಿನಿಂದಿಳಿದು, ಆ ಹೆಂಗಸನ್ನು ಹೊತ್ತುಕೊಂಡು ಒಂದು ದೋಣಿಯಲ್ಲಿ ಮಲಗಿಸಿದರು. ಆ ಹೆಂಗಸಿಗೆ ಮೈಮೇಲೆ ಎಚ್ಚರವಿದ್ದಂತೆ ಕಾಣಲಿಲ್ಲ. ಅವರೂ, ನಾಲ್ಕು ಜನ ಅಂಬಿಗರೂ ಆ ದೋಣಿಯಿಂದ ಸುವರ್ಣನಗರಾಭಿಮುಖವಾಗಿ ಹೊರಟು ಹೋದರು" ಎಂದು ಕಾವಲಿದ್ದ ತರುಣನು ಹೇಳಿದನು.

ಒಡನೆ ಎಲ್ಲರೂ ತಮ್ಮ ದೋಣಿಯಲ್ಲಿ ಕುಳಿತು ಮುಂದಿನ ದೋಣಿಯನ್ನು ಹಿಡಿಯಲು ಹೊರಟರು.

ಆ ಸ್ತ್ರೀ ಯಾರು? ಕದ್ದೊಯ್ದವರಾರು? ಹಿಂಬಾಲಿಸಿದ ತರುಣರು ಯಾರು!!! ಬನ್ನಿ ತಿಳಿಸುವೆವು.

ತರುಣರು ಯಾವ ಮನೆಯ ಮುಂಭಾಗದಲ್ಲಿ ಮೋಟಾರನ್ನು ನೋಡಿದ್ದರೋ ಆ ಮನೆಯು ಒಬ್ಬ ಸಾವುಕಾರನದಾಗಿತ್ತು. ಆ ಸಾವುಕಾರನು ನದಿಯ ಮೂಲಕವಾಗಿ ಪರದೇಶಗಳೊಂದಿಗೆ ವ್ಯಾಪಾರವನ್ನು ನಡೆಯಿಸಿ ತುಂಬಾ ಧನಿಕನಾಗಿದ್ದನು. ಆ ಸಾವುಕಾರನ ದ್ವಿತೀಯ ಪತ್ನಿಯೇ ಈಗ ಕದ್ದೊಯ್ಯಲ್ಪಟ್ಟಿದ್ದಳು. ಆಕೆಯನ್ನು ಕದ್ದಿರುವ ಪುರುಷನು ಆಕೆಯ ಸ್ನೇಹಿತನಾದೊಬ್ಬ ಡಾಕ್ಟರನು. ಬಾಲ್ಯದಲ್ಲಿ ಆ ತರುಣಿಯೂ, ಡಾಕ್ಟರನೂ ತುಂಬಾ ಒಡನಾಡಿಗಳಾಗಿದ್ದರು. ಆಕೆಯನ್ನು ಸಾವುಕಾರನಿಗೆ ಕೊಟ್ಟು ವಿವಾಹ ಮಾಡುವುದಕ್ಕೆ ಮುಂಚೆ ಡಾಕ್ಟರನು ಆಕೆಯನ್ನು ತಾನೇ ವರಿಸಲಿಚ್ಛಿಸಿದ್ದನು;

ಆದರೆ ದೈವೇಚ್ಛೆಯು ಬೇರೆಯಾಗಿ ತರುಣಿಯು ಸಾವುಕಾರನರ್ಧಾಂಗಿ ಯಾದಳು; ಆದರೂ ಅವರಿಬ್ಬರ ಸ್ನೇಹವು ತಪ್ಪಿರಲಿಲ್ಲ. ವಿವಾಹವಾದಂದಿನಿಂದ ಆಕೆಯು ಡಾಕ್ಟರನನ್ನು ಸಹೋದರ ಭಾವದಿಂದ ಪ್ರೀತಿಸುತ್ತಿದ್ದಳು. ಡಾಕ್ಟರನು ಮಾತ್ರ ಆ ವಿಧವಾದ ಪ್ರೀತಿಯನ್ನಿಚ್ಛಿಸದೆ ಸ್ವಕಾರ್ಯಸಾಧನೆಗೆ ಹೊಂಚು ಹಾಕುತ್ತಿದ್ದನು. ಡಾಕ್ಟರನು ಸಾವುಕಾರನಿಗೂ ತುಂಬಾ ಪರಿಚಯುದವನಾದುದರಿಂದ ದಿನಕ್ಕೊಂದು ಬಾರಿಯಾದರೂ ಅವರ ಮನೆಗೆ ಬಂದು ಹೋಗದೆ ಇರುತ್ತಿರಲಿಲ್ಲ. ಡಾಕ್ಟರನೀದಿನ ಕಂಪೌಂಡರನೊಬ್ಬನನ್ನು ಸಹಾಯಕ್ಕೊದಗಿಸಿಕೊಂಡು ತನ್ನ ಕಾರ್ಯವನ್ನು ನಡೆಸಿಬಿಟ್ಟನು. ಸಂಜೆಯ ಏಳುವರೆ ಘಂಟೆಯ ಸಮಯದಲ್ಲಿ ಸಾವುಕಾರನು ಕಾರ್ಯಾಂತರದಲ್ಲಾಸಕ್ತನಾದುದನ್ನು ತಿಳಿದು, ತರುಣಿಯ ಹತ್ತಿರ "ತನ್ನ ಮೋಟಾರಿನಲ್ಲಿ ಹೊಸ ಚಮತ್ಕಾರವೊಂದನ್ನು ತೋರಿಸುವೆನು" ಎಂದು ಹೇಳಿ ಮೋಟಾರನ್ನು ಹತ್ತಿಸಿ ಅಪಹರಿಸಿದ್ದನು.

ಎಂಟೂವರೆ ಗಂಟೆಯ ಸಮಯವಿರಬಹುದು. ಚಂದ್ರನ ಪ್ರಕಾಶವಿರಲಿಲ್ಲ. ಅಂಧಕಾರಾವೃತವಾದಾಕಾಶದಲ್ಲಿ ಅಲ್ಲಲ್ಲಿ ನಕ್ಷತ್ರಗಳು ಮಿನುಗುತ್ತಿದ್ದು ಬೆಳಕನ್ನುಂಟುಮಾಡುತ್ತಿದ್ದವು.

ತರುಣಿಯ ಕೈಕಾಲುಗಳು ಅಲುಗಾಡದಂತೆ ಕಟ್ಟಲ್ಪಟ್ಟಿದ್ದವು. ತಂಪಾದ ವಾಯುವಿನ ಸೇವನೆಯಿಂದ ತರುಣಿಯು ಎಚ್ಚತ್ತು, ತನ್ನ ದುರದೃಷ್ಟವನ್ನು ಮನಸ್ಸಿನಲ್ಲಿಯೇ ನಿಂದಿಸುತ್ತಾ ಆಕಾಶದ ಕಡೆಗೆ ದೀನ ನೋಟಗಳನ್ನು ಬೀರುತ್ತಿದ್ದಳು.

ತನ್ನ ಮುಂದಿನ ಸುಖದ ಗೊಂದಲಿನಲ್ಲಿ ತಲ್ಲೀನನಾಗಿದ್ದ ಡಾಕ್ಟರನು ತರುಣಿಯು ಎಚ್ಚತ್ತುದನ್ನು ತಿಳಿದು ಅಸಹಾಯಳಾಗಿ ಬಿದ್ದಿದ್ದ ಆ ತರುಣಿಯನ್ನೊಂದು ಬಾರಿ ಚುಂಬಿಸಿದನು.

ತರುಣಿಯು ಗಾಬರಿಯಿಂದ "ಹಾ! ಅಯ್ಯೋ! ಕೆಟ್ಟೆನು. ಯಾರಾದರೂ ಕಾಪಾಡಿ" ಎಂದು ಕೂಗತೊಡಗಿದಳು.

ಡಾಕ್ಟರನ ಅನ್ಯಾಯ ವರ್ತನೆಯನ್ನು ನೋಡದೆ ಇದ್ದ ಕಂಪೌಂಡರನು "ಇದೇನು? ಏನಾಯಿತು?" ಎಂದನು.

ಡಾಕ್ಟರನು "ಏನೂ ಇಲ್ಲ. ಎಚ್ಚತ್ತು ಭೀತಿಯಿಂದ ಕೂಗುತ್ತಿ ಬಹುದು" ಎಂದು ಹೇಳಿದನು.

ದೋಣಿಯು ವೇಗವಾಗಿ ಹೋಗುತ್ತಲೇ ಇತ್ತು. ಡಾಕ್ಟರನು ಮನಸ್ಸನ್ನು ಬಿಗಿಹಿಡಿಯಲಾರದೆ ತರುಣಿಯು ಮುಃಖದಿಂದ ಕಣ್ಣುಮುಚ್ಚಿದ್ದನ್ನು ಕಂಡು ಇನ್ನೊಂದು ಬಾರಿ ಚುಂಬಿಸಿದನು. ತರುಣಿಯು ತನ್ನ ಅವಸ್ಥೆಯಿಂದ ನಡುಗುತ್ತಾ ತತ್ತರಿಸಿದಳು. "ಹಾ! ಹಾ! ಕಾಪಾಡಿ. ಮರ್ಯಾದೆ ಹೋಗುತ್ತಿದೆ ಕಾಪಾಡಿ" ಎಂದು ಗಟ್ಟಿಯಾಗಿ ಮೊರೆಯಿಟ್ಟಳು. ಕಂಪೌಂಡರನು ಡಾಕ್ಟರನ ನೀಚತನವನ್ನು ನೋಡಿ ನಾಚಿದನು ಈ ದೋಣಿಯನ್ನು ಅಟ್ಟಿಕೊಂಡು ಹಿಂದಿನಿಂದ ಬರುತ್ತಿದ್ದ ತರುಣರು ತರುಣಿಯ ಕೂಗನ್ನು ದೂರದಿಂದ ಕೇಳಿ ದೋಣಿಯನ್ನು ವೇಗವಾಗಿ ನಡೆಸಿದರು. ಸ್ವಲ್ಪ ಹೊತ್ತಿನೊಳಗಾಗಿಯೇ ಮುಂದಿನ ದೋಣಿಯು ಸಮೀಪಿಸಿತು. ಬೆನ್ನಟ್ಟಿ ಬರುತ್ತಿರುವ ದೋಣಿಯುನ್ನು ಕಂಡು ಮುಂದಿನ ದೋಣಿಯ ಅಂಬಿಗರು ದುಡ್ಡಿನ ಆಶೆಯಿಂದ ಶಕ್ತಿಮೀರಿ ಹುಟ್ಟು ಹಾಕತೊಡಗಿದರು; ಆದರೂ ಪ್ರಯೋಜನವಾಗಲಿಲ್ಲ. ಹಿಂದಿನ ದೋಣಿಯು ಹತ್ತಿರಕ್ಕೇ ಬಂದಿತು ತರುಣನೊಬ್ಬನು "ಲೇ, ದೋಣಿಯುನ್ನು ನಿಲ್ಲಿಸಿರಿ. ವಿಲಂಬಿಸಿದರೆ ಸುಟ್ಟುಬಿಡುವೆವು" ಎಂದು ಕೂಗಿ ಗದರಿಸಿದನು.

ಒಡನೆ ಗತ್ಯಂತರವನ್ನು ಕಾಣದೆ ಡಾಕ್ಟರನೂ ಅವನ ಸಂಗಡಿಗನೂ ಪಿಸ್ತೂಲನ್ನು ಬಾರ್ ಮಾಡಿ ಗುಂಡುಗಳನ್ನು ಹಿಂಬಾಲಿಸಿದ ದೋಣಿಯವರ ಮೇಲೆ ಹಾರಿಸಲಾರಂಭಿಸಿದರು. ಹಿಂದಿನ ದೋಣಿಯಲ್ಲಿದ್ದ ತರುಣನೊಬ್ಬನು ಗುರಿನೋಡಿ ಎಸೆದ ಭಲ್ಲೆಯೊಂದು ಬಂದು ಡಾಕ್ಟರನ ತೊಡೆಗೆ ಹೊಕ್ಕು ಡಾಕ್ಟರನು ಭೂಶಾಯಿಯಾದನು, ಕಂಪೌಂಡರನು ಭೀತಿಯಿಂದ ಸ್ತಬ್ಧನಾಗಿ ನಿಂತನು.

ಅಂಬಿಗರೂ ಬೆದರಿ ದೋಣಿಯನ್ನು ನಿಲ್ಲಿಸಿದರು. ತರುಣ ಮುಖಂಡನು ಮುಂದೆ ಬಂದು ಎದುರಾಳಿಗಳ ದೋಣಿಯನ್ನು ಹತ್ತಿ ಕಂಪೌಂಡರನನ್ನು ಕಟ್ಟಿ ಉರುಳಿಸಿ, ಸ್ತ್ರೀಯ ಬಂಧನವನ್ನು ಬಿಡಿಸಿದನು. ತರುಣಿಯು ತನ್ನ ವೃತ್ತಾಂತವನ್ನು ನಿವೇದಿಸಿದಳು. ತರುಣ ಮುಖಂಡನು ಸಮಾಧಾನ

ವನ್ನು ಹೇಳಿ, ಎರಡೂ ದೋಣಿಗಳನ್ನು ಹಿಂದಿರುಗಿಸಲು ಹೇಳಿದನು. ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ದೋಣಿಗಳು ಸಮುತ್ಪಲವನ್ನು ಮುಟ್ಟಿದವು.

"ಡಾಕ್ಟರನ ಅನ್ಯಾಯಕ್ಕೆ ಈಗುಂಟಾದ ಶಿಕ್ಷೆಯೇ ಸಾಕಾಗಿದೆ" ಎಂದು ಮುಖಂಡನು ಹೇಳಿ, ಕಂಪೌಂಡರನಿಗೆ ಅಂಬಿಗರಿಂದ ಇಪ್ಪತ್ತೈದು ಛಡಿ ಗಳನ್ನು ಹೊಡೆಯಿಸಿ, ಅಂಬಿಗರಿಂದ ಡಾಕ್ಟರನನ್ನು ಮನೆಗೆ ಸಾಗಿಸುವ ವ್ಯವಸ್ಥೆಯನ್ನು ಮಾಡಿದನು.

ಸ್ತ್ರೀಯು ತರುಣರ ಪರಿಚಯುವನ್ನು ತಿಳಿಸುವಂತೆ ಬೇಡಿದಳು.

ಮುಖಂಡ—ನಾನು ಮೋಹನ. ಇವರು ನನ್ನ ಮಿತ್ರರು.

ಸ್ತ್ರೀ—ಏನು? ಮೋಹನನೇ!

ಮೋಹನ—ಹೌದು. ಭಯಪಡುವಿಯಾ?

ಸ್ತ್ರೀ—ನನ್ನ ಮಾನವನ್ನೂ, ಪ್ರಾಣವನ್ನೂ ಉಳಿಸಿರುವ ನನ್ನ ಭಾಗಕ್ಕೆ ದೇವರಂತಿರುವವರಲ್ಲ ನಾನೇಕೆ ಭಯಪಡಲಿ?

ನಿಮ್ಮ ಚರಣದಲ್ಲಿ ನನ್ನ ಸಾಷ್ಟಾಂಗ ನಮಸ್ಕಾರ ಅನಂತ ಉಪ ಕಾರಗಳನ್ನು ನನಗೆ ಮಾಡಿದಿರಿ.

ಮೋಹನ—ಅದಿರಲಿ. ನೀನಿನ್ನು ಮನೆಗೆ ಹೊರಡು. ಸಾವುಕಾರ ರಿಗೆ ನಿನ್ನಲ್ಲಿ ಸಂಶಯವು ಬಾರದೆ ಇರುವಂತೆ ತಕ್ಕ ವ್ಯವಸ್ಥೆಯನ್ನು ಮಾಡು ವೆನು. ಇನ್ನು ಮುಂದೆ ಆ ನೀಚನು ಮನೆಯ ಮೆಟ್ಟಲನ್ನೂ ಕೂಡ ಹತ್ತದೆ ಇರುವಂತೆ ನೋಡಿಕೊ. ನಿನಗೆ ಮಂಗಳವಾಗಲಿ" ಎಂದು ನುಡಿದು ಮೋಹ ನನು ಸ್ತ್ರೀಯನ್ನು ಕಳುಹಿಸಿ ಮಿತ್ರರೊಡನೆ ಹಿಂದಿರುಗಿದನು. ದಾರಿಯಲ್ಲಿ ಸಂಭಾಷಣೆಯು ನಡೆಯಿತು.

ಮೋಹನ—ಪ್ರಿಯನಾಥ, ನಿನ್ನಿಂದ ನಾವೀದಿನ ಒಂದು ಸರಿಯಾದ ಕಾರ್ಯವನ್ನು ಮಾಡಿದೆವು. ಆ ಸಮಯದಲ್ಲಿ ನಾವಲ್ಲಿ ಸೇರದೆ ಇದ್ದಿದ್ದರೆ ಆ ತರುಣಿಯು ಎಂತಹ ಅವಸ್ಥೆಗೆ ಗುರಿಯಾಗುತ್ತಿದ್ದಳು?

ಪ್ರಿಯನಾಥ—ನಾನು ಸಮುತ್ಪಲಕ್ಕೆ ಹೋದಾಗ ಒಂದು ದಿನ ಆ ಸಾವುಕಾರನನ್ನು ನಿರೀಕ್ಷಿಸಲು ಹೋಗಿದ್ದೆನು. ಅಲ್ಲಿ ಆ ತರುಣಿಯ ನಿಷ್ಕ ಪಟವಾದ ಭ್ರಾತೃಪ್ರೇಮವನ್ನೂ, ಡಾಕ್ಟರನ ಕುಟಿಲ ಸೌಹಾರ್ದವನ್ನೂ

ನೋಡಿ, ವಿಶೇಷರೀತಿಯಿಂದ ಡಾಕ್ಟರನನ್ನು ಬೇರೆ ಸ್ಥಳಗಳಲ್ಲಿ ಪರೀಕ್ಷಿಸಿದೆನು. ಈ ರಾತ್ರಿಯ ಗುಪ್ತಕಳವನ್ನು ತಿಳಿದೆನು. ಕೂಡಲೆ ನಿನ್ನ ಹತ್ತಿರ ಬಂದೆನು.

ಅದಿರಲಿ. ಸನ್ಮಂದಿಯ ವಿಚಾರವೇನಾಯಿತು?

"ಸನ್ಮಂದಿಯೆಂಬದು ಯಮುನಾಪುರಿಗೆ ಹತ್ತು ಮೈಲಿ ದೂರದಲ್ಲಿರುವ ಒಂದು ಗ್ರಾಮ."

ಮೋಹನ—ನಿದ್ರಾನಾಥನು ನಮ್ಮಿಂದ ಶಿಕ್ಷಿಸಲ್ಪಟ್ಟೊಡನೆ ಪೋಲೀಸ್ ಅಧಿಕಾರಿಗಳಿಗೆ ವರ್ತಮಾನವು ಹೋಯಿತು. ನಾನು ಅಪರಿಸಿದೆನೆಂಬು ದನ್ನು ಸಾಮಾನ್ಯವಾಗಿ ತಿಳಿದರೂ ಪೋಲೀಸ್ ಇನ್‌ಸ್ಪೆಕ್ಟರನು ಆ ಗ್ರಾಮ ದಲ್ಲಿಯೇ ಇದ್ದ ಹನ್ನೆರಡು ಜನರ ಮೇಲೆ ಹಿಂದಿನ ಒಂದು ದ್ವೇಷದಿಂದ ಕಳ ವಿನ ಆರೋಪವನ್ನು ಹೊರಿಸಿ, ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟರ ಮುಂದೆ "ಇವರೇ ಕಳ್ಳರು" ಎಂದು ಸುಳ್ಳು ಸಾಕ್ಷಿಗಳಿಂದ ಹೇಳಿಸಿದನು. ಆಪಾದಿ ತರು ಬಡವರಾದುದರಿಂದ ಅವರ ಪರವಾಗಿ ವಾದಿಸಲು ಯಾರೂ ಇಲ್ಲದೆ ಇನ್‌ಸ್ಪೆಕ್ಟರನ ಅಭಿಪ್ರಾಯದಂತೆ ಅವರಿಗೆ ನಾಲ್ಕು ವರ್ಷ ಕಠಿಣ ಸಜೆಯನ್ನು ಮ್ಯಾಜಿಸ್ಟ್ರೇಟರು ವಿಧಿಸಿದರು. ಆಪಾದಿತರು ಜೈಲಿನ ದುಃಖವನ್ನೀಗ ಅನು ಭವಿಸುತ್ತಿರುವರು.

ಪ್ರಿಯನಾಥ—ಈಗೇನನು ನಡೆಯಿಸಬೇಕು?

ಮೋಹನ—ಇನ್‌ಸ್ಪೆಕ್ಟರನನ್ನೇ ದಾರಿಗೆ ತರಬೇಕು.

ಪ್ರಿಯನಾಥ—ಹಾಗಲ್ಲದೆ ಜೈಲಲ್ಲಿ ಇದ್ದವರನ್ನು ನಾವಾಗಿಯೇ ಬಿಡಿ ಸಲು ಸಾಧ್ಯವಿಲ್ಲವೇನು?

ಮೋಹನ—ಪ್ರಯತ್ನಪಟ್ಟರೆ ಹಾಗೂ ಮಾಡಬಹುದು; ಆದರೆ ಅವರೀಗ ನಮ್ಮಿಂದ ಬಿಡಿಸಲ್ಪಟ್ಟು ಮನೆಗೆ ಬಂದರೂ ತಿರುಗಿ ಪೋಲೀಸರಿಂದ ಹಿಡಿಯಲ್ಪಟ್ಟು ಹೆಚ್ಚಾದ ಶಿಕ್ಷೆಗೆ ಪಾತ್ರರಾಗುವರು. ಅಧಿಕಾರಿಗಳೇ ಬಿಟ್ಟು ಬಿಟ್ಟರೆ ಯಾವ ತೊಂದರೆಯೂ ಇಲ್ಲ

ಪ್ರಿಯನಾಥ—ಹೌದು.

ಬಳಿಕ ಮೋಹನನೂ, ಮತ್ತವನ ಮಿತ್ರರೂ 'ರುಮದೆ' ಎಂಬಲ್ಲಿ ರೈಲನ್ನು ಹತ್ತಿ ಯಮುನಾಪುರಿಗೆ ಹೊರಟು ಹೋದರು.

ಸಮ್ಮಂಧಿಯ ಜನರನ್ನು ಅನ್ಯಾಯವಾಗಿ ಶಿಕ್ಷೆಗೆ ಒಳಪಡಿಸಿದ ಆ ಇನ್‌ಸ್ಪೆಕ್ಟರನಿಗೆ ಮೋಹನನೊಂದು ಕಾಗದವನ್ನು ಬರೆದನು.

"ಮಿ|| ಇನ್‌ಸ್ಪೆಕ್ಟರ ಸ|| ಕ್ಕೆ.

ಮೋಹನನಿಂದ ನಮಗೊಂದು ವಿಪತ್ತು ಬರುವಂತಿದೆ. ದಯವಿಟ್ಟು ಕೂಡಲೆ ಅಲ್ಲಿಗೆ ಬಂದು ಮಾತನಾಡಿಕೊಂಡು ಹೋಗಬೇಕು. ತಿರುಗಿ ನಾಳೆ ರಾತ್ರಿ ಪೋಲೀಸರೊಂದಿಗೆ ಬರಬೇಕು. ಮೋಹನನು ಇಲ್ಲಿಗೆ ಬರೆದ ಕಾಗದ ವನ್ನು ನೋಡಿದರೆ ನಿಮಗೆ ಅವನನ್ನು ಹಿಡಿಯಲು ಕಷ್ಟವಾಗಲಾರದೆಂದು ತೋರುತ್ತಿದೆ. ಕೂಡಲೆ ಬಂದು ಮಾತನಾಡಿಕೊಂಡು ಹೋಗಬೇಕು.

ಇತಿ ರಮಣದಾಸ. ಕಪಿಲೇಶ್ವರಗಲ್ಲಿ.
ಡೋರ್‌ನಂಬರ್ ೮೦, ಯಮುನಾಪುರಿಗೆ."

ಪ್ರಾತಃಕಾಲ ಆರೂವರೆ ಗಂಟೆಯ ಹೊತ್ತಿನಲ್ಲಿ ಇನ್‌ಸ್ಪೆಕ್ಟರನು ಮನೆ ಯಿಂದ ಹೊರಗ ಹೊರಡುವಕಾಲಕ್ಕೆ ಸರಿಯಾಗಿ ವೇಷಧಾರಿಯಾದ ಪ್ರಿಯ ನಾಥನು ಸೈಕಲ್ಲಿನ ಮೇಲೆ ಅಲ್ಲಿಗೆ ಬಂದು ಇನ್‌ಸ್ಪೆಕ್ಟರನ ಕೈಯಲ್ಲಿ ಕಾಗದ ವನ್ನೂ, ಹತ್ತು ರೂಪಾಯಿ ನೋಟನ್ನೂ ಕೊಟ್ಟು ಹೊರಟು ಹೋದನು.

ಇನ್‌ಸ್ಪೆಕ್ಟರನು ಕಾಗದವನ್ನೋದಿ ಪೋಲೀಸ್‌ಸ್ಟೇಷನ್ನಿಗೆ ಹೋಗಿ ಅಲ್ಲಿಂದ ಕಾಗದದಲ್ಲಿ ಬರೆದ ವಿಳಾಸದ ಮನೆಗೆ ಹೋದನು.

ಮೋಹನನು ಆ ಸ್ಥಳವನ್ನು ಮೊದಲೇ ಸಿದ್ಧಪಡಿಸಿಕೊಂಡಿದ್ದನು.

ಇನ್‌ಸ್ಪೆಕ್ಟರನು ಬಂದೊಡನೆ ಬಾಗಿಲಿನವನು ದಾರಿ ತೋರಿಸಿದನು. ಮನೆಯೊಳಗೆ ಪ್ರವೇಶಿಸಿದೊಡನೆ ಅವಿತು ಕುಳಿತಿದ್ದ ಮೋಹನನು ಥಟ್ಟನೆ ಮುಂದಕ್ಕೆ ಹಾರಿ ಇನ್‌ಸ್ಪೆಕ್ಟರನ ಮೂಗಿನ ಮೇಲೆ ಬಲವಾಗಿ ಗುದ್ದಿದನು.

ಇನ್‌ಸ್ಪೆಕ್ಟರನು ಎಚ್ಚೆತ್ತು ಪಿಸೂಲನ್ನು ತೆಗೆಯುವುದರೊಳಗಾಗಿಯೇ ಆಚೆ-ಈಚೆ ಕಾದಿದ್ದ ಮೋಹನನ ಮಿತ್ರರಿಂದ ಬಂಧಿಸಲ್ಪಟ್ಟನು. ಮೋಹ ನನು ಕತ್ತಿಯೊಂದನ್ನು ಇನ್‌ಸ್ಪೆಕ್ಟರನ ಕಂಠಕ್ಕೆ ಹಿಡಿದು ನುಡಿದನು.

ಮೋಹನ—ಈಗ ಸತ್ಯವನ್ನು ಹೇಳಿದರೆ ನಿನ್ನ ಜೀವವುಳಿದೀತು. ಅಸತ್ಯವನ್ನುಚ್ಚರಿಸಿದರೆ ಈಗಲೇ ನಿನ್ನ ಕತ್ತನ್ನು ಈ ಕತ್ತಿಯಿಂದ ಕತ್ತರಿಸಿ ಹಾಕುವೆನು. ಹೇಳು. ನಿನ್ನ ಎಲ್ಲಾ ಮೋಸಕಾರ್ಯವೂ ನನಗೆ ತಿಳಿದಿದೆ.

ನನ್ನನ್ನು ವಂಚಿಸಲು ನಿಮಗಾರಿಗೂ ಸಾಧ್ಯವಲ್ಲ. ತಿಳಿದಿರು. ನನಗೆ ತಿಳಿದ ಮೇಲೆ ನಿನ್ನ ಅನ್ಯಾಯದ ವರ್ತನೆಯನ್ನು ಖಂಡಿಸದೆ ಇರಲಾರೆನು.

ಭೀತನಾದ ಇನ್‌ಸ್ಪೆಕ್ಟರನು ತನ್ನ ತಪ್ಪನ್ನು ಒಪ್ಪಿಕೊಂಡನು. ಮೋಹನನು ಹೇಳಿದನು.

ಮೋಹನ--ಅನ್ಯಾಯವನ್ನೆಸಗಿ ಪ್ರಾಣಭೀತಿಯಿಂದ ಅದನ್ನೀಗ ಒಪ್ಪಿಕೊಂಡರೆ ತೀರುವುದೇನು? ಇನ್ನಾವಾಗಲೂ ಈ ತರಹ ಕಾರ್ಯವನ್ನು ಮಾಡುವುದಿಲ್ಲವೆಂದು ಮನಃಪೂರ್ವಕವಾಗಿ ಪ್ರತಿಜ್ಞೆಯನ್ನು ಮಾಡಬೇಕು.

ಅನ್ಯಾಯಮಾರ್ಗದಿಂದಲೇ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಲ್ಲದೆ ನ್ಯಾಯಮಾರ್ಗದಿಂದ ತುಂಬಿಸಲು ಆಗಲಾರದೇನು?

ಹಾಗೆ ಹಾಳುಮಾರ್ಗದಲ್ಲಿಯೇ ಈ ಹಾಳು ಉದ್ಯೋಗವು ಕೊಂಡು ಹೋಗುವುದಾದರೆ ಅಂತಹ ಉದ್ಯೋಗವಾದರೂ ಯಾಕೆ ಬೇಕು? ಸರ್ಕಾರದವರು ಅನ್ಯಾಯವನ್ನು ಮಾಡುವುದಕ್ಕಾಗಿ ಈ ಇಲಾಖೆಯನ್ನಿಟ್ಟಿರುವರೆಂದು ಭಾವಿಸಿರುವಿಯೇನು?

ಪ್ರತಿಯೊಂದು ಇಲಾಖೆಯೂ ನ್ಯಾಯದಿಂದಲೇ ವರ್ತಿಸಬೇಕೆಂದು ಸರ್ಕಾರದ ಆಜ್ಞೆಯು ನಿನಗೆ ತಿಳಿಯಲಿಲ್ಲವೇನು?

ನಿರಪರಾಧಿಗಳಾದವರನ್ನು ಆ ರೀತಿ ಗೋಳು ಹುಯ್ದು ಪೀಡಿಸುತ್ತಿರುವಾಗ ನಿನಗೆ ಸ್ವಲ್ಪವೂ ದಯೆ ಉಂಟಾಗಲಿಲ್ಲವೇ? ಆ ಬಡಜನಗಳು ಜೈಲಲ್ಲಿ ನರಳುತ್ತಿರಲು ಮನೆಯಲ್ಲವರ ಹೆಂಡಿರ ಮಕ್ಕಳ ಗತಿಯೇನು? ನೋಡು.

ಎಷ್ಟು ಜನರು ವ್ಯರ್ಥವಾಗಿ ನಿನ್ನಿಂದ ಶಿಕ್ಷಿಸಲ್ಪಟ್ಟು ನಿರ್ಗತಿಕರಾಗಿ ಧಾರಾಕಾರವಾದ ಬಾಷ್ಪೋದಕದಿಂದ ನಿನ್ನನ್ನು ಶತಶಃ ಶಪಿಸುತ್ತಿರುವರೆಂಬುದನ್ನು ಬಲ್ಲೆಯಾ?

ಇನ್‌ಸ್ಪೆಕ್ಟರನು ಕೃತ ಕರ್ಮಕ್ಕಾಗಿ ಪರಿತಪಿಸಿ ಹೇಳಿದನು. "ಸಾಕು. ನನಗೀ ಉದ್ಯೋಗವು ಬೇಡ. ಉದ್ಯೋಗಲಾಲಸೆಯು ಇಂದಿಗೆ ತೀರಿತು. ನನ್ನನ್ನು ಇನ್ನು ಏನು ಬೇಕಾದರೂ ಮಾಡು."

ಮೋಹನ — ಈಗ ಸಂತಪಿಸಿದರೆ ಪ್ರಯೋಜನವೇನು? ಈಗ ಅನ್ಯಾಯವಾಯಿತೆಂದು ತಿಳಿದು ಉದ್ಯೋಗದಿಂದ ನಿವೃತ್ತಿ ಹೊಂದಿದರೆ ನಿನ್ನ ಹೃದ

ಯದ ದೌರ್ಬಲ್ಯವು ಎಂಥಾದ್ದಿರುವುದೆಂದು ಸ್ಪಷ್ಟವಾಗುವುದು. ಇಂತಹ ದುರ್ಬಲ ಪುರುಷರು ಯಾವ ಕೆಲಸದಲ್ಲಿ ಸಮರ್ಥರಾದಾರು? ಆದ್ದರಿಂದ ನೀನೀಗ ಉದ್ಯೋಗವನ್ನು ಬಿಡುವುದು ಕೇವಲ ಅಪಹಾಸ್ಯವೇ ಸರಿ. ಇನ್ನಾದರೂ ನಿಂದನೀಯವಾದ ನಡತೆಗಳಿಂದ ದೂರವಿದ್ದು ನ್ಯಾಯಮಾರ್ಗದಲ್ಲಿ ಸಂಚರಿಸು.

ಈಗ ಆ ಹನ್ನೆರಡು ಜನ ಆಪಾದಿತರನ್ನು ಬಿಡಿಸಲು ಪ್ರಯತ್ನಿಸು.

ಇನ್‌ಸ್ಪೆಕ್ಟರ್ - ನೀನಂದಂತೆಯೇ ಇರುವೆನು. ಕೋರ್ಟಿನಲ್ಲಿ ತೀರ್ಮಾನವಾದ ಮೇಲೆ ಅವರನ್ನು ಹೇಗೆ ಬಿಡಿಸಲಿ? ದಯವಿಟ್ಟು ನೀನೇ ಯಾವುದಾದರೂ ಒಂದು ಉಪಾಯವನ್ನು ತಿಳಿಸು.

ಮೋಹನ—ನಾನು ಮ್ಯಾಜಿಸ್ಟ್ರೇಟರಿಗೂ, ಉಳಿದ ಅಧಿಕಾರಿಗಳಿಗೂ "ನಾನೇ ಅಲ್ಲಿ ಅಪಹರಿಸಿರುವೆನೆಂದೂ, ಈಗ ಹಿಡಿಯಲ್ಪಟ್ಟವರಾರೂ ಅಪರಾಧಿಗಳಲ್ಲವೆಂದೂ" ಕಾಗದವನ್ನು ಬರೆಯುವೆನು. ನೀನು ನಿನ್ನ ಕೆಲಸದಲ್ಲಿರು. ನನ್ನ ಕಾಗದವನ್ನವರು ತಿರಸ್ಕರಿಸಿದರೆ ಮುಂದೆ ಯೋಚನೆಯನ್ನು ಮಾಡುವೆನು. ನಿನ್ನ ಮೇಲೆ ಅಪನಂಬಿಕೆಯು ಉಂಟಾಗದಂತೆ ನೋಡಿಕೊಳ್ಳುತ್ತೇನೆ.

ಎಲ್ಲರೂ ಅಲ್ಲಿಂದ ಹೊರಟು ಹೋದರು.

× × × ×

ಮೋಹನನ ಇಚ್ಛೆಯಂತೆ ಸನ್ಮಂದಿಯ ಜನರು ಸೆರೆಯಿಂದ ಬಿಡಿಸಲ್ಪಟ್ಟರು.

ಒಂದು ದಿನ ಪ್ರಿಯನಾಥನೊಂದು ನೂತನ ವರ್ತಮಾನಪತ್ರವನ್ನು ತಂದು ಹೇಳಿದನು.

ಪ್ರಿಯನಾಥ—ನಿನಗಿದು ತಿಳಿದಿರುವುದೇ ಮೋಹನ?

ಮೋಹನ—ಯಾವುದು?

ಪ್ರಿಯನಾಥ—ರತನಮಲ್ಲಿಯ ಕೊಲೆ.

ಮೋಹನ—ರತನಮಲ್ಲಿಯು ಎಲ್ಲಿರುವದು?

ಪ್ರಿಯನಾಥ—"ಅಹೀಮತಿ" ಟೌನ್ನಿಗೆ ಹತ್ತಿರವಿರುವದು.

ಮೋಹನ—ಕೊಲೆಯು ಹೇಗೆ?

ಪ್ರಿಯನಾಥ—ಅದೊಂದು ಸಣ್ಣಗ್ರಾಮ ಸ್ತ್ರೀಯೊಬ್ಬಳು ಗಂಡನನ್ನೂ, ಅತ್ತೆಯನ್ನೂ ಕೊಂದುಹಾಕಿರುವಳಂತೆ.

ಮೋಹನ—"ಕೊಂದಿರುವಳಂತೆ" ಎಂದು ಹೇಳುವಿ ಹಾಗಾದರೆ ಅವಳು ಕೊಂದಿರುವುದು ಸುಳ್ಳೇನು?

ಪ್ರಿಯನಾಥ—ಪ್ರತ್ಯಕ್ಷವಾಗಿ ನೋಡದೆ ಪತ್ರಿಕೆಗಳ ಮತ್ತು ಪೋಲೀಸರ ಮಾತನ್ನು ನಂಬುವುದು ಹೇಗೆ?

ಮೋಹನ—ಅದು ನಡೆದುದು ಯಾವಾಗ?

ಪ್ರಿಯನಾಥ—ಇಪ್ಪತ್ತು ದಿನಗಳಾದವು.

ಮೋಹನ—ಆ ಹೆಂಗುಸಿನ ಅವಸ್ಥೆಯೇನಾಯಿತು?

ಪ್ರಿಯನಾಥ—ಅಹೀಮತಿ ಜೈಲಿನಲ್ಲಿ ಸೆರೆಯಿಡಲ್ಪಟ್ಟಿರುವಳು.

ಮೋಹನ—ಮುಂದೆ ಯಾರೂ ಆ ಹೆಂಗಸಿನ ಪರವಾಗಿ ವಾದಿಸಲಿಲ್ಲವೇನು?

ಪ್ರಿಯನಾಥ—ನಿರ್ಗತಿಕರ ಅವಸ್ಥೆಯು ಹೀಗೇ ಸರಿ. ಆ ಹೆಂಗಸೇ ಕೊಲೆಪಾತಕಿ ಇರಬಹುದೇನು?

ಮೋಹನ—ಅದು ಹೇಗೆ ಈಗ ತಿಳಿದೀತು? ಪರೀಕ್ಷಿಸೋಣ. ಕೂಡಲೆ ಮೋಹನನೂ ಮತ್ತವನ ಮಿತ್ರರೂ ಅಹೀಮತಿಗೆ ಪ್ರಯಾಣ ಬೆಳಿಸಿದರು. ಅಹೀಮತಿಯು ದೊಡ್ಡ ಟೌನಾಗಿತ್ತು.

ಅಹೀಮತಿಗೆ ಬಂದೊಡನೆ ಮೋಹನನು ಪ್ರಿಯನಾಥನನ್ನು ಕರೆದುಕೊಂಡು, ಉಳಿದವರನ್ನು ಅಹೀಮತಿಯಲ್ಲಿ ಇನ್ನೊಂದು ಕಾರ್ಯದಲ್ಲಿ ನೇಮಿಸಿ ರತನಮಲ್ಲಿಗೆ ಹೋದನು.

ಅಲ್ಲಿ ಗ್ರಾಮದವನೊಬ್ಬನನ್ನು ಕುರಿತು ಕೊಲೆಯ ವಿಚಾರದಲ್ಲಿ ಪ್ರಶ್ನೆ ಮಾಡಿದನು.

ಗ್ರಾಮದವನು "ಕೊಲೆಯ ವಿಚಾರವು ಬಡವರಿಗೇಕೆ?' ಎಂದು ಹೇಳಿದನು. ಮೋಹನನು ಅವನ ಕೈಯಲ್ಲಿ ಹತ್ತುರೂಪಾಯಿ ನೋಟೊಂದನ್ನಿಟ್ಟು, ಹೇಳಿದನು. "ನಿನಗೆ ತಿಳಿದುದನ್ನು ಮರೆಮಾಚದೆ ಹೇಳು

ಇದರಿಂದ ನಿನಗೆ ತುಂಬಾ ಪುಣ್ಯ ಉಂಟು. ಮೃತರಾದವರು ನನಗೆ ದೂರದ ಬಂಧುಗಳು."

ಗ್ರಾಮದವನು— ನೀವು ಅವರ ಬಂಧುಗಳೋ? ಹಾಗಾದರೆ ಹೇಳುತ್ತೇನೆ. ಅತ್ತೆಯೂ ಸೊಸೆಯೂ ಜಗಳವಾಡಿ ಸೊಸೆಯು ಅತ್ತೆಯನ್ನು ಕೊಂದು ಹಾಕಿದಳು.

ಮೋಹನ—ಆಗ ಗಂಡನು ಇರಲಿಲ್ಲವೆ!?

ಗ್ರಾಮದವ—ಅದು ಯಾರಿಗೆ ತಿಳಿದಿದೆ ಹೀಗೆಂದು ಪೋಲೀಸರು ನಿಶ್ಚೈಯಿಸಿರುವರು.

ಮೋಹನ–ಅಯ್ಯೋ ಪಾಪ! ಅಷ್ಟು ಸಣ್ಣ ಹುಡುಗೆಯು ಕೊಲೆಯನ್ನು ಮಾಡುವ ಸಾಹಸದಲ್ಲಿ ಉದ್ಯುಕ್ತಳಾದಳೇ? ಇಂತಹ ಧೈರ್ಯವು ಬಂದೀತೇ? ಗ್ರಾಮದವರಾದ ನಿಮಗೆಲ್ಲರಿಗೂ "ಇವಳೇ ಕೊಲೆಪಾತಕಿ" ಎಂದು ಯೋಚನೆ ಬಂದಿರುವುದೇ?

ಗ್ರಾಮದವ—ನಮ್ಮ ಮಾತನ್ನು ಕೇಳುವವರಾರು? ಇದ್ದದ್ದನ್ನು ಹೇಳಲು ಮುಂದಾದರೆ ನಮಗೇ ಕೇಡು ಬರುವುದು. ಪೋಲೀಸರ ಅಬ್ಬರವನ್ನು ಸಹಿಸುವರಾರು?

ಮೋಹನ—ಪೋಲೀಸರೆಲ್ಲಾದರೂ ಹೋಗಲಿ ನಿಜ ಸ್ಥಿತಿಯನ್ನು ನನಗೆ ದಯವಿಟ್ಟು ತಿಳಿಸು.

ಗ್ರಾಮದವ—ನಮ್ಮ ವಚನವನ್ನು ಯಾರು ನಂಬುವರು? ಪಾಪ! ಆ ಬಡಹುಡುಗೆಯ ಈಗಿನ ಅವಸ್ಥೆಯನ್ನು ಕೇಳುವರಾರು?

ಮೋಹನ—ತಿಳಿದುದನ್ನು ಹೇಳು. ಮುಂದೆ ನಮ್ಮ ಕೈಲಾದುದನ್ನು ನಡೆಯಿಸುವೆವು.

ಗ್ರಾಮದವ—ಅಹಿಂಮುತಿಯಲ್ಲಿ ವಾಮನರಾಯನೆಂಬೊಬ್ಬ ವಕೀಲನಿರುವನು. ಅವನಿಗೆ ಈ ಗ್ರಾಮದಲ್ಲಿ ಸ್ವಲ್ಪ ಭೂಮಿಯೂ, ಮನೆಯೂ ಇದೆ. ಆ ಕಾಮಾಂಧನ ದೃಷ್ಟಿಯು ಆ ಹೆಂಗಸಿನ ಮೇಲೆ ಬಿದ್ದು ಈ ಕಾರ್ಯವೆಲ್ಲವೂ ನಡೆಯಿತು.

ಮೋಹನ—ಆ ಸ್ತ್ರೀಯು ಅವನನ್ನು ಪ್ರೀತಿಸುವಳೇನು?

ಗ್ರಾಮದವ--ಇಲ್ಲ. ಇಂತಹ ಪಾಪವು ಅವಳಲ್ಲಿಲ್ಲ. ಕೊಲೆಯ ಅಪರಾಧವನ್ನು ಅವಳ ಮೇಲಿಟ್ಟು ಈಗ ಜೈಲಲ್ಲಿ ಸೆರೆಯಿಟ್ಟಿರುವರು.

ಮೋಹನ—ಗಂಡನ ವಿಷಯವೇನು?

ಗ್ರಾಮದವ—ಅವನೂ ಕೊಲ್ಲಲ್ಪಟ್ಟಿರುವನೆಂದು ವರ್ತಮಾನವಿದೆ; ಆದರೆ ಅದು ಸಂದೇಹದಲ್ಲಿದೆ.

ಮೋಹನ—ವಿರೋಧವಾಗಿ ಹೇಳಲು ಯಾರೂ ಇಲ್ಲವೇ?

ಗ್ರಾಮದವ--ಈ ಕಾಲದಲ್ಲಿ ಎಲ್ಲರೂ ಗೆದ್ದ ಎತ್ತಿನ ಬಾಲವನ್ನು ಹಿಡಿಯುವರೇ ಆದ ಮೇಲೆ ಬಡಜನರ ಗೋಳು ಹೀಗೆಯೇ ಸರಿ.

ಮೋಹನ—ತರುಣಿಯು ಜೈಲಲ್ಲಿದ್ದರೆ ಕಾಮುಕನಾದ ವಕೀಲನಿಗೇನು ಪ್ರಯೋಜನ?

ಗ್ರಾಮದವ—ಜೈಲ್ ಮುಖ್ಯಾಧಿಕಾರಿಯು ವಕೀಲನ ಸ್ನೇಹಿತನೊ ಅಥವಾ ನಂಟನೊ ಇರಬೇಕೆಂದು ವರ್ತಮಾನವಿದೆ

ಮೋಹನ—ನೀನು ಹೇಳಿದ ವಿಷಯವನ್ನು ಹೇಳಿರುವಿ ನಿನಗೆ ಪುಣ್ಯ ಬರಲಿ. ನಾವೀಗ ಹೋಗುವೆವು. ತಕ್ಕ ಪ್ರಯತ್ನವನ್ನು ಜರುಗಿಸುವೆವು.

ಮೋಹನನು ತಿಳಿಯಬೇಕಾದುದನ್ನು ತಿಳಿದು ಪ್ರಿಯನಾಥನೊಡನೆ ಅಲ್ಲಿಂದ ಹಿಂದಿರುಗಿ ಅಹೀಮತಿಗೆ ಬಂದು ಮಿತ್ರರೊಡನೆ ಬೇಕಾದ ಸ್ಥಳಗಳಲ್ಲಿ ಹೊಂಚುಹಾಕಿ ತಿಳಿಯಬೇಕಾದುದನ್ನು ತಿಳಿದು ಸಾಯಂಕಾಲ ಎಂಟು ಗಂಟೆಯ ಹೊತ್ತಿನಲ್ಲಿ ಮೋಹನನು ಮಿತ್ರರೊಂದಿಗೆ ವಾಮನರಾಯನ ಮನೆಯನ್ನು ಹುಡುಕಿಕೊಂಡು ಹೋದನು. ಮನೆಯ ಬಾಗಿಲಿನಲ್ಲಿ ಮೋಟಾರ್ ಕಾರೊಂದು ನಿಂತದ್ದನ್ನು ನೋಡಿ ಮೋಹನನು ಮಿತ್ರರ ಹತ್ತಿರ "ಮೋಟಾರೊಂದು ಇಲ್ಲಿ ನಿಂತಿದೆ ಜಾಗರೂಕರಾಗಿ ಹತ್ತಿರದಲ್ಲಿಯೇ ನಿಂತಿರಿ. ಇದೇ ಮೋಟಾರಿನಲ್ಲಿಯೇ ಓಡಿ ಹೋಗಬೇಕು" ಎಂದು ಹೇಳಿ, ಬಾಗಿಲಿನಲ್ಲಿರುವ ಸೇವಕನ ಹತ್ತಿರ ಹಿಂದು ಕಾಗದವನ್ನು ವಕೀಲನಿಗೆ ಕಳುಹಿಸಿದನು. ಕಾಗದವು ಈ ಮೇರೆ ಇತ್ತು.

"ಪ್ರಿಯ ವಕೀಲರ ಸ|| ಕ್ಕೆ

ಗುಪ್ತವಾದೊಂದು ವಿಚಾರವನ್ನು ಚರ್ಚಿಸುವುದಿದೆ. ಈಗ ನಿಮಗೆ ಅವಕಾಶವಿರುವುದನ್ನು ತಿಳಿದು ಬಂದಿರುವೆನು.

ಇತಿ ನಚುವರ್ದ ಸೇಠ್."

ಸೇವಕನು ಹಿಂದಿರುಗಿ ಬಂದು ವಕೀಲರ ಆಫೀಸ್ ರೂಮಿಗೆ ದಾರಿ ತೋರಿಸಿದನು. ಮೋಹನನು ಬಂದೊಡನೆ ವಕೀಲನು ಕಕ್ಷಿಗಾರರೊಡನೆ ಮಾತನಾಡುತ್ತಿದ್ದುದನ್ನು ನಿಲ್ಲಿಸಿ, ಅವರನ್ನು ಕಳುಹಿಸಿ ಮೋಹನನನ್ನು ಒಳಗೆ ಬರಮಾಡಿಕೊಂಡು 'ಏನು ವಿಚಾರ" ಎಂದನು.

ಮೋಹನ—ರತನಮಲ್ಲಿಯಿಂದ ತಂದಿರುವ ತರುಣಿಯ ವಿಚಾರ ವನ್ನು ಕೇಳಲು ಬಂದೆನು.

ವಾಮನರಾಯ—ಏನನ್ನು ಕೇಳುತ್ತೀರೆಂಬುದೇ ನನಗೆ ತಿಳಿಯಲಿಲ್ಲ.

ಮೋಹನ—ತರುಣಿಯು ತಮ್ಮನ್ನು ಕಾಮಿಸಿ ಬಂದಿರುವಳಂತೆ. ನಿಜವೇ!

ವಾಮನರಾಯ—ಅದೊಂದೂ ನನಗೆ ತಿಳಿಯದು. ಕೊಲೆ ಮಾಡಿರು ವುದರಿಂದ ಜೈಲಲ್ಲಿರುವಳು.

ಮೋಹನ—ಅವಳೇ ಕೊಲೆಮಾಡಿರುವಳು ಎಂದು ನಿಮಗೆ ಹೇಗೆ ತಿಳಿಯಿತು?

ವಾಮನರಾಯ-ಇದನ್ನೆಲ್ಲಾ ನನ್ನ ಹತ್ತಿರ ಬಂದು ಏಕೆ ಕೇಳುತ್ತೀರಿ?

ಮೋಹನ--ಅದು ಹೋಗಲಿ. ಅವಳಲ್ಲಿ ನಿಮಗೆ ಪ್ರೀತಿಯಿರುವುದಷ್ಟೆ.

ವಾಮನರಾಯ—ಈ ವಿಷಯದಿಂದ ನಿಮಗೇನು ಲಾಭ?

ಮೋಹನ - ಆ ತರುಣಿಯಲ್ಲಿ ನಿಮಗೆ ಪ್ರೀತಿ ಇರದಿದ್ದರೆ ನಾನು ಆಕೆ ಯನ್ನು ಹೊಂದಲು ದಯವಿಟ್ಟು ನನಗೆ ಸಹಾಯವನ್ನು ಮಾಡಬೇಕು.

ವಾಮನ—ಅದಾವುದೂ ನನಗೆ ತಿಳಿಯದು. ಬಲವಾದ ಜೈಲಲ್ಲಿರುವ ಆಕೆಯನ್ನು ಹೇಗೆ ಹೊಂದುವಿರಿ?

ಮೋಹನ—ನಿಮಗೆ ಪ್ರೀತಿಯಿದ್ದರೆ ಹೇಗೆ ಆಕೆಯನ್ನು ಹೊಂದಲು ಯತ್ನಿಸುತ್ತಿದ್ದಿರಿ?

ವಾಮನರಾಯ-ಮನಬಂದಂತೆ ನೀವೇ ಏನೇನನ್ನೊ ಹೇಳುತ್ತಿರುವಿರಿ.

ಮೋಹನ—ಹಾಗಾದರೆ ನಿಮಗವಳಲ್ಲಿ ಪ್ರೀತಿಯಿಲ್ಲವೆಂದಾಯಿತು. ಹಾಗಿದ್ದರೆ ನನಗೆ ಸಹಾಯ ಮಾಡಲು ಒಪ್ಪಿರಿ.

ವಾಮನರಾಯ—ಜೈಲಿಗೆ ನನ್ನ ಸಹಾಯವೇನಿದ್ದೀತು. ಕೋರ್ಟಿನಲ್ಲಿ ನಾನು ವಾದಿಸಬೇಕೇ?

ಮೋಹನ—ನೀವೇನೂ ಯೋಚಿಸಬೇಡಿ. ನೀವು ಮಾಡತಕ್ಕ ಸಹಾಯವು ಎಂಥಾದ್ದಿರುವುದೆಂದು ನಾನು ಬಲ್ಲೆನು. ಮೊದಲು ಇದನ್ನು ತೆಗೆದು ಕೊಳ್ಳಿ. ಎಂದು ಹೇಳಿ ಐನೂರು ರೂಪಾಯಿ ನೋಟುಗಳನ್ನು ತೋರಿಸಿ "ಈಗ ಇದನ್ನು ಸ್ವೀಕರಿಸಿರಿ. ಕಾರ್ಯವಾದ ಮೇಲೆ ತಿರುಗಿ ಐನೂರು ರೂಪಾಯಿಗಳನ್ನು ಕೊಡುವೆನು. "ಜೈಲಿಗೆ ಸೇರಿರುವಾಗ ನಾನೇನು ಮಾಡಲಿ" ಎಂದು ಪ್ರಯೋಜನವಿಲ್ಲದ ಮಾತನ್ನು ನನ್ನ ಹತ್ತಿರ ಹೇಳಬೇಡಿ ಜೈಲ್ ಮುಖ್ಯಾಧಿಕಾರಿಯು ನಿಮ್ಮ ಸ್ನೇಹಿತನೆಂಬುದು ಗೊತ್ತಿದೆ. ಹೂ, ತೆಗೆದು ಕೊಳ್ಳಿ" ಎಂದನು.

ವಾಮನರಾಯ—ಇಲ್ಲ. ನಾನೀ ಹೇಡಿ ಕೆಲಸದಲ್ಲಿ ಸೇರಲಾರೆನು.

ಮೋಹನ—ಹೇಡಿ ಕೆಲಸವು ಯಾವುದು?

ವಾಮನರಾಯ ಜೈಲಲ್ಲಿ ಸೆರೆ ಸಿಕ್ಕಿದ ಬಡ ತರುಣಿಯನ್ನು ಮೋಸದಿಂದ ಇನ್ನೊಬ್ಬರಿಗೆ ಮಾರುವುದು ಹೇಡಿ ಕಾರ್ಯವಲ್ಲದೆ ಮತ್ತೇನು?

ಮೋಹನ -ಏನು? ಇದು ಹೇಡಿಕಾರ್ಯವೆ? ಇದೇ ತರುಣಿಯನ್ನು ಮೋಸದಿಂದ ನೀವು ಕಾಮಿಸುತ್ತಿರುವುದು ಹೇಡಿಕಾರ್ಯವಲ್ಲವೇನು? ಆಕೆಯನ್ನು ತರುವುದಕ್ಕಾಗಿ ಆಕೆಯ ಅತ್ತೆಯನ್ನೂ, ಗಂಡನನ್ನೂ ಕೊಲ್ಲಿಸಿರುವುದು ಹೇಡಿಕಾರ್ಯವಲ್ಲವೇ? ಇಲ್ಲಿಗೆ ತಂದು ನೆವಮಾತ್ರಕ್ಕೆ ಜೈಲಲ್ಲಿಟ್ಟು ಜೈಲ ಅಧಿಕಾರಿಯ ಸಹಾಯದಿಂದ ಆಕೆಯ ಮನಸ್ಸನ್ನು ಇತ್ತ ಕಡೆಗೆ ಎಳೆಯುತ್ತಿರುವುದು ನೀಚಕಾರ್ಯವಲ್ಲವೇ?

ನಾನು ಯಾರೆಂದು ತಿಳಿದು ನೀಚತನವನ್ನು ಮುಚ್ಚುತ್ತಲಿರುವಿ. ವೇಷದಿಂದ ನಾನು ಸೇಠ್ ಆದರೂ ವಾಸ್ತವಿಕವಾಗಿ ಮೋಹನನಿರುವೆನು. ಯಾರು ತಿಳಿಯಿತೇ! ಮೋಹನ. ನೀನು ಪಾಪಕಾರ್ಯವನ್ನು ನಡೆಸುತ್ತಿದ್ದು

ಪಾತಾಳವನ್ನು ಹೊಕ್ಕರೂ ಬಿಡದೆ ಇರತಕ್ಕ ಮೋಹನನು ನಾನು. ಪಾಪಿ! ನನ್ನಿಂದ ತಪ್ಪಿಸಿಕೊಳ್ಳುವಿಯಾ? ಮೋಹನನ ಮಾತುಗಳಿಂದ ವಕೀಲನ ಮೋಸವು ಹೊರಬಿದ್ದು ಮುಖವು ಕಪ್ಪಾಯಿತು. ಇನ್ನು ತನಗೆ ಉಳಿಗಾಲವಿಲ್ಲ ವೆಂದು ವಕೀಲನು ಭಯಗೊಂಡನು. ಮತ್ತೇನನ್ನೋ ಯೋಚಿಸಿ, "ನನ್ನ ಕಾರ್ಯವು ಅನ್ಯಾಯವಾದುದೆಂಬುದನ್ನು ಒಪ್ಪುವೆನು. ನನ್ನನ್ನು ಕ್ಷಮಿಸ ಬೇಕು" ಎಂದು ಹೇಳಿ ವಕೀಲನು ಕುರ್ಚಿಯಿಂದ ಎದ್ದು ನಿಂತನು. ವಕೀ ಲನ ಮುಖವನ್ನು ನಿರೀಕ್ಷಿಸುತ್ತಿದ್ದ ಮೋಹನನು ಅವನ ಹೃದಯವನ್ನರಿತು, "ಯಾಕೆ ವಕೀಲರೇ, ಎದ್ದುನಿಂತಿರಿ? ಭಯಪಡಬೇಡಿ ಕುಳಿತುಕೊಳ್ಳಿರಿ. ಈಗ ಮಾತನಾಡಲವಕಾಶವಿಲ್ಲದಿದ್ದರೆ ಇನ್ನೊಂದು ದಿನ ಬರುವೆನು" ಎಂದು ಹೇಳಿ ತಾನೂ ಎದ್ದು ನಿಂತನು. ಪಿಸ್ತೂಲೊಂದನ್ನು ತೆಗೆದುಕೊಂಡು ಬಾರ್ ಮಾಡುತ್ತಿದ್ದ ವಕೀಲನನ್ನು ನೋಡಿ ಮೋಹನನು ಥಟ್ಟನೆ ಮುಂದಕ್ಕೆ ಹಾರಿ ಪಿಸ್ತೂಲಿದ್ದ ಕೈಯನ್ನು ಬಲವಾಗಿ ಹಿಡಕೊಂಡು, ಅವನ ಕಾಲುಗಳ ಮಧ್ಯದಲ್ಲಿ ಕಾಲನ್ನು ಸಿಕ್ಕಿಸಿ ನೆಲಕ್ಕುರುಳಿಸಿ ಬಿಟ್ಟನು.

ಬಿದ್ದೊಡನೆ ವಕೀಲನು ಕೂಗಿದನು. ಒಡನೆ ಮೋಹನನು ವಕೀಲನೆದೆ ಗೊಂದು ಬಲವಾಗಿ ಒದೆಯನ್ನು ಕೊಟ್ಟು ಹೊರಗೆ ಓಡಿದನು ವಕೀಲನ ಕೂಗನ್ನು ಕೇಳಿ ಓಡಿಬಂದ ಸೇವಕನೊಬ್ಬನನ್ನು ಗರಗರ ತಿರುಗಿಸಿ ಎಸೆದು ಬಿಟ್ಟು ಹೊರಗೆ ಬೀದಿಗೆ ಬಂದನು ಮೊದಲು ನೋಡಿಟ್ಟ ಮೋಟಾರ್ ಅಲ್ಲಿಯೇ ಇದ್ದುದನ್ನು ಕಂಡು ಕೈಚಪ್ಪಾಳೆಯನ್ನು ತಟ್ಟಿದನು.

ಒಡನೆ ಮಿತ್ರರೆಲ್ಲರೂ ಓಡಿ ಬಂದರು. ಮೋಟಾರಿನಲ್ಲಿ ಕುಳಿತಿದ್ದ ಡ್ರೈವರನನ್ನು ಒಡನೆ ಕೆಳಗೆ ಎಳೆದು ಹಾಕಿ ಮೋಟಾರನ್ನು ಹತ್ತಿ ಎಲ್ಲರೂ ಹೊರಟು ಹೋದರು.

ಒಂಭತ್ತು ವರೆ ಗಂಟೆಯ ಹೊತ್ತಿಗೆ ಮೋಹನನು ಮಿತ್ರರೊಂದಿಗೆ ಅದೇ ಮೋಟಾರಿನಲ್ಲಿ, ಕುಳಿತು ಜೈಲ್ ಮುಖ್ಯಾಧಿಕಾರಿಯ ಬಂಗ್ಲೆಗೆ ಹೋದರು.

ಅಧಿಕಾರಿಯು ಆಗ ತಾನೇ ಊಟ ಮಾಡಿ ಒಳಗೆ ಇತ್ತಿಂದತ್ತ ತಿರುಗು ತ್ತಿದ್ದನು. ಮನೆಯ ಬಾಗಿಲಿನಲ್ಲಿ ಮೋಟಾರನ್ನು ನಿಲ್ಲಿಸಿದರು. ಮನೆಯ

ಬಾಗಿಲು ಹಾಕಲ್ಪಟ್ಟಿದ್ದಿತು. ಮೋಹನನು ಮುಂದೆ ಬಂದು ಬಾಗಿಲನ್ನು ತಟ್ಟಿದನು. ಸ್ವಲ್ಪ ಹೊತ್ತಾದ ಮೇಲೆ ಅಧಿಕಾರಿಯು ಸ್ವತಃ ಬಂದು ಬಾಗಿಲನ್ನು ತೆಗೆದು 'ಯಾರು' ಎಂದು ಕೇಳಿದನು.

"ಸ್ವಲ್ಪ ಹೊರಗೆ ಬನ್ನಿ. ವಾಮನರಾಯರು ನನ್ನನ್ನು ಕಳುಹಿಸಿರುವರು" ಎಂದು ಮೋಹನನು ತಿಳಿಸಿದೊಡನೆ ಅಧಿಕಾರಿಯು ಬಾಗಿಲಿನ ಹೊರಗೆ ಇರುವ ಜಗುಲಿಗೆ ಬಂದು 'ಏನು ವಿಶೇಷ!' ಎಂದು ಕೇಳಿದನು.

ಮೋಹನ—ರತನಮಲ್ಲಿಯಿಂದ ತಂದಿರುವ ತರುಣಿಯ ವಿಚಾರದಲ್ಲಿ ವಾಮನರಾಯರು ಏನನ್ನೋ ಹೇಳಿ ನನ್ನನ್ನು ಕಳುಹಿಸಿರುವರು.

ಅಧಿಕಾರಿ—ಏನು!

ಮೋಹನ—ಆ ಹೆಂಗಸಿನ ಸಂಬಂಧಿಗಳೊಬ್ಬರು ವಾಮನರಾಯರ ಮನೆಗೆ ಬಂದು ಏನೇನನ್ನೋ ಹೇಳುತ್ತಿರುವರಂತೆ.' ಇಷ್ಟನ್ನು ಹೇಳಿ ಮೋಹನನು ಮುಂದೆ ಕೈತೋರಿಸಿ "ಅಯ್ಯಯ್ಯೋ! ಹೋಯಿತು. ಅಲ್ಲಿ ನೋಡಿ" ಎಂದು ಗಾಬರಿಯಿಂದ ಹೇಳಿದನು. ಅಧಿಕಾರಿಯು "ಎಲ್ಲಿ ಎಲ್ಲಿ" ಎಂದು ಕತ್ತನ್ನು ಮುಂದೆ ಮಾಡಿ ನೋಡಲು ಮುಂದುವರಿದನು. ಒಡನೆ ಹೊಂಚು ಹಾಕಿದ್ದ ಮೋಹನನ ಮಿತ್ರರು ನಾಲ್ಕೂಕಡೆಗಳಿಂದ ನೆಗೆದು ಹಾರಿ ಅಧಿಕಾರಿಯನ್ನು ಅಲುಗಾಡಲು ಬಿಡದೆ ಕಟ್ಟಿದರು.

ಮೋಹನನ "ಅಯ್ಯಯ್ಯೊ" ಎಂಬ ಸದ್ದನ್ನು ಕೇಳಿ ಒಳಗಿನಿಂದ ಓಡಿ ಬರುತ್ತಿದ್ದ ಸೇವಕರನ್ನು ನೋಡಿ ಮೋಹನನು ಹೊರಗಿನ ಬಾಗಿಲನ್ನು ಥಟ್ಟನೆ ಎಳೆದು ಕೊಂಡಿ ಹಾಕಿಬಿಟ್ಟನು. ಅಧಿಕಾರಿಯನ್ನು ಮೋಟಾರಿನೊಳಗೆ ಇಟ್ಟುಕೊಂಡು ಎಲ್ಲರೂ ಅಲ್ಲಿಂದ ಕ್ಷಣದೊಳಗೆ ಪರಾರಿಯಾಗಿ ಗುಪ್ತವಾದ ಒಂದು ನಿರ್ಜನ ಪ್ರದೇಶದಲ್ಲಿ ಅಧಿಕಾರಿಯ ಬಂಧನವನ್ನು ಬಿಡಿಸಿದರು.

ಮೋಹನನು ತನ್ನ ಪರಿಚಯವನ್ನು ತಿಳಿಸಿ, ವಾಮನರಾಯರನ್ನು ಮೋಸಪಡಿಸಿದುದನ್ನೂ ವಿವರಿಸಿ, "ನೀವು ನನ್ನ ವರ್ತನೆಯನ್ನರಿತಿರಬಹುದು ಇನ್ನಾದರೂ ನೀವು ಈ ಅನ್ಯಾಯಕರ್ಮದಿಂದ ದೂರ ಸರಿದು ನಿಂತರೆ ನಿಮಗೆ ಅನುಕೂಲವಾಗುವುದು. ಇದಕ್ಕೊಪ್ಪದಿದ್ದರೆ ನಮ್ಮ

ಕೈಯಲ್ಲಿ ನೀವು ಕೊಳೆಯಬೇಕಾದೀತು. ಏನು? ಹೇಳಿ" ಎಂದು ಪ್ರಶ್ನೆ ಮಾಡಿದನು.

ಅಧಿಕಾರಿ--ಅನ್ಯಾಯವನ್ನು ಮಾಡತಕ್ಕ ಕಾಲದಲ್ಲಿ ಮುಂದಿನ ಶಿಕ್ಷೆಯ ನೆನಪಾಗದೆ ಒಂದರ ಮೇಲೊಂದು ಎಷ್ಟೋ ದುಷ್ಟ ಕೆಲಸಗಳು ನಡೆದು ಹೋಗುವವು. ಸ್ತ್ರೀ ಮೇಲಿನ ದುಷ್ಟ ಆಶೆಯಿಂದ ಇಷ್ಟು ಅನರ್ಥಗಳು ಒದಗಿದವು. ವಾಮನರಾಯರ ಸ್ನೇಹವು ಈ ಸಮಯದಲ್ಲಿ ನನಗುಂಟಾದುದಲ್ಲ. ಬಹುಕಾಲದಿಂದಲೂ ಅದು ಇದ್ದಿತ್ತು. ಕೊಲೆಯನ್ನು ನಡೆಯಿಸಿ ತರುಣಿಯನ್ನು ಇಲ್ಲಿಗೆ ಒಯ್ದ ನಂತರ ವಾಮನರಾಯರು ತಮ್ಮ ಮನದ ಆಶೆಯನ್ನು ತಿಳಿಸಿ, ನನ್ನ ಸಹಾಯವನ್ನು ಕೋರಿದರು. ಅನಂತರ ಅವರ ತೃಪ್ತಿಗಾಗಿ ಆ ತರುಣಿಯ ಮನಸ್ಸನ್ನು ತಿರುಗಿಸಲು ಮಾತ್ರ ನಾನು ಸಹಾಯಕನಾಗಿದ್ದೆನು. ಅದಿನ್ನೂ ಸಿದ್ಧಿಸಲಿಲ್ಲ. ಇನ್ನಾವ ಅನ್ಯಾಯವೂ ನನ್ನಿಂದ ಸಂಭವಿಸಲಿಲ್ಲ.

ನಾನಿನ್ನು ಅವರ ಸ್ನೇಹವನ್ನಪೇಕ್ಷಿಸುವದಿಲ್ಲ. ಇನ್ನು ಮುಂದೆ ಅವರನ್ನು ಯಾವ ಶಿಕ್ಷೆಗೆ ಒಳಪಡಿಸಿದರೂ ನನಗೆ ಇಷ್ಟವೇ ಸರಿ. ನೀನಿನ್ನು ಮನಬಂದಂತೆ ಮಾಡಬಹುದು.

ಮೋಹನ—ಇದುವರಿಗಾದರೂ ಅವನಿಗೆ ಸಹಾಯ ಮಾಡಿದುದಕ್ಕಾಗಿ ಆ ಪಾಪವನ್ನನುಭವಿಸಲು ನೀವು ಸಿದ್ಧರಿರಬೇಕು.

ಅಧಿಕಾರಿ—ಸಿದ್ಧನಾಗಿರುವೆನು.

ಮೋಹನ—ಸಂತೋಷ. ಇನ್ನಾವುದೂ ಅಲ್ಲ. ಆ ತರುಣಿಯ ಪರವಾಗಿ ಮುಂದೆ ನಿಂತು ನೀವು ವಾದಿಸಬೇಕು. ಅದಕ್ಕೆ ತಕ್ಕ ಸಹಾಯವನ್ನು ನಾನೊದಗಿಸುವೆನು. ಇನ್ನಾರೂ ಇದಕ್ಕೆ ವಿಘ್ನವನ್ನು ತರಲಾರರು. ನಾನು ಮುಂದೆ ನಿಂತು ವಾದಿಸುವಂತಿಲ್ಲ. ಆ ಹೆಂಗಸಿನ ಗಂಡನ ಸಮಾಚಾರವೇನಾಯಿತು? ಅವನೂ ಕೊಲೆಯಾದನೆಂದು ಲೋಕದಲ್ಲಿ ಹರಡಿದ್ದರೂ, ಗುಟ್ಟಾದ ಒಂದು ಸಮಾಚಾರದಿಂದ ಅವನಿನ್ನೂ ಬದುಕಿ ಇರುತ್ತಿರುವನೆಂದೇ ನನ್ನ ಅಭಿಪ್ರಾಯ. ನಿಮಗೇನಾದರೂ ಆ ವಿಚಾರವು ತಿಳಿದಿರುವುದೇ?

ಅಧಿಕಾರಿ—ತಿಳಿದಿವೆ ಅವನೂ ಒಂದು ಅಪರಾಧದ ಆರೋಪದಿಂದ ಜೈಲಿನಲ್ಲಿ ನರಳುತ್ತಿರುವನು.

ಮೋಹನ—ಹಾಗಾದರೆ ಅವನು ಮರಣಹೊಂದಿರುವುದು ಸುಳ್ಳಷ್ಟೆ!

ಅಧಿಕಾರಿ—ಇನ್ನಾರೂ ರಕ್ಷಕರಿಲ್ಲವೆಂದು ತಿಳಿದು ಆ ಹೆಂಗಸು ವಶಳಾಗುವಳೆಂದು ಆ ರೀತಿ ವಾರ್ತೆಯನ್ನು ಹಬ್ಬಿಸಿದರು; ಆದರೆ ಕೋರ್ಟಿನಲ್ಲಿ ತೀರ್ಮಾನಿಸಿದ ಇವನ್ನು ಹೇಗೆ ಸರಿಪಡಿಸಲಿ.

ಮೋಹನ—ಹೇಗಿದ್ದರೂ ಚಿಂತೆಯಿಲ್ಲ. ಆಕೆಯು ಬಿಡಿಸಲ್ಪಟ್ಟು, ವಕೀಲನು ಶಿಕ್ಷಿಸಲ್ಪಡಲೇಬೇಕು. ನ್ಯಾಯವಾದುದನ್ನು ಸಾಧಿಸಲವಕಾಶವಿಲ್ಲದ ನ್ಯಾಯಸ್ಥಾನದಿಂದೇನು ಪ್ರಯೋಜನ. ಯಾವುದು ನ್ಯಾಯವಾದುದೆಂಬುದನ್ನು ನಾನು ಸಿದ್ಧಪಡಿಸುವೆನು. ಅವನ್ನೂ ಒಪ್ಪದೆ ಇದ್ದಲ್ಲಿ ನನ್ನ ಸಾಮರ್ಥ್ಯದಿಂದಲೇ ಬಿಡಿಸುವೆನು. ಅಧಿಕಾರಿಗಳು ಅದನ್ನು ನೋಡುತ್ತಿರಲಿ. ಇದೇನು ಅಲ್ಪಕಾರ. ನನ್ನೆದುರಿನಲ್ಲಿ ಅನ್ಯಾಯವು ನಡೆಯುತ್ತಿರುವುದನ್ನು ನೋಡಿ ಸುಮ್ಮನಿರಲಾರೆನು ಪ್ರಾಣವನ್ನಾದರೂ ಕೊಟ್ಟು ಅದನ್ನು ಪ್ರತಿಬಂಧಿಸುವೆನೇ ಹೊರತು "ಆದದ್ದು ಆಗಲಿ ನನಗೇನು!" ಎಂದು ಸುಮ್ಮನೆ ಕಣ್ಣುಮುಚ್ಚಿ ಕುಳಿತಿರಲಾರೆನು. ನಿಮಗೆ ಮಾತ್ರ ಇದು ಹೊಸದಾಗಿ ತೋರಿದರೂ ನನಗಿದು ನವೀನವಲ್ಲ ಇಂತಹ ಎಷ್ಟೋ ಕಾರ್ಯಗಳು ಸುಸಂಗತವಾಗಿ ನಡೆದು ಹೋಗಿವೆ. ನೀವೂ ಚನ್ನಾಗಿ ಯತ್ನಿಸಿರಿ ಮುಂದೆ ದೇವರಿರುವನು.

ಹೀಗೆ ಮೋಹನನಿಂದ ಉತ್ತೇಜನಗೊಳಿಸಲ್ಪಟ್ಟ ಜೈಲ್ ಮುಖ್ಯಾಧಿಕಾರಿಯು ಮೇಲಿನ ಕೋರ್ಟಿನಲ್ಲಿ ಅಪೀಲನ್ನು ಮಾಡಿ ವಾದಿಸಿದನು. ಮೋಹನನಿಚ್ಛೆಯಂತೆ ಕೋರ್ಟಿನಲ್ಲಿ ತೀರ್ಮಾನವಾಗಿ ವಾಮನರಾಯರು ಜೈಲಿನ ಶಿಕ್ಷೆಗೆ ಒಳಗಾದರು. ಅಪಾದಿತರು ಬಿಡಲ್ಪಟ್ಟು ಮನೆಗೆ ಸೇರಿದರು.



## ಷಷ್ಠ ಗುಚ್ಛ.

ಸುವರ್ಣನಗರದ ತನ್ನ ಮನೆಯಲ್ಲಿ ರಾಕಾಚಂದ್ರನು ಸುಖಾನಂದ ನೊಡನೆ ಈ ದಿನ ಯಮುನಾಪುರಿಗೆ ಹೋಗುವ ವಿಚಾರದಲ್ಲಿ ಚರ್ಚಿಸುತ್ತ ಲಿದ್ದನು. ಕೊನೆಗೆ ಯಮುನಾಪುರಿಯಲ್ಲಿರುವ ಸುಖಾನಂದನ ಭಾವನ ಮನೆ ಯಲ್ಲಿ ಗುಟ್ಟಾಗಿ ವಾಸಮಾಡಿ ಮೋಹನನನ್ನು ಹಿಡಿಯಬೇಕೆಂದು ನಿಶ್ಚೈಸಿ ಆ ದಿನವೇ ಇಬ್ಬರೂ ಗುಟ್ಟಾಗಿ ಯಮುನಾಪುರಿಯನ್ನು ಸೇರಿದರು. ರಾಕಾ ಚಂದ್ರನು ಯಮುನಾಪುರಿಗೆ ಗುಪ್ತವಾಗಿ ಬಂದಿರುವುದನ್ನು ಮೋಹನನು ತಿಳಿದಿರಲಿಲ್ಲ. ಎಲ್ಲಿ ಕಳವನ್ನೊ, ಅಥವಾ ದರೋಡೆಯನ್ನೊ ಮಾಡುತ್ತಿ ದ್ದರೂ ಮೋಹನನು ಮೊದಲು ಆ ಸ್ಥಳಕ್ಕೆ ತಿಳಿಸದೆ ಇರುತ್ತಿರಲಿಲ್ಲವೆಂದು ರಾಕಾಚಂದ್ರನು ತಿಳಿದಿದ್ದನು. ಎಂದಿನಂತೆ ಮೋಹನನು ಸುರೇಂದ್ರನಾಥ ನೆಂಬೊಬ್ಬನ ಮೇಲೆ ಕಣ್ಣಿಟ್ಟಿದ್ದನು. ಸುರೇಂದ್ರನಾಥನು ದೊಡ್ಡ ಶ್ರೀಮಂತ ನಿದ್ದನು ಒಂದು ದೊಡ್ಡ ಒಸ್ತ್ರದ ಕಾರ್ಖಾನೆಯು ಅವನ ವಶವಿತ್ತು. ಆ ಕಾರ್ಖಾನೆಯಲ್ಲಿ ಸಾವಿರಾರು ಜನರು ಕೆಲಸಗಾರರಿದ್ದರು. ಆ ಕೂಲಿಯಾಳು ಗಳಲ್ಲಿ ಸುರೇಂದ್ರನು ತೋರಿಸುತ್ತಿದ್ದ ಕ್ರೌರ್ಯಕ್ಕಾಗಿ ಮೋಹನನು ಮರುಗು ತ್ತಿದ್ದನು. ಎಲ್ಲಾ ಕೆಲಸಗಾರರೂ ಕಾರ್ಖಾನೆಯ ಹತ್ತಿರವೇ ಇರುವ ಸಣ್ಣ ಸಣ್ಣ ಗುಡಿಸಲುಗಳಲ್ಲಿ ಕುಟುಂಬದೊಂದಿಗೆ ವಾಸಿಸುತ್ತಿದ್ದರು. ಕೆಲಸಗಾರರು ಹೊಟ್ಟೆ ಪಾಡಿಗಾಗಿ ಸುರೇಂದ್ರನಾಥನು ಕೊಡುತ್ತಿದ್ದ ಕಷ್ಟಗಳನ್ನು ಸಹಿಸು ತ್ತಿದ್ದರು; ಆದರೆ ಸುರೇಂದ್ರನಾಥನು ತಮ್ಮ ಹೆಂಗಸರ ಮೇಲೆ ನಡೆಸುತ್ತಿ ರುವ ನೀಚತನಕ್ಕೆ ಕಿಡಿಕಿಡಿಯಾಗುತ್ತಿದ್ದರು ಅದಕ್ಕೆ ಪ್ರತಿಬಂಧವನ್ನೋ, ಅಥವಾ ಪ್ರತಿಕಾರವನ್ನೊ ಮಾಡಲು ಮಾತ್ರ ಹಿಂಜರಿಯುತ್ತಿದ್ದರು. ಹೀಗಿ ರಲು, ಹೊಸದಾಗಿ ಒಬ್ಬನು ಹೆಂಡತಿಯೊಂದಿಗೆ ಬಂದು ಕೆಲಸಕ್ಕೆ ಸೇರಿದನು. ಅವನ ಹೆಂಡತಿಯು ಬೇರೆ ಕೆಲಸಗಾರರ ಹೆಂಗಸರಿಗಿಂತ ಸ್ವಲ್ಪ ನೋಡಲು ಚೆನ್ನಾಗಿದ್ದಳು. ಆ ರೂಪವು ದಂಪತಿಗಳಿಗೆ ತೊಂದರೆಯನ್ನುಂಟು ಮಾಡು ವಂತಾಯಿತು. ಸುರೇಂದ್ರನಾಥನ ಕಾಮುಕ ದೃಷ್ಟಿಯು ಅವಳ ಮೇಲೆ ಪ್ರಸರಿಸಿದೊಡನೆ ಸುರೇಂದ್ರನಾಥನು ಆಕೆಯನ್ನು ತನ್ನ ವಶಪಡಿಸಿಕೊಳ್ಳಲು,

ಅವಳೊಬ್ಬಳೇ ಗುಡಿಸಲಿನಲ್ಲಿದ್ದಾಗ ಸೇವಕನೊಬ್ಬನನ್ನು ಕಳುಹಿಸಿದನು. ಅವಳ ಹೆಸರು ರಾಗಿಣಿ.

ರಾಗಿಣಿಯು ಸುರೇಂದ್ರನಾಥನ ಸೇವಕನ ವಚನವನ್ನು ಕೇಳಿದೊಡನೆ ಭಯಪಟ್ಟು ಯಾವ ಉತ್ತರವನ್ನೂ ಕೊಡಲಿಲ್ಲ. ಸೇವಕನು ನಿರಾಶೆಯಿಂದ ಹಿಂದಿರುಗಿದನು. ರಾಗಿಣಿಯು ಗಂಡನು ಗುಡಿಸಲಿಗೆ ಬಂದೊಡನೆ ಸೇವಕನು ಹೇಳಿ ಹೋದ ವಿಷಯವನ್ನು ಹೇಳಿದಳು. ಗಂಡನು ಮುಂದೇನು ಮಾಡುವುದೆಂದು ತಿಳಿಯಲು, ತನ್ನ ಆಪ್ತರಂತಿದ್ದ ಕೆಲವು ಕೆಲಸಗಾರರನ್ನು ವಿಚಾರಿಸಿದನು. ಅವರಿಂದ ಸದುತ್ತರವು ದೊರೆಯಲಿಲ್ಲ. ಅವರು ಹಿಂದಿನ ಕೆಲವು ಅಕೃತ್ಯಗಳನ್ನು ವಿವರಿಸಿ, "ಹೊಟ್ಟೆಗೆ ಬೇಕಾದರೆ ಎಲ್ಲವನ್ನೂ ಸಹಿಸುವ ಸಾಮರ್ಥ್ಯವನ್ನು ಸಂಪಾದಿಸಬೇಕು" ಎಂದು ನುಡಿದರು. ರಾಗಿಣಿಯ ಗಂಡನಿಗೆ ಇದು ಸರಿದೋರಲಿಲ್ಲ. ತಕ್ಕ ಪ್ರತೀಕಾರವನ್ನು ಮಾಡಲು ಪ್ರತಿಜ್ಞೆಯನ್ನು ಮಾಡಿದನು. ಸುರೇಂದ್ರನಾಥನು ರಾಗಿಣಿಯ, ಮತ್ತು ಅವಳ ಗಂಡನ ದೃಢಮನೋನಿಶ್ಚಯವನ್ನು ತಿಳಿದು "ಇನ್ನು ಬಲಾತ್ಕಾರವಲ್ಲದೆ ಬೇರೆ ಉಪಾಯವಿಲ್ಲ"ವೆಂದು ನಿಶ್ಚಯಿಸಿ, ಅದೇ ದಿನ ರಾತ್ರಿ ಹತ್ತು ಜನ ಸೇವಕರನ್ನು ಕಳುಹಿಸಿ ಗಂಡ ಹೆಂಡಿರಿಬ್ಬನ್ನೂ ಹಿಡತರಿಸಿ, ನೆಲಮನೆಯ ಒಂದು ಕೋಣೆಯಲ್ಲಿ ರಾಗಿಣಿಯನ್ನೂ, ಇನ್ನೊಂದು ಕೋಣೆಯಲ್ಲಿ ಆಕೆಯ ಗಂಡನನ್ನೂ ಸೆರೆಯಲ್ಲಿಟ್ಟನು. ಅನಾಥರ ರಕ್ಷಣೆಯಲ್ಲಿಯೇ ನಿರತನಾದ ಮೋಹನನಿಗೆ ಮೇಲಿನ ವಿಚಾರವು ಮರುದಿನವೇ ತಿಳಿಯಿತು. ಸುರೇಂದ್ರನನ್ನು ಎಚ್ಚರಿಸಲು ಕಾಗದವನ್ನು ಬರೆದನು. "ಹಿಂದಿನ ಅನ್ಯಾಯಗಳನ್ನೂ, ಈಗ ನಡೆಯುತ್ತಿರುವ ಅನ್ಯಾಯವನ್ನೂ ಅರಿತೆನು. ಕೂಡಲೆ ಸನ್ಮಾರ್ಗದಿಂದಿರು. ಇಲ್ಲವೇ ಶಿಕ್ಷೆಯನ್ನನುಭವಿಸು." ಸುರೇಂದ್ರನಾಥನು ಮೋಹನನನ್ನು ಧಿಕ್ಕರಿಸಿ ಪೋಲೀಸರ ಸಹಾಯವನ್ನು ಕೋರಿದನು. ಪೋಲೀಸರ ಸಹಾಯವನ್ನಪೇಕ್ಷಿಸಿದುದನ್ನು ತಿಳಿದು, ರಾಕಾಚಂದ್ರನು ಮುಗುಳ್ನಕ್ಕು ಕೂಡಲೆ "ಸುರೇಂದನಾಥನಿಗೆ ಈಗ ಯಾವ ಕಷ್ಟವು ಒದಗಿದೆ! ಪೋಲೀಸರ ಸಹಾಯವನ್ನು ಕೋರುವ ಆವಶ್ಯಕತೆ ಏನು! ಸುರೇಂದ್ರನಾಥನಿಗೆ ತಾವು ಸಹಾಯವನ್ನು ಮಾಡಬಹುದೇ! ಬೇಡವೇ?" ಇತ್ಯಾದಿ ವಿಚಾರ

ವನ್ನು ತಿಳಿಯಲು ಸುರೇಂದ್ರನಾಥನ ಮನೆಗೆ ಹೋಗಿ ಗುಪ್ತವಾಗಿ ಪರೀಕ್ಷಿಸಿದನು. ಪರೀಕ್ಷೆ ಮಾಡಿದುದಕ್ಕೆ ಫಲವಾಗಿ "ಅವನ ಅಕೃತ್ಯಕ್ಕೆ ತಾವು ಸಹಾಯವನ್ನು ಮಾಡಬಾರದೆ"ಂಬುದಾಗಿ ತಿಳಿದರು; ಆದರೂ ಅಲ್ಲಿಯೇ ಗುಪ್ತವಾಗಿ ಕಾದಿದ್ದರೆ ಮೋಹನನನ್ನು ಹಿಡಿಯಲು ಅನುಕೂಲವಾಗಬಹುದೆಂದು ಯೋಚಿಸಿ, ಅಲ್ಲಿ ಮೋಹನನನ್ನು ಹಿಡಿಯಲು ಹೊಂಚು ಹಾಕುತ್ತಿದ್ದರು. ಸುರೇಂದ್ರನಾಥನ ಕಾರ್ಖಾನೆಯ ಹತ್ತಿರವೇ ಮನೆಯೂ ಇದ್ದು, ಮನೆಯಲ್ಲಿ ಸ್ವಲ್ಪ ಗಲಭೆ ನಡೆದರೂ ಕಾರ್ಖಾನೆಯ ಜನರೆಲ್ಲರೂ ಓಡಿ ಬರಬಹುದಾಗಿತ್ತು. ನಮ್ಮ ಹಿಂದಿನ ಪರಿಚಿತರಾದ ಇನ್‌ಸ್ಪೆಕ್ಟರ್ ರಘುರಾಮನ್ ರವರು ಪೋಲೀಸರೊಂದಿಗೆ ಸುರೇಂದ್ರನಾಥನ ಭವನವನ್ನು ಕಾಯುತ್ತಿದ್ದರು. ಮೋಹನನ ಸ್ಥಿತಿಯು ಎಲ್ಲರಿಗೂ ತಿಳಿದುದರಿಂದ ಕ್ಷಣಕಾಲವೂ ಪೋಲೀಸರು ಸೋಮಾರಿಗಳಾಗಿ ನಿಂತಿರುತ್ತಿರಲಿಲ್ಲ

ಇತ್ತ ಮೋಹನನು ಸುರೇಂದ್ರನಾಥನಿಗೆ ಕಾಗದವನ್ನು ಬರೆದ ಮೂರನೆ ದಿನದಲ್ಲಿ ಬೆಳಿಗ್ಗೆ ಏಳು ಗಂಟೆಯ ಹೊತ್ತಿನಲ್ಲಿ ಹೂಮಾರುವವನಂತೆ ವೇಷವನ್ನು ಮಾಡಿಕೊಂಡು, ಬುಟ್ಟಿಯೊಂದರಲ್ಲಿ ಕೆಲವು ಹೂವಿನ ಸರಗಳನ್ನು ಇಟ್ಟು, ಸುರೇಂದ್ರನಾಥನ ಮನೆಗೆ ಹೋದನು. ಗೇಟಿನಲ್ಲಿ ರಾತ್ರಿಕಾಲದಲ್ಲಿ ಮಾತ್ರ ಪೋಲೀಸರು ಕಾಯುತ್ತಿದ್ದರು. ಹಗಲಿನಲ್ಲಿ ಮುದುಕನೊಬ್ಬನು ಕುಳಿತಿರುತ್ತಿದ್ದನು. ಒಳಗೆ ಹೋಗಲು ಮೋಹನನಿಗೆ ಪ್ರತಿಬಂಧವುಂಟಾಗಲಿಲ್ಲ. ಸುರೇಂದ್ರನಾಥನ ಪುತ್ರಿಯಾದ ಕೋಮಲೆಯು ಮೋಹನನನ್ನು ನೋಡಿ, ಹೂವಿನ ಸರವನ್ನು ಕೊಂಡುಕೊಳ್ಳುವುದಕ್ಕಾಗಿ ಮೋಹನನನ್ನು ಸಮೀಪದಲ್ಲಿದ್ದ ತನ್ನ ಕೋಣೆಗೆ ಕರೆದಳು. ಮೋಹನನು ಕೋಮಲೆಯ ಇಷ್ಟದಂತೆ ಕೋಣೆಯ ಬಾಗಿಲಿಗೆ ಬಂದು ಬುಟ್ಟಿಯಲ್ಲಿದ್ದ ಹೂವಿನ ಸರಗಳನ್ನು ತೋರಿಸಲಾರಂಭಿಸಿದನು. ಅಲ್ಲಿಯೇ ಆಕೆಯ ತಾಯಿಯೂ ನಿಂತಿದ್ದಳು. "ಆ ಕೋಣೆಯು ಕೋಮಲೆಯದಾಗಿರಬಹುದು" ಎಂದು ಮೋಹನನು ಊಹಿಸಿ ತನಗೆ ಬೇಕಾದ ವಿಷಯವನ್ನು ಅಲ್ಲಿಂದ ಸಂಗ್ರಹಿಸಿ, ಬೇಕಾದ ಹೂವಿನ ಸರಗಳನ್ನು ಕೊಟ್ಟು, ಬೆಲೆಯನ್ನು ತೆಗೆದುಕೊಂಡು ಹಿಂದಿರುಗಿದನು. ಅಷ್ಟು ಹೊತ್ತಿಗೆ ಸುರೇಂದ್ರನಾಥನ ಕೆಲಸಗಾರರಿಂದ ಕೆಲವು

ವಿಷಯಗಳನ್ನು ತಿಳಿಯಲು, ಕೂಲಿಗಾರನ ವೇಷದಿಂದ ಹೋಗಿ ಪ್ರಿಯನಾಥನು ಹಿಂದಿರುಗಿ ಬಂದಿದ್ದನು. ಪ್ರಿಯನಾಥನು ಹೇಳಿದನು, "ಸುರೇಂದ್ರನಾಥನ ದೌರ್ಜನ್ಯವು ಅವನ ಪುತ್ರಿಗೆ ಸಹಿಸುತ್ತಿರಲಿಲ್ಲವೆಂದು ನಾನು ಕೇಳಿದೆನು. ಅವಳಿಂದ ನಮಗೆ ಸಹಾಯವು ಒದಗಲಾರದೇನು?

ಮೋಹನ—ಹೌದು. ನನ್ನ ಮನಸ್ಸಿಗೂ ಹಾಗೇ ತೋರುತ್ತಿದೆ. ಅದಕ್ಕಾಗಿ ನಾನಾಕೆಯನ್ನು ಎಷ್ಟೋಸಾರೆ ನೋಡಿದ್ದರೂ ತಿರುಗಿ ಈಗ ನೋಡಲು ಹೋಗಿದ್ದೆನು ಅವಳನ್ನು ನೋಡಿದೊಡನೆ "ನಮಗೆ ಸಹಾಯವನ್ನು ಮಾಡಲು ಅಂಗೀಕರಿಸದೆ ಇರಲಿಕ್ಕಿಲ್ಲ" ಎಂದು ನನ್ನ ಮನಸ್ಸಿಗೆ ಹೊಳೆಯಿತು. ನನಗಾಕೆಯು ಆಪ್ತಳಂತೆ ಆ ಕಾಲದಲ್ಲಿ ತೋರಿದಳು. ಆಕೆಯಿಂದ ಯಾವುದಾದರೂ ಸಹಾಯವು ನಮಗೆ ದೊರೆತರೆ ಕೆಲಸವೆಲ್ಲವೂ ಅನುಕೂಲವಾಗಿ ನಡೆದು ಹೋಗುವುದು. ನಾಳೆ ನಾನೇ ಇನ್ನೊಂದು ಬಾರಿ ಅಲ್ಲಿಗೆ ಹೋಗಿ, ಆಕೆಯ ಹೃದಯವನ್ನರಿತು ಮುಂದಿನ ಕಾರ್ಯಕ್ಕೆ ಯತ್ನಿಸುವೆನು.

ಮದನ—ನೀನೇ ಮುಂದುವರಿಯುವುದು ಹಿತಕರವಾಗಿ ತೋರುವುದಿಲ್ಲ. ಪ್ರಮಾದವಶಾತ್ ನಿನಗೆ ಏನಾದರೂ ತೊಂದರೆಯು ಸಂಭವಿಸಿದರೆ ಅನಂತರ ನಮ್ಮನ್ನು ಕೇಳುವರಾರು? ಉಪಾಯವನ್ನು ಸೂಚಿಸಿದರೆ ನಾನು ಅದರಂತೆ ನಡಸಿಕೊಂಡು ಪ್ರಯತ್ನಿಸುವೆನು.

ಪ್ರಿಯನಾಥ—ಮಿತ್ರಾ, ಇದು ನಿಜವಾದದು. ಈ ಕಾಲದಲ್ಲಿ ಪ್ರತಿ ಒಬ್ಬರೂ ಜಾಗರೂಕತೆಯಿಂದ ಇರುತ್ತಿರುವರು ಸ್ವಲ್ಪ ಸಂಶಯವು ಬಂದರೂ ಪೋಲೀಸರು ಸೆರೆ ಹಿಡಿಯದೆ ಬಿಡಲಿಕ್ಕಿಲ್ಲ.

ಮೋಹನ—ಹೌದು. ಮದನಾ, ನಾನು ಯಾವ ವೇಷದಿಂದ ಅಲ್ಲಿಗೆ ಹೋಗಿದ್ದೆನೋ ಆ ವೇಷದಿಂದಲೇ ನೀನು ನಾಳೆ ಪ್ರಾತಃಕಾಲದಲ್ಲಿ ಅಲ್ಲಿಗೆ ಹೋಗು. ಗೇಟಿನಲ್ಲಿ, ಅಥವಾ ಬೇರೆ ಕಡೆಯಲ್ಲಿ ಯಾರಾದರೂ ತಡೆಗಟ್ಟಿದರೆ "ನಾನು ನಿನ್ನೆ ಬಂದ ಹೂ ಮಾರುವವನಲ್ಲವೇನು? ನಿನ್ನೆ ಹೂ ತಂದಂತೆ ಈ ದಿನವೂ ತರಲು ಹೇಳಿದ್ದರಿಂದ ಬಂದೆನು" ಎಂದು ಹೇಳು. ಗೇಟಿನ ಎದುರಿನಲ್ಲಿಯೇ ಮನೆ ಇರುವದು ಗೊತ್ತಿರುವದಷ್ಟೆ? ಅಲ್ಲಿಂದ ದಕ್ಷಿಣ ಪಾರ್ಶ್ವದಲ್ಲಿ ಸ್ವಲ್ಪ ಮುಂದೆ ಹೋದರೆ ಒಂದು ಸಂಪಿಗೆ ಮರವು

ಸಿಕ್ಕುವುದು. ಅದರ ಹತ್ತಿರವಿರುವ ಕೋಣೆಯಲ್ಲಿಯೇ ಸುರೇಂದ್ರನಾಥನ ಪುತ್ರಿ ಕೋಮಲೆಯು ಇರುವಳು, ಬೆಳಗಿನ ಹೊತ್ತಿನಲ್ಲಿ ಮಾತ್ರ ಆಕೆಯು ಆ ಕೋಣೆಯಲ್ಲಿ ಇರುತ್ತಿರುವಂತೆ ತೋರುತ್ತದೆ. ಅಲ್ಲಿಗೆ ಹೋಗಿ ಒಂದು ಕಾಗದವನ್ನು ಕೊಡಬೇಕು. ಕಾಗದನ್ನು ಹೋಗುವಾಗ ನಿನ್ನ ಹತ್ತಿರ ಕೊಡುವೆನು. ಆಕೆಯು ಆ ಕಾಗದವನ್ನು ನೋಡಿ ಏನನ್ನು ಹೇಳುವಳೆಂದು ಪ್ರತೀಕ್ಷಿಸು. ಯಾರಾದರೂ ನಿನ್ನನ್ನು ಹಿಡಿಯದಂತೆ ಜಾಗರೂಕನಾಗಿರು. ಪ್ರಿಯನಾಥನು ಅಲ್ಲಿಯೇ ಸಮೀಪದಲ್ಲಿಯೇ ಗುಪ್ತನಾಗಿ ಇರುವನು.

‡ ‡ ‡ ‡ ‡

ಮೋಹನನನ್ನು ಹಿಡಿಯಲು ಯತ್ನಿಸುತ್ತಿದ್ದ ರಾಕಾಚಂದ್ರನು ಸುಖಾನಂದನೊಡನೆ ಗುಪ್ತವಾಗಿ ಸುರೇಂದ್ರನಾಥನ ಭವನದ ಹತ್ತಿರ ಇದ್ದು, ಬಂದು ಹೋಗುವ ಜನರನ್ನು ಪರೀಕ್ಷಿಸುತ್ತಿದ್ದನು. ಪ್ರಾತಃಕಾಲ ಏಳು ಗಂಟೆಯ ಸಮಯದಲ್ಲಿ ಹೂಮಾರುವವನೊಬ್ಬನು ಗೇಟಿನ ಒಳಗೆ ಪ್ರವೇಶಿಸುತ್ತಿದ್ದುದನ್ನು ನೋಡಿದರು. ಸಂದೇಹದಿಂದ ಮಿತ್ರರಿಬ್ಬರು ಪರಸ್ಪರವಾಗಿ ಮುಖವನ್ನು ನೋಡಿಕೊಂಡನು. ಹಿಂದಿನ ದಿನವೂ ಹೂಮಾರುವವನೊಬ್ಬನನ್ನು ನೋಡಿದ್ದರು. ಹೂಮಾರುವವನು ನೆಟ್ಟಗೆ ಕೋಮಲೆಯು ಇರುವ ಕೋಣೆಯ ಕಡೆಗೆ ಹೋದನು. ಆ ಕಾಲದಲ್ಲಿ ಕೋಮಲೆಯು ಪತ್ರಿಕೆಯೊಂದನ್ನೋದುತ್ತಾ ಕುಳಿತಿದ್ದಳು. ಹೂಮಾರುವವನು ಒಳಗೆ ಹೊಕ್ಕು ಕೋಮಲೆಯ ಹತ್ತಿರದ ಮೇಜಿನ ಮೇಲೆ ಒಂದು ಲಕೋಟೆಯನ್ನು ಇಟ್ಟು, ಮೆಲ್ಲಗೆ ಹಿಂದಕ್ಕೆ ಸರಿದನು. ಕೋಮಲೆಯು ಹೂಮಾರುವವನನ್ನೂ, ಕಾಗದವನ್ನೂ ನೋಡಿದಳು. ಒಡನೆ ಲಕೋಟೆಯನ್ನು ಹರಿದು ಕಾಗದವನ್ನು ಓದಿದಳು. "ಪ್ರಿಯ ಭಗಿನೀ ಸಮಾನಳೇ! ಈ ಹಿಂದೆಯೂ, ಈಗಲೂ ನಿನ್ನ ತಂದೆಯು ನಡೆಸಿದ ಅನ್ಯಾಯದ ವರ್ತನೆಗಳು ನಿನ್ನ ಮನಸ್ಸಿಗೂ ಅಹಿತವಾದವುಗಳೆಂದು ತಿಳಿದು ಈ ಕಾಗದವನ್ನು ಬರೆಯುತ್ತಿರುವೆನು. ನಿನ್ನ ತಂದೆಯು ನ್ಯಾಯ ಮಾರ್ಗದಲ್ಲಿ ವರ್ತಿಸುವಂತೆ ಯತ್ನಿಸುತ್ತಿರುವ ನನಗೆ ಸಹಾಯವನ್ನು ಮಾಡಲಿಚ್ಛಿಸುವಿಯಾ? ಕೂಡಲೆ ತಿಳಿಸು.

ಇತಿ ಮೋಹನ"

ಕೋಮಲೆಯು ಹೂಮಾರುವವನನ್ನು ಕರೆದು 'ನೀನು ಯಾರು?' ಎಂದು ಕೇಳಿದಳು.

ಹೂ ಮಾರುವವ—ಅದನ್ನೀಗ ತಿಳಿಸುವಂತಿಲ್ಲ ನನಗೀಗ ಕಾಗದಕ್ಕೆ ಉತ್ತರವು ಸಿಗುವುದೇ?

ಕೋಮಲೆ—ಏನನ್ನು ಹೇಳಲಿ?

ಹೂ ಮಾರುವವ—ಸಹಾಯ ಮಾಡುವ ಇಚ್ಛೆಯಿದ್ದರೆ ಸಹಾಯದ ರೀತಿಯನ್ನು ಬರೆದು ಕೊಡಬಹುದು. ಇಲ್ಲವಾದರೆ 'ಇಲ್ಲ'ವೆನ್ನಬಹುದು.

ಕೋಮಲೆ—ನನ್ನ ಇಚ್ಛೆಯೊಂದನ್ನು ನಡೆಸಿಕೊಡುವುದಾದರೆ ನನ್ನ ಸಹಾಯವು ಸಿಗಬಹುದು.

ಹೂ ಮಾರುವವ—ಆ ಇಚ್ಛೆಯನ್ನು ನನ್ನ ಹತ್ತಿರ ತಿಳಿಸುವಂತಿದ್ದರೆ ತಿಳಿಸಬಹುದು.

ಕೋಮಲೆ—ನಿನ್ನ ಪರಿಚಯವಿಲ್ಲದೆ ಹೇಗೆ ಹೇಳಲಿ.

ಹೂ ಮಾರುವವ—ನಾನು ಮೋಹನನ ಮಿತ್ರರಲ್ಲೊಬ್ಬನು.

ಕೋಮಲೆ—ನೀನು ಮೋಹನನಲ್ಲವೇನು? ಹಾಗಾದರೆ ನಿನ್ನ ಹತ್ತಿರ ತಿಳಿಸಲು ಸಾಧ್ಯವಿಲ್ಲ.

ಹೂ ಮಾರುವವ—ನನ್ನ ಹತ್ತಿರ ಹೇಳಲು ಸಮ್ಮತಿಯಿಲ್ಲವಾದರೆ ಕಾಗದದಲ್ಲಿ ಆ ವಿಷಯವನ್ನೂ, ನಿನ್ನ ಸಹಾಯವನ್ನೂ ಬರೆದು ಕೊಡಲು ಸಾಧ್ಯವಿಲ್ಲವೇನು? ನಾನು ಆ ಕಾಗದವನ್ನು ಮೋಹನನಲ್ಲದೆ ಇನ್ನಾರಿಗೂ ತೋರಿಸುವುದಿಲ್ಲ. ಹಾಗೆ ಬೇರೆ ಯಾರಾದರೂ ನೋಡುವ ಸಂದರ್ಭವು ಒದಗಿದರೆ ಕಾಗದವನ್ನು ಕೂಡಲೆ ನುಂಗಿ ಬಿಡುವೆನು.

ಕೋಮಲೆ—ಹಾಗಿದ್ದರೆ ಬರೆದು ಕೊಡುವೆನು. ಎಂದು ಹೇಳಿ ಕಾಗದವೊಂದನ್ನು ಬರೆದು ಹೇಳಿದಳು. "ನೀನು ಇಲ್ಲಿ ಪೋಲೀಸರಿಂದ ಹಿಡಿಯಲ್ಪಟ್ಟರೆ ಮೋಹನನಿಗೆ ಈ ವಿಷಯವು ಹೇಗೆ ತಿಳಿಯುವದು?

ಹೂ ಮಾರುವವ—"ರಜನೀಕಾಂತ, ಫ್ರೈಜರೀರೋಡ್ ಡೋರ್ ನಂ. ೩೦೦ ಯಮುನಾಪುರಿ" ಎಂಬ ವಿಳಾಸದ ಸ್ಥಳದಲ್ಲಿ ಮೋಹನನಿರುವನು. ಅಂತ ಸಂದರ್ಭದಲ್ಲಿ ನೀನು ಆ ವಿಳಾಸಕ್ಕೆ ನಿನ್ನ ಸಹಾಯವನ್ನು ತಿಳಿಸಬೇಕು

ಕೋಮಲೆ—ಈ ವಿಳಾಸವು ಬೇರೆಯಾವರಿಗೆ ತಿಳಿದರೆ ಆದರಿಂದ ಕೇಡಿಲ್ಲವೇನು?

ಹೂ ಮಾರುವವ—ಇಲ್ಲ. ಈ ವಿಳಾಸ ತಿಳಿದಿದ್ದರಿಂದ ನಮಗಾರಿಗೂ ಕೇಡಿಲ್ಲ

ಕೋಮಲೆಯು ಕಾಗದವನ್ನು ಬರೆದು ಕೊಟ್ಟು "ಹೋಗು" ಎಂದು ಹೇಳಿದಳು. ಕಾಗದವನ್ನು ತೆಗೆದುಕೊಂಡು ಹೂಮಾರುವವನು ಸಂತೋಷ ದಿಂದ ಅಲ್ಲಿಂದ ಹೊರಟನು.

ರಾಕಾಚಂದ್ರನು ಹಿಂದಿರುಗಿ ಬರುತ್ತಿಪ್ಪ ಹೂಮಾರುವವನ ವೇಷವನ್ನು ಧರಿಸಿದ ಮದನನನ್ನು ನೋಡಿದನು ಬಹು ಹೊತ್ತು ಒಳಗೇ ಇದ್ದುದರಿಂದ ಸಂಶಯವು ಹೆಚ್ಚಾಗಿ ರಾಕಾಚಂದ್ರನು ಹತ್ತಿರವಿದ್ದ ಪೋಲೀಸರಿಬ್ಬರ ಹತ್ತಿರ "ನಾನು ರಾಕಾಚಂದ್ರ, ಈ ಹೂಮಾರುವವನ್ನು ಹಿಡಿಯಿರಿ. ಇವನೇ ಕಳ್ಳ." ಎಂದು ಹೇಳಿ ಮದನನನ್ನು ಹಿಡಿಯಲು ಮುಂದಾದನು ಪೋಲೀಸರೂ ಮುಂದುವರಿದರು. ಒಡನೆ ಮದನನು ಕೋಮಲೆಯು ಕೊಟ್ಟ ಕಾಗದ ವನ್ನು ಬಾಯಲ್ಲಿ ಹಾಕಿಕೊಂಡು ರಾಕಾಚಂದ್ರನು ಸಮೀಪಿಸುವುದಕ್ಕಿಂತ ಮುಂಚೆಯೇ ಅಗಿದು ನುಂಗಿಬಿಟ್ಟನು. ಮದನನು "ರಾಕಾಚಂದ್ರನು ತನ್ನನ್ನು ಕಳ್ಳನೆಂದು ಗುರುತಿಸಿದ ಮೇಲೆ ಇನ್ನಾವ ಯುಕ್ತಿಯೂ ಪ್ರಕೃತ ಕಾಲದಲ್ಲಿ ಪ್ರಯೋಜನಕಾರಿಯಾಗಲಾರದು" ಎಂದು ಭಾವಿಸಿ ಯಾವ ಗದ್ದ ಲವೂ ಇಲ್ಲದೆ ಪೋಲೀಸರ ವಶನಾದನು. ರಾಕಾಚಂದ್ರನು ಬಂದು ಮೋ-ಹನನನ್ನು ಹಿಡಿದನೆಂಬದನ್ನು ಕೇಳಿ ಸುರೇಂದ್ರನಾಥನೂ, ಇನ್‌ಸ್ಪೆಕ್ಟರ್ ರಘುರಾಮನ್‌ರವರೂ ಓಡಿ ಬಂದರು. ಯಾರಾರು ಯಾವ ಯಾವ ವಿಧ ವಾಗಿ ಮದನನನ್ನು ಪೀಡಿಸಿದರೂ ಅವನಿಂದ ಯಾವ ಸಮಾಚಾರವನ್ನೂ ತಿಳಿಯಲಾಗಲಿಲ್ಲ. ಇಂತಹ ಕಾಲದಲ್ಲಿ ಸುರೇಂದ್ರನಾಥನ ಮನೆಯವ ರೆಲ್ಲರೂ ಅಲ್ಲಿ ಸೇರಿದ್ದರೂ ಸುರೇಂದ್ರನಾಥನ ಪುತ್ರಿಯು ಮಾತ್ರ ಅಲ್ಲಿಲ್ಲದೆ ಇರುವುದನ್ನು ನೋಡಿ ರಾಕಾಚಂದ್ರನು ಸಂಶಯಪಟ್ಟು ಥಟ್ಟನೆ ಕೋಮ ಲೆಯ ಕೋಣೆಯ ಕಡೆಗೆ ಹೋದನು. ಆ ಸಮಯದಲ್ಲಿ ಕೋಮಲೆಯು ಮದ ನನು ತಿಳಿಸಿದ ವಿಳಾಸವನ್ನು ಒಂದು ಲಕೋಟೆಯ ಮೇಲೆ ಬರೆಯುತ್ತಿದ್ದಳು.

ರಾಕಾಚಂದ್ರನು ಮೆಲ್ಲಗೆ ಹಿಂದಿನಿಂದ ಬಂದು ವಿಳಾಸವನ್ನು ನೋಡಿದನು. ಹಾಗೆಯೇ ಮೆಲ್ಲಗೆ ಹಿಂದಿರುಗಿ ಹೊರಗೆ ಹೋಗಿ ಸುರೇಂದ್ರನಾಥನ ಹತ್ತಿರ ಹೇಳಿದನು. ಕಳ್ಳರೆಲ್ಲರೂ ಒಂದೇ ಬಾರಿ ಸಿಕ್ಕುವಂತಿದೆ. ಈಗ ನೀವು ನಿಮ್ಮ ಮನೆಯಲ್ಲಿ ಯಾರನ್ನೂ ಏನನ್ನೂ ವಿಚಾರಿಸಬೇಡಿರಿ. ಎಲ್ಲವೂ ತಾನಾಗಿ ಹೊರಬೀಳುವುದು.

ಸುರೇಂದ್ರನಾಥ—ಈ ಸೆರೆ ಸಿಕ್ಕಿರುವವನ ವ್ಯವಸ್ಥೆ ಏನು?

ರಾಕಾಚಂದ್ರ—ಇನ್‌ಸ್ಪೆಕ್ಟರರ ಇಷ್ಟವಿದ್ದರೆ ಇಲ್ಲಿಯೇ ಬಲವಾಗಿ ಬಂಧನದಲ್ಲಿಟ್ಟು ಇವನ ಬಾಯಿ ಬಿಡಿಸಲು ಯತ್ನಿಸಬೇಕು.

ಇನ್‌ಸ್ಪೆಕ್ಟರ್—ಇದೇ ಯುಕ್ತವೆಂದು ನನಗೂ ತೋರುತ್ತಿದೆ.

ಸುರೇಂದ್ರ:--ನೀವು ಇಬ್ಬರು ಪ್ರಸಿದ್ಧ ಪತ್ತೇದಾರಿಗಳು ತಾವಾಗಿಯೇ ಬಂದು ನಮಗೆ ಸಹಾಯ ಮಾಡುತ್ತಿರುವದು ನಮ್ಮ ಭಾಗ್ಯೋದಯವೇ ಸರಿ.

ರಾಕಾಚಂದ್ರ—ಅದೇನೂ ವಿಶೇಷವಿಲ್ಲ ನನಗೀಗ ತ್ವರಿತವಾದ ಕಾರ್ಯವೊಂದಿದೆ. ಇನ್‌ಸ್ಪೆಕ್ಟರರೇ, ನೀವೀಗ ಜಾಗರೂಕರಾಗಿರಬೇಕು. ಸಿಕ್ಕಿ ಬಿದ್ದಿರುವ ಕಳ್ಳನಿಂದ ಕಳ್ಳರ ವಾಸಸ್ಥಳವನ್ನು ಹೊರಪಡಿಸಿದರೆ ತುಂಬಾ ಅನುಕೂಲವಿದೆ. ನಾನು ಬರುತ್ತೇನೆ, ಎಂದು ಹೇಳಿ ರಾಕಾಚಂದ್ರನು ಮಿತ್ರನೊಡನೆ ಬಿಡಾರದ ಕಡೆಗೆ ಹೊರಟು ಹೋದನು.

ಇತ್ತ ಕೋಮಲೆಯು ಹೊರಗಿನ ಯಾವ ಸಮಾಚಾರವನ್ನೂ ಅರಿಯದೆ ರಾಕಾಚಂದ್ರನು ಅಲ್ಲಿಗೆ ಬಂದು ಹೋದುದನ್ನೂ ತಿಳಿಯದೆ ಯಾವದೊ ಒಂದು ದೊಡ್ಡ ವಿಚಾರದಲ್ಲಿ ಮಗ್ನಳಾಗಿದ್ದಳು. ಆ ಸಮಯದಲ್ಲಿ ಆಕೆಯ ದಾಸಿಯಾದ ಸುಮತಿಯು ಅಲ್ಲಿಗೆ ಬಂದಳು. ಆಗಲೂ ತನ್ನ ಆಲೋಚನಾ ತರಂಗಗಳಲ್ಲಿಯೇ ಮುಳುಗಿ ಏಳುತ್ತಿದ್ದ ಕೋಮಲೆಯು ಸುಮತಿಯು ಬಂದುದನ್ನು ನೋಡಲಿಲ್ಲ. ಸುಮತಿಯು ಆಶ್ಚರ್ಯಾನ್ವಿತಳಾಗಿ "ಇದೇನೇ ಕೋಮಲೆ? ಇಷ್ಟು ಯೋಚನೆಯಲ್ಲಿರುವಿ. ಏನು ವಿಶೇಷ?" ಎಂದು ಕೇಳಿದಳು. ಕೋಮಲೆಯು ಸುಮತಿಯ ಮಾತಿನಿಂದ ತನ್ನ ಯೋಚನೆಯಿಂದ ಎಚ್ಚತ್ತು ಮುಖವನ್ನು ಎತ್ತಿ ನೋಡಿದಳು.

ಸುಮತಿ—ಏನು! ಬಹು ಯೋಚನೆಯನ್ನು ಮಾಡಿದಂತಿದೆ? ನನ

ಹತ್ತಿರ ಹೇಳುವುದಿಲ್ಲವೇ? ಕೋಮಲೆ? ಏನು ಯೋಚನೆ?

ಕೋಮಲೆ—ಅದನೆಲ್ಲಾ ಕೊನೆಗೆ ಹೇಳುವೆನು. ಈಗ ತಾನೇ ಒಬ್ಬ ಹೂ ಮಾರುವವನು ಬಂದಿದ್ದನು. ಅವನು ಗೇಟಿನಿಂದ ಹೊರಗೆ ಹೊರಟು ಹೋದನೇ? ನೀನು ನೋಡಿದೆಯಾ?

ಸುಮತಿ—ಈಗ ಹೊರಗೆ ಗಲಭೆಯಾಯಿತು. ಗುಪ್ತರಾಗಿ ಇಲ್ಲಿಗೆ ಬಂದು ಕಾದು ಕುಳಿತಿದ್ದ ಪ್ರಸಿದ್ಧ ಪತ್ತೇದಾರಿಗಳಾದ ರಾಕಾಚಂದ್ರ ಮತ್ತು ಸುಖಾನಂದರು ಆ ಹೂ ಮಾರುವವನ್ನು ಕಳ್ಳನೆಂದೂಹಿಸಿ ಸೆರೆ ಹಿಡಿದರು; ಆದರೆ ಅವನಿಂದ ಯಾವ ವಿಷಯುವನ್ನೂ ಹೊರಪಡಿಸಲಾಗಲಿಲ್ಲ. ಅವ ನನು ಇಲ್ಲಿಯೇ ಸೆರೆ ಇಟ್ಟಿರುವರು. ಈ ಮಧ್ಯದಲ್ಲಿ ರಾಕಾಚಂದ್ರನು ಯಾವ ನಿಮಿತ್ತದಿಂದಲೋ ಒಬ್ಬನೇ ಇತ್ತ ಕಡೆಗೆ ಬಂದು ಪುನಃ ಹಿಂದಿರುಗಿ "ಯಾರನ್ನೂ ಏನನ್ನೂ ಕೇಳಬೇಡಿರಿ ಸಮಯದಲ್ಲಿ ಎಲ್ಲವೂ ಹೊರಬೀಳು ವದು" ಎಂದು ನುಡಿದು ಒಡನೆ ಮಿತ್ರನೊಡನೆ ಹೊರಟು ಹೋದನು ಏನು ವಿಚಾರವೆಂಬದು ತಿಳಿಯಲ್ಲಿಲ್ಲ. ರಾಕಾಚಂದ್ರನು ನಿನ್ನ ಹತ್ತಿರ ಬಂದಿದ್ದನೆ?

ಕೋಮಲೆ—ಏನೋ ಗೊತ್ತಿಲ್ಲ. ಯಾವುದೋ ಆಲೋಚನೆಯಲ್ಲಿ ಮಗ್ನಳಾಗಿದ್ದೆನು. ಹೂ ಮಾರುವವನಿಂದ ಯಾವುದಾದರೂ ಕಾಗದವು ಪೋಲೀಸರಿಗೆ ಲಭಿಸಿತೇನು?

ಸುಮತಿ—ಇಲ್ಲ ಅವನು ಒಂದು ಕಾಗದವನ್ನು ಹಿಡಿಯುವದಕ್ಕಿಂತ ಪೂರ್ವದಲ್ಲಿಯೇ ನುಂಗಿ ಬಿಟ್ಟನಂತೆ.

ಕೋಮಲೆ --ಒಂದು ಅನುಕೂಲವಾಯಿತು. ಕಾಗದವು ಪೋಲೀ ಸರಿಗೆ ಸಿಕ್ಕದೆ ಇದ್ದುದರಿಂದ ನನ್ನ ಗುಟ್ಟು ಹೊರಪಡಲವಕಾಶವಾಗಲಿಲ್ಲ; ಆದರೆ ರಾಕಾಚಂದ್ರನು ನಾನು ವಿಳಾಸ ಬರೆಯುತ್ತಿದ್ದಾಗ ಬಂದಿರುವಂತೆ ತೋರುತ್ತದೆ. ಆಗಲಿ ಅದರಿಂದೇನೂ ಕೇಡಿಲ್ಲ. ಸುಮತಿ! ಉಳಿದ ವಿಚಾ ರವನ್ನು ನಿನಗೆ ಹಿಂದಿನಿಂದ ತಿಳಿಸುತ್ತೇನೆ. ನೀನಿದುವರೆಗೂ ನನ್ನನ್ನು ತಂಗಿಯಂತೆ ಲಾಲಿಸಿರುವಿ. ನಿನಗೆ ತಿಳಿಸದೆ ಒಂದು ಗುಪ್ತ ಕೆಲಸವನ್ನು ಮಾಡಿರುವೆನು. ಅದಕ್ಕಾಗಿ ನೀನು ನನ್ನನ್ನು ನಿಂದಿಸಬೇಡ. ತನಗೆ ಬೇಕಾದ ವಿಳಾಸವನ್ನು ತಿಳಿದುಕೊಂಡು ರಾಕಾಚಂದ್ರನು ತನ್ನ ಕೆಲಸವನ್ನು

ಸಾಧಿಸಲು ಹೋಗಿರುವನು. ನಾನು ಸ್ವಲ್ಪದರಲ್ಲಿ ಮೋಸ ಹೊಂದಿದೆನು. ಈಗ ಆ ವಿಳಾಸಕ್ಕೆ ಕಾಗದ ಬರೆಯುವಂತೆಯೂ ಇಲ್ಲ. ನಾನೀಗ ಕಾಗದ ವನ್ನು ಬರೆದರೆ ಅಲ್ಲಿನ ಪೋಸ್ಟ ಜವಾನನಿಂದ ರಾಕಾಚಂದ್ರನು ತನ್ನ ಪತ್ತೆ ದಾರಿ ಜವಾಬ್ದಾರಿಕೆಯಿಂದ ಕಾಗದವನ್ನು ತೆಗೆದುಕೊಳ್ಳಬಹುದು. ಆದ್ದ ರಿಂದ ಈಗ ಕಾಗದವನ್ನು ಕಳುಹಿಸುವದು ಕೇವಲ ಅನರ್ಥಕ್ಕೆ ಕಾರಣವಾಗು ವದು. ಸುಮತಿ! ನೀನೀಗ ಯತ್ನಿಸಿದರೆ ನನ್ನ ಬಯಕೆಯು ನೆರವೇರುವದು. ನೀನು ನನ್ನ ಪ್ರಾಣಾಪ್ತಳು. ಇದೊಂದು ಉಪಕಾರವನ್ನು ಮಾಡಲಾರೆಯಾ?

ಸುಮತಿ—ಕೋಮಲೆ, ಇದೇನು ಇಂತಹ ಮಾತನ್ನಾಡುತ್ತಿರುವಿ? ನನ್ನಲ್ಲಿ ಇಷ್ಟು ಶಂಕೆಯು ಯಾಕೆ ಬರುವದು? ನಿನಗಾಗಿ ಏನನ್ನು ಬೇಕಾ ದರೂ ಮಾಡಬಲ್ಲೆನು, ಹೇಳು. ಈಗ ನಾನೇನನ್ನು ಮಾಡಲಿ? ನನ್ನಲ್ಲಿ ಸಂದೇಹಪಡಬೇಡ.

ಕೋಮಲೆ--"ರಜನೀಕಾಂತ. ಫ್ರೆಜರೀರೋಡ್ ಡೋರ ನಂ. ೩೦೦" ಈ ವಿಳಾಸದ ಮನೆಗೆ ಹೋಗಬೇಕು. ಬಾಗಿಲಿನಲ್ಲಿ ನಿನಗೇನೂ ಪ್ರತಿಬಂಧ ವಾಗಲಾರದು. ಅಲ್ಲಿ ಒಂದು ಕಾಗದವನ್ನು ಕೊಡಬೇಕು. ಅದನ್ನೀಗ ಬರೆದು ಕೊಡುತ್ತೇನೆ ಎಂದು ಹೇಳಿ ಒಂದು ಕಾಗದವನ್ನು ಬರೆದಳು. "ನಿಮ್ಮ ಕಾಗದವು ತಲ್ಪಿತು. ನಿಮ್ಮ ಮಿತ್ರನು ರಾಕಾಚಂದ್ರನ ಬಲೆಗೆ ಸಿಕ್ಕಿ ಸೆರೆಯಲ್ಲಿಡಲ್ಪಟ್ಟಿರುವನು. "ನನ್ನ ಇಚ್ಛಿತವೊಂದನ್ನು ನೀವು ನೆರವೇರಿಸಿದರೆ ತಮ್ಮ ಕಾರ್ಯಕ್ಕೆ ಸಹಾಯಕಳಾಗುವೆನು" ಎಂದು ನಿಮ್ಮ ಹತ್ತಿರವೇ ತಿಳಿಸಿ, ಅದಕ್ಕೊಪ್ಪಿದರೆ ನನ್ನ ಸಹಾಯದ ರೀತಿಯನ್ನು ತಿಳಿಸುವೆನೆಂದು ಯೋಚಿಸಿ ದ್ದೆನು; ಆದರೆ ಈಗ ವಿಲಂಬದಿಂದ ನಿಮ್ಮ ಕಾರ್ಯವು ಕೆಡುವುದೆಂಬ ಭೀತಿ ಯಿಂದ ಸುಮ್ಮನಿರಬೇಕಾಗಿದೆ. ಈ ದಿನ ರಾತ್ರಿ ಹತ್ತು ಗಂಟೆಯ ಸಮಯ ದಲ್ಲಿ ನಮ್ಮ ಮನೆಯ ಪಶ್ಚಿಮ ದಿಕ್ಕಿನ ಗೋಡೆಯ ಹತ್ತಿರ ಬಂದು ನಿಲ್ಲ ಬೇಕು. ಕೈ ಕೈ ಹತ್ತುವ ಪ್ರಸಂಗವೂ ಬರಬಹುದಾದ್ದರಿಂದ ಸಶಸ್ತ್ರರಾಗಿ ತಕ್ಕಷ್ಟು ಸಹಾಯದೊಂದಿಗೆ ಬನ್ನಿ. ಪಶ್ಚಿಮದಿಕ್ಕಿನ ಬಾಗಿಲಿನಿಂದ ನೀವು ಒಳಗೆ ಬರುವಂತೆ ಮಾಡುವೆನು. ಉಳಿದ ವಿಷಯವನ್ನು ಅನಂತರ ತಿಳಿ ಸುವೆನು. ಇತಿ— ಕೋಮಲೆ."

ಕಾಗದವನ್ನು ಲಕೋಟೆಯಲ್ಲಿರಿಸಿ, ಸುಮತಿಯ ಕೈಯಲ್ಲಿಟ್ಟು, ಹೇಳಿದಳು. "ಈ ಕಾರ್ಯವು ಗುಪ್ತವಾಗಿ ನೆರವೇರಬೇಕು. ಗೋಪ್ಯವು ಹೊರಪಟ್ಟರೆ ನನ್ನ ಪ್ರಾಣವು ನಿಲ್ಲಲಾರದು.

ಸುಮತಿ – ಇಲ್ಲ. ಸ್ವಲ್ಪವೂ ಸಂಶಯ ಪಡಬೇಡ, ಎಂದು ನುಡಿದು ಹೊರಟು ಹೋದಳು.

† † †

ಇತ್ತ ರಾಕಾಚಂದ್ರನು ಸುಖಾನಂದನೊಡನೆ ತನ್ನ ಬಿಡಾರದ ಕಡೆಗೆ ಸಂಭಾಷಿಸುತ್ತಾ ಹೋಗುತ್ತಿದ್ದನು.

ಸುಖಾನಂದ ನೀನಲ್ಲಿ ಮಾತನಾಡುತ್ತಿರುವಾಗ ಮಧ್ಯದಲ್ಲಿ ಹೋಗಿದ್ದೆಯಷ್ಟೆ? ಎಲ್ಲಿಗೆ ಹೋಗಿದ್ದಿ?

ರಾಕಾಚಂದ್ರ—ಅಂತಹ ಗಲಭೆಯ ಸಮಯದಲ್ಲಿ ಸುರೇಂದ್ರನಾಥನ ಮನೆಯವರೆಲ್ಲರೂ ಅಲ್ಲಿ ಇದ್ದು ಸುರೇಂದ್ರನಾಥನ ಪುತ್ರಿಯು ಮಾತ್ರ ಅಲ್ಲಿಗೆ ಬರದೇ ಇರುವದನ್ನು ನೋಡಿ ಸಂಶಯ ಪಟ್ಟು ಆಕೆಯ ಕೋಣೆಯ ಕಡೆಗೆ ಹೋದೆನು. ಅಲ್ಲಿ "ರಜನೀಕಾಂತ, ಫ್ರೆಜರೀರೋಡ್, ಡೋರನಂ ೩೦೦" ಎಂದು ವಿಳಾಸವನ್ನು ಕೌರಿನ ಮೇಲ್ಗಡೆಯಲ್ಲಿ ಬರೆಯುತ್ತಿದ್ದುದನ್ನು ನೋಡಿ ಹಿಂದಿರುಗಿದೆನು. ಈಗ "ರಜನೀಕಾಂತನೆಂದರೆ ಯಾರು" ಎಂಬುದನ್ನು ತಿಳಿಯಬೇಕಾಗಿದೆ. "ಈ ವಿಳಾಸಕ್ಕೂ ಮೋಹನನಿಗೂ ಏನಾದರೂ ಸಂಬಂಧವಿರುವುದೇ" ಎಂಬುದನ್ನೂ ತಿಳಿಯಬೇಕು.

ಸುಖಾನಂದ—ಹೆಸರನ್ನು ಮಾತ್ರ ಬದಲಾಯಿಸಿರಬಹುದು. ಅಂತಹ ಗಲಭೆಯಲ್ಲಿಯೂ ಯೋಚನೆಯಿಲ್ಲದೆ ಸುರೇಂದ್ರನಾಥನ ಪುತ್ರಿಯು ಕುಳಿತಿರಬೇಕಾದರೆ ಏನೋ ಒಂದು ಗೋಪ್ಯವಿರಲೇಬೇಕು. "ಈಗ ಸೆರೆ ಸಿಕ್ಕಿರುವವನು ಮೋಹನನ ಮಿತ್ರರಲ್ಲೊಬ್ಬನು" ಎಂಬುದರಲ್ಲಿ ಸಂಶಯವಿಲ್ಲ. ಆಕೆಗೂ, ಆತನಿಗೂ ಸಂಭಾಷಣೆಯು ನಡೆದಿರಬೇಕು. ಆಕೆಯು ಕಾಗದವನ್ನು ಬರೆದು ಕೊಟ್ಟಿದ್ದು ಅದನ್ನು ಆತನು ನುಂಗಿದನು. ನನ್ನ ಮನಸ್ಸಿನಲ್ಲಿ "ಈ ವಿಳಾಸವು ಮೋಹನನದ್ದೇ ಇರಬೇಕು" ಎಂದು ತೋರುತ್ತದೆ.

ರಾಕಾಚಂದ್ರ—ಈಗ ಬಿಡಾರಕ್ಕೆ ಹೋಗೋಣ. ಸಂಜೆಯ ಹೊತ್ತಿ

ನಲ್ಲಿ ಅಲ್ಲಿಗೆ ಹೋಗಿ ಪರೀಕ್ಷಿಸೋಣ" ಎಂದನು.

ಬಿಡಾರವನ್ನು ಕುರಿತು ಹೋಗುತಲಿದ್ದ ಪತ್ತೆದಾರಿಗಳ ಹಿಂಭಾಗದಲ್ಲಿ ಮೋಟಾರ್‌ಕಾರು ಹೋಗುತಲಿತ್ತು. ಅದುಪ್ರಿಯನಾಥನದಾಗಿತ್ತು. ಸುರೇಂದ್ರ ನಾಥನ ಮನೆಯ ಹತ್ತಿರವೇ ಪ್ರಿಯನಾಥನು ವೇಷಾಂತರದಿಂದ ಮೋಟಾರ ನ್ನಿಟ್ಟುಕೊಂಡು ಮದನನು ಗೇಟಿನಿಂದ ಹೊರಬಂದೊಡನೆ ಮೋಟಾರನ್ನು ಹತ್ತಿ ಹೋಗಲು ಅಣಿಮಾಡಿ ಕಾದಿದ್ದನು; ಆದರೆ ಮದನನು ರಾಕಾಚಂದ್ರ ನಿಂದ ಹಿಡಿಯಲ್ಪಟ್ಟು ಬಂಧಿತನಾದನು. ಗಲಭೆಯಾದೊಡನೆ ಪ್ರಿಯನಾಥನು ಮುಂದೆ ಹೋಗಿ ನಡೆದ ವಿಷಯವನ್ನರಿತು ರಾಕಾಚಂದ್ರನನ್ನು ಹಿಂಬಾಲಿಸುವ ಹವಣಿಕೆಯಲ್ಲಿದ್ದು, ರಾಕಾಚಂದ್ರನು ಹೊರಗೆ ಹೊರಟೊಡನೆ ತಾನೂ ಅವ ನನ್ನು ಹಿಂಬಾಲಿಸಿದನು ರಾಕಾಚಂದ್ರನನ್ನು ಹಿಂಬಾಲಿಸಿದ ಯತ್ನವು ಸಫಲ ವಾಯಿತು. ರಾಕಾಚಂದ್ರನು ಸುಖಾನಂದನೊಡನೆ ಯಾವ ಬಿಡಾರವನ್ನು ಪ್ರವೇಶಿಸಿದನೋ ಅದನ್ನು ಪ್ರಿಯನಾಥನು ಗುರುತಿಟ್ಟುಕೊಂಡು ಹಿಂದಿರು ಗಿದನು.

+ + + + +

ಸುಮತಿಯು ಕೋಮಲೆಯ ಆಜ್ಞೆಯ ಮೇರೆ ಫ್ರೀಜರೀರೋಡಿನಲ್ಲಿ ರುವ ೩೦೦ನೇ ನಂಬರಿನ ಮನೆಗೆ ಹೋದಳು. ಸುಮತಿಯು ಬರುವದನ್ನು ಪ್ರಾಸಾದದಿಂದಲೇ ನೋಡಿದ ಮೋಹನನು ಕೆಳಗಿಳಿದು ಬಂದನು. ಸುಮ ತಿಯು ಅವನ ಹತ್ತಿರ ಕೋಮಲೆಯ ಕಾಗದವನ್ನು ಕೊಟ್ಟು ಹೊರಟು ಹೋದಳು. ಕಾಗದವನ್ನೋದಿ ಮೋಹನನು ತನ್ನ ಕಾಗದವನ್ನು ನೋಡಿದ ಮಾತ್ರದಿಂದಲೇ ಸಹಾಯಮಾಡಲೊಪ್ಪಿದ ಕೋಮಲೆಯನ್ನು ಮನಸ್ಸಿನಿಂದ ಲೇ ಶ್ಲಾಘಿಸಿದನು. ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಸುರೇಂದ್ರ ನಾಥನ ಗೃಹದ ಪಶ್ಚಿಮ ದಿಕ್ಕಿನ ಗೋಡೆಯ ಸಮೀಪದಲ್ಲಿ ಮೋಹನನೂ, ಅವನ ಮಿತ್ರರೂ ಒಬ್ಬೊಬ್ಬರೇ ಬಂದು ಸೇರುತ್ತಿದ್ದರು. ಅಂದು ಅಮಾ ವಾಸ್ಯೆಯಾದುದರಿಂದ ರಾತ್ರಿಯು ಕತ್ತಲೆಯಿಂದ ಭಯಂಕರವಾಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ನಿಶ್ಶಬ್ದವಾಗಿ ಪಶ್ಚಿಮ ದಿಕ್ಕಿನ ಬಾಗಿಲು ತೆರೆಯಲ್ಪ ಟ್ಟಿತು. ಸಾಯಂಕಾಲವಾದ ಮೇಲೆ ಪಶ್ಚಿಮ ದಿಕ್ಕಿನ ಬಾಗಿಲು ಯಾವಾಗಲೂ

ತೆರೆಯಲ್ಪಡುತ್ತಿರಲಿಲ್ಲ. ಅದನ್ನು ಕೋಮಲೆಯು ಈ ದಿನ ಮೋಹನನಿಗಾಗಿ ತೆರೆದಿದ್ದಳು. ಕೋಮಲೆಯ ಜೊತೆಯಲ್ಲಿ ಆಕೆಯ ಸಖಿಯಾದ ಸುಮತಿಯು ಮಾತ್ರ ಇದ್ದಳು. ಕದವನ್ನು ತೆರೆದೊಡನೆ ಮೋಹನನು ಮುಂದೆ ಬಂದು ನಿಂತನು. ಕೋಮಲೆಯು ಕೇಳಿದಳು.

ಕೋಮಲೆ— ಯಾರು?

ಮೋಹನ—ನಾನು ಮೋಹನ.

ಕೋಮಲೆ—ನನ್ನ ಕಾಗದದಂತೆ ನೀವು ಬಂದದ್ದನ್ನು ನೋಡಿದರೆ ನಾನು ಯಾವ ಇಚ್ಛಿತವನ್ನು ಯಾಚಿಸುವೆನೋ ಅದನ್ನು ನೀವು ಒಪ್ಪುವ ಅಭಿಪ್ರಾಯವಿದ್ದೇ ಬಂದಿರಬಹುದಲ್ಲವೇ?

ಮೋಹನ—ಆ ವಿಷಯದಲ್ಲಿ ಶಂಕಿಸಬೇಕಾಗಿಲ್ಲ.

ಕೋಮಲೆ—ಹಾಗಾದರೆ ನಿಶ್ಶಬ್ದವಾಗಿ ಎಲ್ಲರೂ ಒಳಗೆ ಬನ್ನಿ. ಮೆಲ್ಲ ಮಲ್ಲನೆ ಎಲ್ಲರೂ ಕೋಮಲೆಯನ್ನು ಹಿಂಬಾಲಿಸಿ ನಡೆದರು. ಮೋಹನನು ಕೋಮಲೆಯನ್ನು ಸ್ವಲ್ಪ ನಿಲ್ಲಲು ಹೇಳಿ "ಸೆರೆಯಿಡಲ್ಪಟ್ಟ ಕೂಲಿಗಾರರನ್ನು ಮೊದಲು ಬಿಡಿಸಲು ಸಾಧ್ಯವಿರುವದೇ?" ಎಂದು ಕೇಳಿದನು.

ಕೋಮಲೆ—ಸಾಧ್ಯವಿದೆ. ನೆಲಮನೆಯಲ್ಲಿ ಬಂಧಿಸಲ್ಪಟ್ಟಿರುವರು. ನನ್ನ ಜೊತೆಯಲ್ಲಿ ಇಬ್ಬರು ಮಾತ್ರ ಬರಬೇಕು. ಉಳಿದವರು ಇಲ್ಲಿಯೇ ಕಾದಿರಲಿ. ಇಲ್ಲಿ ಅವರಿಗೆ ಯಾವ ವಿಧವಾದ ಭಯವೂ ಬಾರದೆ ಇರುವಂತೆ ಈ ಸುಮತಿಯು ಕಾದು ನಿಲ್ಲುವಳು, ಎಂದು ನುಡಿದು ಕೋಮಲೆಯು ಮುಂದೆ ನಡೆದಳು. ಮೋಹನನೂ ಪ್ರಿಯನಾಥನೂ ಆಕೆಯನ್ನನುಸರಿಸಿ ಹೋದರು. ಉಳಿದವರು ಸುಮತಿಯ ರಕ್ಷಣೆಯಲ್ಲಿ ಅಲ್ಲಿಯೇ ನಿಂತರು. ಕೋಮಲೆಯು ಗುಪ್ತವಾದ ಒಂದು ಬಾಗಿಲಿನಿಂದ ಹೊಕ್ಕು ನೆಲಮನೆಗೆ ಹೋಗುವ ಮೆಟ್ಟಲುಗಳಲ್ಲಿ ಇಳಿದು ಒಂದು ಕಡೆಯಲ್ಲಿ ನಿಂತು ಬಾಗಿಲೊಂದನ್ನು ತೆರೆದಳು. ಅಲ್ಲೊಂದು ನೆಲಮನೆಯಾಗಿತ್ತು. ನೆಲಮನೆಯೊಳಗೆ ಮೂರು ಜನರೂ ಹೋದರು. ಅಲ್ಲೆರಡು ಕೋಣೆಗಳಿದ್ದವು. ಒಂದು ಕೋಣೆಯಲ್ಲಿ ದೀಪವಿದ್ದಂತೆ ಕಂಡು ಬಂದಿತು.

ಕೋಮಲೆಯು ದೀಪವಿದ್ದ ಕೋಣೆಯನ್ನು ತೋರಿಸಿ ಮೆಲ್ಲನೆ ಹೇಳಿ

ವಳು:—"ನನ್ನ ತಂದೆಯು ಈ ಕೋಣೆಯಲ್ಲಿರುವನು ದೀಪವಿದೆ. ಆ ಹೆಂಗ ಸನ್ನು ಪೀಡಿಸುತ್ತಿರುವಂತಿದೆ. ಮೊದಲು ಈಕೆಯ ಗಂಡನನ್ನು ಬಿಡಿಸೋಣ" ಎಂದು ಹೇಳಿ ಕೂಲಿಗಾರನಿದ್ದ ಕೋಣೆಯ ಹತ್ತಿರ ಬಂದಳು. ಬಾಗಿಲಿಗೆ ಹಾಕಿದ್ದ ಬೀಗವನ್ನು ಮೆಲ್ಲನೆ ತೆರೆದು ಬಾಗಿಲನ್ನು ದೂಕಿದಳು. ಪ್ರಿಯ ನಾಥನು ಕೋಣೆಯನ್ನು ಪ್ರವೇಶಿಸಿ ಮೂಲೆಯೊಂದರಲ್ಲಿ ಮಲಗಿದ್ದ ಕೂಲಿ ಗಾರನನ್ನು ಎಬ್ಬಿಸಿ ಹೊರಗೆ ಕರೆತಂದನು. ಸುರೇಂದ್ರನಾಥನ ಕೋಣೆಯಿಂದ ಇನ್ನೊಂದು ಮಾತು ಕೇಳಬರುತಲಿತ್ತು. ಅದರಿಂದ ಸುರೇಂದ್ರನಾಥನು ರಾಗಿಣಿಯ ಮನಸ್ಸನ್ನು ಒಲಿಸಲು ಬೆದರಿಸುತ್ತಿದ್ದಂತೆಯೂ, ಅದಕ್ಕೆ ಪ್ರತಿ ಯಾಗಿ ರಾಗಿಣಿಯು ಸುರೇಂದ್ರನಾಥನನ್ನು ಧಿಕ್ಕರಿಸುತ್ತಿದ್ದಂತೆಯೂ ಹೊರಗಿ ನವರಿಗೆ ತಿಳಿಯುತಲಿತ್ತು. ರಾಗಿಣಿಯನ್ನು ಕೂಡಲೆ ಬಿಡಿಸಬೇಕಾಗಿತ್ತು. ಕದವು ಕಬ್ಬಿಣದಂತೆ ಗಟ್ಟಿಯಾಗಿ ಇದ್ದುದರಿಂದ ಮುರಿಯಲು ಸಾಧ್ಯವಿರಲಿಲ್ಲ. ಒಂದು ಯುಕ್ತಿಯನ್ನು ಆಲೋಚಿಸಿ ಕೋಮಲೆಯು ಅದನ್ನು ಮೋಹನನಿಗೆ ತಿಳಿಸಿದಳು. ಅದರಂತೆ ಮೋಹನನು ವಿಕಾರವಾದ ಧ್ವನಿಯಿಂದ "ರಾಯರೇ? ರಾಯರೇ? ಘಾತವಾಯಿತು. ಸರ್ವ ನಾಶವಾಯಿತು. ಕಳ್ಳರು ಮನೆಯನ್ನು ಹೊಕ್ಕರು. ಬನ್ನಿ. ಬೇಗ ಬನ್ನಿ" ಎಂದು ಕೂಗುತ್ತಾ ಬಾಗಿಲನ್ನು ಬಡಿ ದನು. ಒಡನೆ ಸುರೇಂದ್ರನಾಥನು ಗಾಬರಿಯಾಗಿ ರಾಗಿಣಿಯನ್ನು ಬೆದರಿ ಸುವುದಕ್ಕಾಗಿ ತಂದಿದ್ದ ದೊಡ್ಡ ಚೂರಿಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಬೇಗನೆ ಬಾಗಿಲನ್ನು ತೆರೆದನು. ಕದವು ತೆರೆಯಲ್ಪಟ್ಟೊಡನೆ ಮೋಹನನು ಸುರೇಂದ್ರನಾಥನ ಕಣ್ಣಿಗೆ ಸರಿಯಾಗಿ ತನ್ನ ಎಲೆಕ್ಟ್ರಿಕ್ ದೀಪವನ್ನು ಹಿಡಿ ದನು. ಅದರಿಂದ ಥಟ್ಟನೆ ಸುರೇಂದ್ರನಾಥನು ಮುಂದೆ ಹೋಗಲಾರದೆ ಭೀತಿಯಿಂದ ಹಿಂದಕ್ಕೆ ಸರಿದನು. ಕೋಮಲೆಯು ಸುರೇಂದ್ರನಾಥನ ಕಣ್ಣಿಗೆ ಬೀಳದಂತೆ ದೂರ ಸರಿದು ನಿಂತಳು. ಸುರೇಂದ್ರನಾಥನನ್ನು ಹಿಡಿಯಲು ಮೋಹನನೂ ಪ್ರಿಯನಾಥನೂ ಮುಂದುವರಿದರು.

"ತನ್ನ ಸೇವಕರೇ ಬಾಗಿಲನ್ನು ತಟ್ಟಿದರೆ"ಂದು ನಂಬಿದ್ದ ಸುರೇಂದ್ರ ನಾಥನು ಈಗ ಅಪರಿಚಿತರಾದ ಪುರುಷರನ್ನು ನೋಡಿ, "ಇವರೇ ಕಳ್ಳರು" ಎಂದು ಭಾವಿಸಿ, ಬೇರೆ ಉಪಾಯ ಕಾಣದೆ ಅವರಿಬ್ಬರ ಹಿಡಿತಕ್ಕೆ ಸಿಗದಂತೆ

ದೊಡ್ಡ ಚೂರಿಯನ್ನು ಹಿಡಿದು ಬಾಗಿಲಿನಲ್ಲಿಯೇ ನಿಂತು, ತಿರುಗಿಸಲಾರಂಭಿಸಿದನು. ಹಿಡಿಯಲು ಪ್ರಯತ್ನಿಸುತ್ತಿದ್ದ ಮಿತ್ರರಿಬ್ಬರಿಗೂ ಗಾಯಗಳಾದವೇ ಹೊರತು ಸುರೇಂದ್ರನಾಥನನ್ನು ಹಿಡಿಯಲಾಗಲಿಲ್ಲ. ಯಾವ ಉಪಾಯವೂ ಸುರೇಂದ್ರನಾಥನೆದುರಿಗೆ ಪ್ರಯೋಜನವಾಗಲಿಲ್ಲ. ಪಿಸ್ತೂಲನ್ನು ಉಪಯೋಗಿಸಲು ಅದು ತಕ್ಕ ಕಾಲವಾಗಿರಲಿಲ್ಲ. ಗುಪ್ತವಾಗಿಯೇ ಕಾರ್ಯವು ನೆರವೇರಬೇಕಾಗಿತ್ತು. ಇಷ್ಟರಲ್ಲಿ ಇವರ ಯುದ್ಧವನ್ನು ನೋಡುತ್ತಾ ಸುರೇಂದ್ರನಾಥನ ಹಿಂದೆ ನಿಂತಿದ್ದ ರಾಗಿಣಿಯು "ಇದೇ ತಕ್ಕ ಸಮಯ" ವೆಂದೂಹಿಸಿ ಬಲವಾಗಿ ಸುರೇಂದ್ರನಾಥನ ಕಾಲನ್ನು ಹಿಡಿದೆಳೆದಳು. ಸುರೇಂದ್ರನಾಥನು ಜಾರಿ ಹೊಸ್ತಿಲಿನ ಮೇಲೆ ಧೊಪ್ಪನೆ ಬಿದ್ದು ಬಿಟ್ಟನು. ಒಡನೆ ಮೂವರು ಪುರುಷರೂ ಸುರೇಂದ್ರನಾಥನ ಮೇಲೆ ಬಿದ್ದು ಅಲುಗಾಡದಂತೆ ಬಲವಾಗಿ ಕಟ್ಟಿ ಅದೇ ಕೋಣೆಯಲ್ಲಿ ಉರುಳಿಸಿ ಕದವನ್ನು ಎಳೆದು ಹಾಕಿಕೊಂಡು ಎಲ್ಲರೂ ನಿಶ್ಶಬ್ದವಾಗಿ ಮೇಲೆ ಬಂದರು.

ಮೋಹನನು ರಾಗಿಣಿಯು ಮಾಡಿದ ಉಪಾಯಕ್ಕಾಗಿ ಆಕೆಯನ್ನು ಶ್ಲಾಘಿಸಿ ಆಕೆಯ ಪತಿಯನ್ನು ಕುರಿತು "ನಿನ್ನದು ಯಾವ ಊರು?" ಎಂದು ಕೇಳಿದನು.

ರಾಗಿಣಿಯಗಂಡ—ನಮ್ಮ ಊರು ಜ್ಯೋತಿಪುರ, ಹೊಟ್ಟೆಯ ಪಾಡಿಗೆ ಇಲ್ಲಿಗೆ ಬಂದು ಕೆಟ್ಟೆವು. ಈಗ ನಿಮ್ಮಿಂದ ಕಷ್ಟದಿಂದ ಪಾರಾದೆವು. ಮೋಹನನು ಆತನ ವಿಳಾಸವನ್ನು ತೆಗೆದುಕೊಂಡು, "ನೀವಿನ್ನು ಇಲ್ಲಿ ಕ್ಷಣಕಾಲವೂ ನಿಲ್ಲದೆ ಕೂಡಲೆ ಗುಪ್ತವಾಗಿ ನಿಮ್ಮೂರಿಗೆ ಹೊರಟು ಹೋಗಿ" ಎಂದು ಹೇಳಿದನು. ರಾಗಿಣಿ ಮತ್ತು ಆಕೆಯ ಗಂಡನು ಮೋಹನನಿಗೆ ನಮಸ್ಕರಿಸಿ, ಪಶ್ಚಿಮದಿಕ್ಕಿನ ಬಾಗಿಲಿನಿಂದ ಹೊರಟು ಹೋದರು.

ಅನಂತರ ಕೋಮಲೆಯು ಮನೆಯ ಎದಿರು ಭಾಗದ ಒಂದು ಕೊಠಡಿಯಲ್ಲಿ ಮೋಹನನನ್ನೂ ಪ್ರಿಯನಾಥನನ್ನೂ ಇರಲು ಹೇಳಿ ಹೊರಗೆ ಬಂದಳು. ಇನ್‌ಸ್ಪೆಕ್ಟರ್ ರಘುರಾಮನ್‌ರವರು ಇತ್ತಿಂದತ್ತ ಅಲ್ಲಿ ತಿರುಗಾಡುತ್ತಿದ್ದರು. ಕೋಮಲೆಯು ಸ್ವಲ್ಪ ದೂರದಲ್ಲಿ ನಿಂತುಕೊಂಡು, "ತಂದೆಯು ನಿಮ್ಮನ್ನು ಕರೆಯುತ್ತಾನೆ. ಆ ಕೋಣೆಯಲ್ಲಿದ್ದಾನೆ" ಎಂದು ಹೇಳಿ,

ಕೋಣೆಯನ್ನು ತೋರಿಸಿ, ಹೊರಟು ಹೋದಳು. ಇನ್‌ಸ್ಪೆಕ್ಟರರು ಕೋಮಲೆಯು ತೋರಿಸಿದ ಕೊಠಡಿಯನ್ನು ಸೇರಿದರು. ಒಡನೆ ಅಲ್ಲಿ ಹೊಂಚು ಹಾಕಿ ನಿಂತಿದ್ದ ಮೋಹನ ಮತ್ತು ಪ್ರಿಯನಾಥರು ಇನ್‌ಸ್ಪೆಕ್ಟರರ ಮೇಲೆ ಹಾರಿ ನೆಲಕ್ಕೆ ಕೆಡವಿ ಕಟ್ಟಿ ಉರುಳಿಸಿ ಹೊರಗೆ ಬಂದರು.

ಕೋಮಲೆಯು ಹೇಳಿದಳು:—"ಈ ಮನೆಯ ಕಾಂಪೌಂಡಿನಿಂದ ಹೊರಗೆ ಹೋಗಲು ಎರಡೇ ಬಾಗಿಲುಗಳಿರುತ್ತವೆ. ಒಂದು ಬಾಗಿಲಿನಿಂದ ನೀವು ಬಂದಿರುವಿರಿ. ಇನ್ನೊಂದು ಇಲ್ಲಿಯೇ ಎದುರಿನಲ್ಲಿದೆ. ಈ ಗೇಟಿನಲ್ಲಿ ನಾಲ್ಕು ಜನ ಪೋಲೀಸರು ನಿಂತಿರುವರು. ನಿಮ್ಮ ಮಿತ್ರನನ್ನು ಸೆರೆಯಿಟ್ಟಿರುವ ಕೋಣೆಯ ಹತ್ತಿರ ನಾಲ್ಕು ಜನ ಪೋಲೀಸರಿರುವರು. ಇನ್ನೆಲ್ಲಿಯೂ ಪೋಲೀಸರಿಲ್ಲ."

ಮೋಹನನು ಪ್ರಿಯನಾಥನ ಹತ್ತಿರ "ಗೇಟಿನಲ್ಲಿರುವ ಪೋಲೀಸರು ಅಲ್ಲಿಂದ ಇತ್ತ ಕಡೆಗೆ ಬಂದರೆ ನಿರ್ದಯೆಯಿಂದ ಹೊಡೆದು ಹಾಕು. ಗೇಟಿಗೆ ಸಮೀಪದಲ್ಲಿ ಎಲ್ಲಾದರೂ ಕತ್ತಲೆಯಲ್ಲಿ ಕಾದು ನಿಂತಿರು. ಸಹಾಯಕ್ಕೆ ನಾಲ್ಕು ಜನರನ್ನು ಕರೆದುಕೊಂಡು ಹೋಗು" ಎಂದು ಹೇಳಿ ಪ್ರಿಯನಾಥನನ್ನು ಕಳುಹಿಸಿ, ಕೋಮಲೆಯೊಂದಿಗೆ ತನ್ನ ಸಂಗಡಿಗರು ಹಿಂದೆ ನಿಂತಿದ್ದ ಸ್ಥಳಕ್ಕೆ ನಿಶ್ಶಬ್ದವಾಗಿ ಹೋದನು. ಮನೆಯೊಳಗೆ ಯಾವ ಯಾವ ಸ್ಥಳಗಳಲ್ಲಿ ಯಾರು ಯಾರು ಇರುವರೆಂಬುದನ್ನು ಕೋಮಲೆಯು ಅರಿತಿದ್ದರಿಂದ ಇವರ ಅತ್ತಿತ್ತ ಸಂಚಾರದಿಂದ ಮನೆಯವರಾರಿಗೂ ಎಚ್ಚರವಾಗುವಂತಿರಲಿಲ್ಲ. ಅಲ್ಲಿಂದ ಕೋಮಲೆಯು ಎಲ್ಲರನ್ನು ಕರೆದುಕೊಂಡು ಮದನನನ್ನು ಸೆರೆಯಿಟ್ಟಿರುವ ಕೋಣೆಯ ಕಡೆಗೆ ಹೋದಳು. ಅಲ್ಲಿ ನಾಲ್ಕು ಜನ ಪೋಲೀಸರು ಬಾಗಿಲ ಹತ್ತಿರ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದರು. ಕೋಣೆಯನ್ನು ತೋರಿಸಿ, ಕೋಮಲೆಯು ಪೋಲೀಸರ ದೃಷ್ಟಿಗೆ ಬೀಳದೆ ಹಿಂದೆ ಸರಿದು ನಿಂತಳು. ಮೋಹನನ ಸೂಚನೆಯಂತೆ ಅವನ ಸಂಗಡಿಗರೆಲ್ಲರೂ ಬಾರ್ ಮಾಡಿದ ಪಿಸ್ತೂಲನ್ನು ಮುಂದೆ ಹಿಡಿದುಕೊಂಡು ಒಮ್ಮೆಲೆ ಓಡಿ ಬಂದು ಒಬ್ಬೊಬ್ಬ ಪೋಲೀಸನಿಗೆ ಇಬ್ಬಿಬ್ಬರಂತೆ ನಿಂತು ಗುಂಡನ್ನು ಹಾರಿಸುವ ಹವಣಿಕೆಯನ್ನು ತೋರಿಸಿದರು. ಇದು ಅಕಸ್ಮಾತ್ ಸಂಭವಿಸಿದುದರಿಂದ

ಪೋಲೀಸರು ಏನನ್ನು ಮಾಡುವದಕ್ಕೂ ತೋಚದೆ ವಿಸ್ಮಿತರಾಗಿಯೂ, ಭೀತ ರಾಗಿಯೂ, ಸ್ತಬ್ಧರಾಗಿಯೂ ಇದ್ದುಬಿಟ್ಟರು. "ಪಿಟ್ಟೆಂದು ಯಾರು ಶಬ್ದ ಮಾಡಿ ದರೂ ಸ್ವಲ್ಪ ಅತ್ತಿತ್ತ ಉಲುಕಿದರೂ ಕೂಡಲೆ ಅವರ ಕಣ್ಣುಗಳಿಗೇ ಗುಂಡು ಗಳನ್ನು ಹಾರಿಸಿರಿ. ಸ್ವಲ್ಪವೂ ದಯೆಯನ್ನು ತೋರಿಸಬೇಡಿ" ಎಂದು ಮೋಹನನು ತನ್ನವರಿಗೆ ಆಜ್ಞೆಯನ್ನು ಮಾಡಿ ಕೋಮಲೆಯು ಕೊಟ್ಟಿದ್ದ ಬೀಗದ ಕೈಯಿಂದ ಆ ಕೋಣೆಯ ಬೀಗವನ್ನು ತೆರೆದು, ಕದವನ್ನು ನೂಕಿ ಮದನನನ್ನು ಸೆರೆಯಿಂದ ಬಿಡಿಸಿದನು. ಮೋಹನನು ಮದನನೊಡನೆ ಹೊರಗೆ ಬಂದು ಪೋಲೀಸರನ್ನು ಕುರಿತು ಹೇಳಿದನು: "ನಮ್ಮ ಕೆಲಸ ವಾಯಿತು. ಇನ್ನು ಸ್ವಲ್ಪ ಹೊತ್ತಿನವರೆಗೆ ನೀವು ಯಾರೂ ಇಲ್ಲಿಂದ ಉಲು ಕದೆ ನಿಶ್ಶಬ್ದವಾಗಿ ಕುಳಿತುಕೊಳ್ಳಿ. ಇದಕ್ಕಾಗಿ ನಿಮಗೆ ತಕ್ಕ ಬಹುಮಾನ ವನ್ನು ಕೊಡುವೆನು ಇನ್ಸ್ಪೆಕ್ಟರರಿಗೆ ನೀವೇನೂ ಭಯಪಡಬೇಕಾದ್ದಿಲ್ಲ. ನೀವು ಸ್ವಲ್ಪವಾದರೂ ಶಬ್ದವನ್ನು ಮಾಡಿದರೆ ನಿಮ್ಮ ಪರಿಣಾಮವು ಒಳಿ ತಾಗಲಿಕ್ಕಿಲ್ಲ ನೆನಪಿರಲಿ" ಎಂದು ನುಡಿದು ಒಬ್ಬೊಬ್ಬರಿಗೂ ಐದೈದು ರೂಪಾಯಿಗಳನ್ನು ಕೊಟ್ಟು, ಅಲ್ಲಿಂದ ಮಿತ್ರರೊಡನೆ ಹೊರಟು, ಕೋಮ ಲೆಯ ಹತ್ತಿರಕ್ಕೆ ಬಂದನು. ಮೋಹನನು ಹೇಳಿದನು:—ನಿನ್ನ ಸಹಾಯ ದಿಂದ ಕಾರ್ಯವೆಲ್ಲವೂ ನಿರ್ವಿಘ್ನವಾಗಿ ನೆರವೇರಿತು. ಮುಂದೇನು? ನಿನ್ನ ಇಚ್ಛೆ ಏನಿರುವದು?

ಕೊಮಲೆ—ಅದನ್ನೀಗ ನಾನು ಹೇಳಲು ಸಮಯವಿಲ್ಲ. ಸಕಾಲ ದಲ್ಲಿ ಬಂದು ವಿಜ್ಞಾಪಿಸಿಕೊಳ್ಳುವೆನು.

ಮೋಹನ—ಆಗಲಿ; ಆದರೆ ವಿಳಾಸವು ಮೊದಲಿನಂತೆ ಅಲ್ಲ. ಹಿಂದಿನ ವಿಳಾಸದ ಮನೆಯ ಮುಂಭಾಗದ ೧೫ನೇ ನಂಬರಿನ ಮನೆಯಲ್ಲಿ ಇನ್ನು ಮೇಲೆ ಇರುವೆವು. (ಉಂಗುರವೊಂದನ್ನು ಕೊಟ್ಟು) ಇದನ್ನು ಬಾಗಿಲಿನಲ್ಲಿ ತೋರಿಸಿದರೆ ನಿನ್ನನ್ನು ಒಳಗೆ ಬಿಡುವರು. ಈಗ ನಿನ್ನ ಮೇಲೆ ಸುರೇಂದ್ರ ನಾಥನಿಗೆ ಸಂಶಯ ಬಂದರೆ ಏನು ಮಾಡುವಿ?

ಕೋಮಲೆ-ಅದಕ್ಕಾಗಿ ಯೋಚಿಸಬೇಕಾದ್ದಿಲ್ಲ. ಅದಕ್ಕೆ ಒಂದು ಉಪಾಯ ವನ್ನು ಹುಡುಕಿರುವೆನು. ಈಗ ನೀವು ಪಶ್ಚಿಮದ್ವಾರದಿಂದ ಹೊರಗೆ ಹೊರ

ನೊಡನೆ ಎಲ್ಲರೂ ಒಂದು ಬಾರಿ ಗುಂಡುಗಳನ್ನು ಹಾರಿಸಿ ಹೊರಟು ಹೋಗಿರಿ. ಉಳಿದ ವಿಚಾರವು ನನಗಿರಲಿ.

"ಹೋಗುತ್ತೇವೆ" ಎಂದು ನುಡಿದು ಮೋಹನನೂ ಮೋಹನನ ಮಿತ್ರರೂ ಪಶ್ಚಿಮದಿಕ್ಕಿನ ಬಾಗಿಲಿನಿಂದ ಹೊರಟರು. ಸುಮತಿಯು ಆ ಕದವನ್ನು ಮುಚ್ಚಿ ಕೋಮಲೆಯನ್ನು ಆಕೆಯು ಮಲಗಿಕೊಳ್ಳುವ ಕೊಠಡಿ ಯಲ್ಲಿ ಬಿಟ್ಟು ಆ ಕೋಣೆಯ ಬಾಗಿಲಿಗೆ ಬೀಗ ಹಾಕಿ ತನ್ನ ಕೋಣೆಗೆ ಹೋಗಿ ಮಲಗಿಕೊಂಡಳು. ಒಡನೆ ಪಶ್ಚಿಮದಿಕ್ಕಿನಲ್ಲಿ ಮೇಘ ಗರ್ಜನೆಯಂತೆ 'ಥಂ. ಥಂ' ಎಂದು ಧ್ವನಿಯೆದ್ದಿತು. ಗೇಟಿನಲ್ಲಿದ್ದ ಪೋಲೀಸರೂ, ಮದನನ ಕಾವಲಿಗೆ ನಿಯಮಿಸಲ್ಪಟ್ಟಿದ್ದ ಪೋಲೀಸರೂ "ಇದೇನು ಗುಂಡುಗಳ ಸದ್ದು ಉಂಟಾಗುತ್ತಿದೆ" ಎಂದು ಗಾಬರಿಯಿಂದ ಅತ್ತಿತ್ತ ಹುಡುಕಿದರು. ಮನೆ ಯಲ್ಲಿ ಮಲಗಿದ್ದ ಜನರೂ ಹತ್ತಿರದ ಗುಡಿಸಲುಗಳಿಂದ ಕೂಲೀ ಜನರೂ ಎಚ್ಚತ್ತರು. ಸುಳ್ಳು ನಿದ್ರೆಯನ್ನು ನಟಿಸುತ್ತಿದ್ದ ಸುಮತಿಯೂ ಎದ್ದು ಬಂದು ಗಾಬರಿಪಡುತ್ತಾ ಓಡಾಡಲಾರಂಭಿಸಿದಳು.

ಇನ್‌ಸ್ಪೆಕ್ಟರರನ್ನು ಹುಡುಕುತಲಿದ್ದ ಪೋಲೀಸರು ಒಂದು ಕೋಣೆ ಯಲ್ಲಿ ಉಸಿರಾಡಲೂ ಅವಕಾಶವಿಲ್ಲದೆ ವಸ್ತ್ರದಿಂದ ಕಟ್ಟಲ್ಪಟ್ಟು ಬಿದ್ದಿರುವ ಇನ್‌ಸ್ಪೆಕ್ಟರನನ್ನು ನೋಡಿ, ಬಿಡಿಸಿ, ಗುಂಡಿನ ಸದ್ದಾದನಂತರ ನಡೆದ ವಿಷಯವನ್ನು ತಿಳಿಸಿದರು. ಮದನನ ಕಾವಲಿಗೆ ಇದ್ದ ಪೋಲೀಸರು ಮೋಹ ನನು ಬಂದು ಹೋದ ವಿಷಯವನ್ನು ತಿಳಿಸಲೇ ಇಲ್ಲ. ಇನ್‌ಸ್ಪೆಕ್ಟರರು ಹೊರಗೆ ಬಂದು 'ರಾಯರೆಲ್ಲಿ?' ಎಂದು ಕೇಳಿದರು. ಸುಮತಿಯು ಮುಂದೆ ಬಂದು "ರಾಯರು ಅವರು ಮಲಗುವ ಕೋಣೆಯಲ್ಲಿ ತೋರುವುದಿಲ್ಲ. ಏನಾದರೋ ತಿಳಿಯುವುದೂ ಇಲ್ಲ. ಕೋಮಲೆಯೂ ಕಾಣುವುದಿಲ್ಲ. ಆಕೆಯ ಶಯನಾ ಗಾರಕ್ಕೆ ಬೀಗ ಹಾಕಿದೆ. ಕಳ್ಳರು ಆಕೆಯನ್ನು ಅಪಹರಿಸಿದರೊ ಏನೋ ತಿಳಿಯದು"ಎಂದು ದುಃಖವನ್ನು ನಟಿಸುತ್ತಾ ಹೇಳಿದಳು. ಕೋಮಲೆಯ ಕೋಣೆಗೆ ಒಡನೆ ಇನ್‌ಸ್ಪೆಕ್ಟರರು ಹೋಗಿ ಬೀಗವನ್ನು ಮುರಿದು ಒಳ ಹೊಕ್ಕರು. ಕೋಮಲೆಯು ಪರ್ಯಂಕದಲ್ಲಿ ಶಯನಿಸಿದ್ದಳು. ಬೀಗ ತೆಗೆಯುವ ಗಲಭೆಯಿಂದ ಎಚ್ಚತ್ತವಳಂತೆ ನಟಿಸುತ್ತಾ ಇನ್‌ಸ್ಪೆಕ್ಟರರನ್ನು ಕುರಿತು:—

"ಏನು? ಏನಾಯಿತು? ಇಲ್ಲಿಗೆ ಯಾಕೆ ಬಂದಿರಿ?" ಎಂದು ಕೇಳಿದಳು.

ಇನ್ಸಪೆಕ್ಟರರು ಕೋಮಲೆಯ ಗಂಭೀರವಾದ ಮುಖದ ಭಾವವನ್ನು ನೋಡಿ ಆಶ್ಚರ್ಯಪಟ್ಟರು. "ಸ್ವಲ್ಪಕಾಲದ ಹಿಂದೆ ಇದೇ ಕೋಮಲೆಯು ತಂದೆಯು ನನ್ನನ್ನು ಕರೆಯುತ್ತಾನೆಂದು ಹೇಳಿ ಹೊರಟು ಹೋದಳು. ಅದರಿಂದಲೇ ನಾನು ಹಿಡಿಯಲ್ಪಟ್ಟೆನು. "ಕೋಮಲೆಯು ಕಳ್ಳರೊಡನೆ ಹೇಗೆ ಸೇರಿದಳು." ಎಂಬುದನ್ನು ಇಷ್ಟು ಹೊತ್ತಿನ ವರೆಗೂ ಆಲೋಚಿಸುತ್ತಿದ್ದೆನು. ಈಗ ಈಕೆಯ ಸ್ಥಿತಿಯನ್ನು ಪರಿಶೀಲಿಸಿದರೆ ನನ್ನನ್ನೀಕೆಯು ಕರೆದುದೇ ಸುಳ್ಳೆಂದು ತೋರುತ್ತಿದೆ. ಈಕೆಯು ಹಾಗೆ ಕಳ್ಳರೊಡನೆ ಸೇರಿ, ನನ್ನನ್ನು ಕರೆದುದು ನಿಜವಾದರೆ ಈಗ ಇಲ್ಲಿ ಕೋಣೆಯೊಳಗೆ ಈಕೆಯು ಇದ್ದು ಬಾಗಿಲಿಗೆ ಬೀಗ ಹಾಕಿರುವವರು ಯಾರು? ಯಾವುದೂ ನಿಜವಾಗಿ ತೋರುವದಿಲ್ಲ. ಈಕೆಯ ಮುಖವಾದರೋ "ನಿರಪಾಧಿನಿಯಾದ ಈಕೆಯು ಏನನ್ನು ತಿಳಿಯಲಾರಳು" ಎಂಬುದನ್ನು ತಿಳಿಸುತ್ತಿರುವದು. ಸಾಕ್ಷಾತ್ ತಂದೆಗೆ ವಿರುದ್ಧವಾಗಿ ನಿಂತು ಆ ದುಷ್ಟ ಕಳ್ಳರಿಗೆ ಸಹಾಯವನ್ನು ಮಾಡುವುದು ಅಸಂಭವವೇ ಸರಿ."

ಈ ರೀತಿ ಇನ್ಸಪೆಕ್ಟರರು ನಾನಾ ಯೋಚನಾ ತರಂಗಗಳಲ್ಲಿ ತೇಲಾಡುತ್ತಿರಲು, ಕೋಮಲೆಯು ತನ್ನ ಮಾತಿಗೆ ಉತ್ತರವನ್ನೀಯದೆ ಯೋಚನೆ ಮಾಡುತ್ತಿರುವುದನ್ನು ನೋಡಿ ದುಃಖವ್ಯಂಜಕವಾದ ಧ್ವನಿಯಿಂದ ಹೇಳಿದಳು:— ಏನು ಇನ್ಸಪೆಕ್ಟರರೇ? ಏನಾಗಿದೆ? ಬೇಗನೆ ಹೇಳಿ. ಈ ರೀತಿಯಾಗಿ ನೀವು ಯೋಚಿಸುತ್ತಿರುವುದನ್ನು ನೋಡಿ ನನ್ನ ಹೃದಯದಲ್ಲಿ ಕಳವಳ ಉಂಟಾಗಿದೆ"

ಇನ್ಸಪೆಕ್ಟರ—ಏನನ್ನು ತಿಳಿಸುವುದಕ್ಕೂ ಬಾಯಿ ಬರುವುದಿಲ್ಲ. ಕಳ್ಳರು ಮನೆಯನ್ನು ಪ್ರವೇಶಿಸಿದಂತಿದೆ. ಸುರೇಂದ್ರನ ಪತ್ತೆಯಿಲ್ಲ.

ಕೋಮಲೆ—ಏನು ತಂದೆಯಿಲ್ಲವೆ? ಏನಾದನು?

ಇನ್ಸಪೆಕ್ಟರ—ಏನಾದರೋ ತಿಳಿಯುವದಿಲ್ಲ.

ಕೋಮಲೆ—ಕಳ್ಳರು ಹೇಗೆ ಬಂದರು! ನೀವಿರಲಿಲ್ಲವೇ?

ಇನ್‌ಸ್ಪೆಕ್ಟರ್—ನನ್ನನ್ನು ಬಂಧಿಸಿದ್ದರು.

ಕೋಮಲೆ—ಯಾರು ನಿಮ್ಮನ್ನು ಬಂಧಿಸಿದ್ದರು? ಹೇಗೆ?

ಇನ್ಸಪೆಕ್ಟರ-ಅದೇ ನನಗೆ ಸಂದೇಹವಾಗಿದೆ. ನಾನು ಮನೆಯ ಮುಂಭಾಗ ದಲ್ಲಿ ಅತ್ತಿಂದಿತ್ತ ತಿರುಗಾಡುತ್ತಿದ್ದಾಗ "ತಂದೆಯು ಕರೆಯುತ್ತಾನೆ"ಂದು ಹೇಳಿ, ಒಂದು ಕೊಠಡಿಯನ್ನು ನೀನು ತೋರಿಸಿದಂತೆ ನನಗೆ ಭಾಸಮಾನ ವಾಯಿತು.

ಕೋಮಲೆ--ಏನು! ನಾನು ನಿಮ್ಮನ್ನ ಕರೆದೆನೇ? ಎಷ್ಟು ಹೊತ್ತಿನಲ್ಲಿ?

ಇನ್ಸ್ಪೆಕ್ಟರ—ಇದೇ ಈಗ ಹತ್ತು ಗಂಟೆಯ ಹೊತ್ತಿನಲ್ಲಿ.

ಕೋಮಲೆ—ಆಗ ನಾನಿಲ್ಲಿ ನಿದ್ರಿಸುತಲಿದ್ದೆನು. ನಾನು ಒಂಭತ್ತೂ ವರೆ ಗಂಟೆಯ ಸಮಯದಲ್ಲಿಯೇ ಮಲಗಿದ್ದೆನು.

ಇನ್ಸ್ಪೆಕ್ಟರ—ಹೌದು. ಈ ಕೋಣೆಗೂ ಕಳ್ಳರು ಬೀಗವನ್ನು ಹಾಕಿದ್ದರು. ಈಗ ನಾನು ಬಂದು ಬೀಗವನ್ನು ಒಡೆದು ಒಳಗೆ ಬಂದೆನು. ಮೋಹನನು ನಿನ್ನಂತೆ ವೇಷವನ್ನು ಧರಿಸಿ ನನ್ನನ್ನು ಮೋಸಪಡಿಸಿದ್ದರೂ ಇರಬಹುದು. ಅವನಿಗೆ ಇದೊಂದು ಕಷ್ಟವಾದುದಲ್ಲ. ತೋರಿಸಿದ ಕೊಠಡಿ ಯನ್ನು ಸೇರಿದೊಡನೆ ಕಳ್ಳರಿಂದ ಬಂಧಿಸಲ್ಪಟ್ಟೆನು. ಈಗ ಪೋಲೀಸರು ಬಂದು ಬಿಡಿಸಿದರು.

ಕೋಮಲೆ—ಕಳ್ಳರು ಯಾವ ದಾರಿಯಿಂದ ಬಂದರು? ಗೇಟಿನಲ್ಲಿ ಪೋಲೀಸರು ನಿಂತಿರಲಿಲ್ಲವೇ?

ಇನ್ಸ್ಪೆಕ್ಟರ—ಗೇಟಿನಿಂದ ಯಾರೂ ಬಂದಿಲ್ಲವೆಂದು ಪೋಲೀಸರು ಹೇಳುತ್ತಿರುವರು. ಪಶ್ಚಿಮದಿಕ್ಕಿನ ಬಾಗಿಲೂ ತೆರೆಯಲ್ಪಡದೆ ಹಾಗೆಯೇ ಇದೆ, ಪಶ್ಚಿಮದಿಕ್ಕಿನಲ್ಲಿ ಭಾರೀ ಗುಂಡಿನ ಸದ್ದಾಗಿ ಎಲ್ಲರೂ ಎಚ್ಚೆತ್ತು ಗಲಭೆ ಮಾಡಿ ದರು. ಅದುವರೆಗೆ ನಡೆದ ವಿಚಾರವು ಮಾತ್ರ ಒಬ್ಬರಿಗೂ ತಿಳಿದಿಲ್ಲ.

ಕೋಮಲೆ—ಸೆರೆಯಲ್ಲಿರುವವನ ವಿಷಯವೇನು?

ಇನ್ಸ್ಪೆಕ್ಟರ್—ಓಹೋ! ನನಗದು ಹೊಳೆಯಲೇ ಇಲ್ಲ. ನಿನ್ನ ಈ ಕೋಣೆಗೆ ಬೀಗವನ್ನು ಹಾಕಿರುವರೆಂದು ಸುಮತಿಯು ಹೇಳಿದೊಡನೆ ಇತ್ತ ಕಡೆಗೇ ಓಡಿ ಬಂದೆನು.(ಅಲ್ಲಿ ಕಾವಲಿದ್ದ ಪೋಲೀಸರನ್ನು ಕುರಿತು) ಏನೋ? ಆ ಬಾಗಿಲಿಗೆ ಬೀಗಹಾಕಿದೆಯಷ್ಟೆ'

ಅವರಲ್ಲೊಬ್ಬ—ಹೌದು ಸ್ವಾಮಿ! ಬೀಗ ಹಾಕಿದೆ. ಗೇಟಿನ ಪೋಲೀಸರು ಗುಂಡಿನ ಸದ್ದನ್ನು ಕೇಳಿ ಓಡಿ ಬರುವವರೆಗೆ ನಾವು ಆ ಕೊಠಡಿಯ ಮುಂಭಾಗದಲ್ಲಿಯೇ ಎಚ್ಚರತ್ತು ಕಾದಿದ್ದೆವು.

ಇನ್‌ಸ್ಪೆಕ್ಟರ್—ಈಗ ಮೊದಲು ಅಲ್ಲಿಗೆ ಹೋಗೋಣ, ಎಂದು ಹೇಳಿ ಅತ್ತ ಕಡೆಗೆ ಹೊರಟರು. ಎಲ್ಲರೂ ಮದನನ್ನು ಸೆರೆ ಇಟ್ಟಲ್ಲಿಗೆ ಹೋದರು. ಈಗ ಅಲ್ಲೇನಿದೆ? ಶೂನ್ಯವಾದ ಕೊಠಡಿಯು ಮಾತ್ರ ಇದೆ. ಇನ್‌ಸ್ಪೆಕ್ಟರರು ಮನದಲ್ಲಿ "ಗುಂಡಿನ ಸದ್ದನ್ನು ಕೇಳಿ ಪೋಲೀಸರು ಅತ್ತಿತ್ತ ತಿರುಗುತ್ತಿದ್ದಾಗ ಕೋಣೆಯಲ್ಲಿದ್ದವನನ್ನು ಕಳ್ಳರು ಬಿಡಿಸಿಕೊಂಡು ಹೋದರು" ಎಂದು ನಿಶ್ಚಯಿಸಿದರು. ಸುರೇಂದ್ರನಾಥನ ಪತ್ನಿಯು ಕೋಮಲೆಯ ಕಿವಿಯ ಹತ್ತಿರ "ನಿನ್ನ ತಂದೆಯು ನೆಲಮನೆಯಲ್ಲಿ ಇದ್ದರೂ ಇರಬಹುದು ಹೋಗಿ ನೋಡೋಣ" ಎಂದು ಹೇಳಿದಳು. ಕೋಮಲೆಯು ಇನ್‌ಸ್ಪೆಕ್ಟರರ ಹತ್ತಿರ:- "ನಾವಿನ್ನೊಂದು ಕಡೆಯಲ್ಲಿ ರಾಯರನ್ನು ಹುಡುಕಿ ನೋಡಿಕೊಂಡು ಬರುವೆವು ಎಂದು ನುಡಿದು, ತಾಯಿಯ ಜೊತೆಗೆ ಸುಮತಿಯನ್ನು ಕರೆದುಕೊಂಡು ನೆಲಮನೆಗೆ ನಡೆದಳು. ನೆಲಮನೆಯಲ್ಲಿ ಸುರೇಂದ್ರನಾಥನು ಬಂಧಿತನಾಗಿ ತನ್ನ ದುರದೃಷ್ಟವನ್ನು ಬೈಯುತ್ತಾ, ತನ್ನ ಸುಖವು ಕೈತಪ್ಪಿ ಹೋದುದರಿಂದ ಪರಿತಪಿಸುತ್ತಾ ಮಲಗಿದ್ದನು ರಾಗಿಣಿಯನ್ನು ಸೆರೆ ಹಿಡಿದದ್ದನ್ನೂ, ಆಕೆಯನ್ನೂ ಮತ್ತವಳ ಗಂಡನನ್ನು ನೆಲಮನೆಯಲ್ಲಿ ಸೆರೆಯಿಟ್ಟಿರುವದನ್ನೂ, ಅದಕ್ಕಾಗಿಯೇ ಪೋಲೀಸರ ಸಹಾಯವನ್ನು ಅಪೇಕ್ಷಿಸಿರುವುದನ್ನೂ ಸುರೇಂದ್ರನಾಥ, ಆತನ ಪತ್ನಿ, ಕೋಮಲೆ, ಸುಮತಿ, ಮತ್ತು ಕೆಲವರು ಸುರೇಂದ್ರನಾಥನ ಪ್ರೀತಿಪಾತ್ರರು ಮಾತ್ರ ಅರಿತಿದ್ದರು. ಇನ್ನಾರಿಗೂ ಈ ಸಮಾಚಾರವಾವುದೂ ತಿಳಿದಿರಲಿಲ್ಲ. ಸಹಾಯಕರಾದ ಇನ್‌ಸ್ಪೆಕ್ಟರ್ ರಘುರಾಮನ್‌ರಿಗೂ ಸುರೇಂದ್ರನಾಥನು ಈ ವಿಚಾರಗಳನ್ನು ತಿಳಿಸಿರಲಿಲ್ಲ. ಯಾಕೆಂದರೆ ತನ್ನ ಕಾರ್ಯವು ವಿಫಲವಾದರೆ ಮರ್ಯಾದೆಯು ಹೋಗುವ ಸಂಭವವಿತ್ತು.

ಕಟ್ಟುಗಳನ್ನು ಬಿಚ್ಚಿ ಸುರೇಂದ್ರನಾಥನನ್ನು ಬಿಡಿಸಿ ಕೋಮಲೆಯು ನಡೆದ ಸಮಾಚಾರವನ್ನು ವಿವರಿಸಿದಳು. ಪೋಲೀಸರ ಸಹಾಯವಿದ್ದರೂ,

ಕಳ್ಳನೊಬ್ಬನನ್ನು ಸೆರೆಹಿಡಿದಿದ್ದರೂ, ಸುಪ್ರಸಿದ್ಧ ಪತ್ತೇದಾರಿಗಳಾದ ರಾಕಾ ಚಂದ್ರ ಮತ್ತು ಸುಖಾನಂದರು ತಾವಾಗಿಯೇ ಸಹಾಯವನ್ನು ಮಾಡಲು ಬಂದರೂ ತನ್ನ ಸುಖಕ್ಕೆ ವಿಘ್ನವು ಬಂದದ್ದಕ್ಕಾಗಿ ಮನಸ್ಸಿನಲ್ಲಿ ಸುರೇಂದ್ರ ನಾಥನು ತುಂಬಾ ವ್ಯಥೆಪಟ್ಟನು ಕಳ್ಳರಲ್ಲೊಬ್ಬನು ಸೆರೆಸಿಕ್ಕಿ, ಅವನನ್ನು ನೂರಾರು ಯುಕ್ತಿಗಳಿಂದ ಬಿಡಿಸಲು ಬೇರೆ ಕಳ್ಳರು ಪ್ರಯತ್ನಿಸುತ್ತಿರುವ ರೆಂದು ತಿಳಿದೂ, ರಾತ್ರಿಕಾಲದಲ್ಲಿ ನೆಲಮನೆಗೆ ತಾನು ಹೋದುದರಿಂದ ಈ ಅನರ್ಥವೆಲ್ಲವೂ ಒದಗಿತೆಂದು ತಿಳಿದು ಪರಿತಪಿಸಿದನು. ಅಲ್ಲಿಂದ ಸುರೇಂದ್ರ ನಾಥನು ಮೇಲೆ ಬಂದು ಇನ್ಸ್ಪೆಕ್ಟರರ ಹತ್ತಿರ ಹೇಳಿದನು: "ಇನ್ಸ್ಪೆಕ್ಟರರೇ, ನೀವಿನ್ನು ಪೋಲೀಸರೊಂದಿಗೆ ಹೊರಟು ಹೋಗಿರಿ ನನ್ನ ಅದೃಷ್ಟವು ಹಾಳಾಗಿತ್ತು. ಪಾಪ ನೀವೇನು ಮಾಡೀರಿ. ಇನ್ನು ನಮಗೆ ನಿಮ್ಮ ಆವಶ್ಯ ಕತೆಯಿಲ್ಲ. ಯಾವ ಕಾರ ಸಾಧನೆಗಾಗಿ ನಿಮ್ಮ ಸಹಾಯವನ್ನು ಕೋರಿದೆನೋ ಆ ಕಾರ್ಯವೀದಿನ ಬುಡಮುಟ್ಟ ಹಾಳಾಯಿತು. ಮೋಹನನೀರೀತಿ ವಂಚಿಸಿ ದ್ದರಿಂದ ನನಗಾಗಿ ಅಪಯಶಸ್ಸನ್ನು ನೀವು ಹೊರಬೇಕಾಯಿತು·ಕ್ಷಮಿಸಿ."

ಇನ್ಸ್ಪೆಕ್ಟರ್ ರಘುರಾಮನ್‌ರವರು "ಈ ಅಪಕೀರ್ತಿಯೇನೂ ಹೊಸದಲ್ಲ. ನೂರರ ಜೊತೆಗೆ ಇದು ನೂರೊಂದನೇಯದ್ದಾಗಿ ಸೇರಿತು" ಎಂದು ಮನಸ್ಸಿನಲ್ಲಿ ತಿಳಿದು "ನಮಸ್ಕಾರ ಹೋಗಿ ಬರುತ್ತೇನೆ" ಎಂದು ನುಡಿದು ಪೋಲೀಸರೊಡನೆ ಹೊರಟು ಹೋದರು.

---

## ಸಪ್ತಮ ಗುಚ್ಛ.

ಯಾವ ದಿನ ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಮೋಹನನಿಂದ ಸುರೇಂದ್ರನಾಥನು ವಂಚಿಸಲ್ಪಟ್ಟಿದ್ದನೋ ಅದೇದಿನ ಸಾಯಂಕಾಲ ಐದು ಗಂಟೆಯ ಸಮಯದಲ್ಲಿ ಯಮುನಾಪುರಿಯಲ್ಲಿ ನಡೆದ ಒಂದು ವಿಷಯವನ್ನು ಈಗ ತಿಳಿಸುತ್ತೇವೆ. ಸೂರ್ಯನಸ್ತಮಿಸುವದಕ್ಕಿಂತ ಅರ್ಧಗಂಟೆ ಅಥವಾ ಒಂದು ಗಂಟೆಯ ಮುಂಚೆ ಪಟ್ಟಣದ ಬೀದಿಗಳಲ್ಲಿ ಸೇರುವ ಜನಸಂದಣಿ ಯನ್ನು ವರ್ಣಿಸಲಸಾಧ್ಯ. ಎಂದಿನಂತೆ ಮೋಟಾರುಗಳೂ, ಸೈಕಲ್ಲುಗಳೂ

ಜಟಕಾ ಬಂಡಿಗಳೂ ಎಡೆಬಿಡದೆ ಹೋಗುತಲಿದ್ದ ಫ್ರೇಜರೀರೋಡಿನಲ್ಲಿ ಕಾಲು ನಡಿಗೆಯಿಂದ ಸಂಚರಿಸತಕ್ಕ ಜನರ ಮಧ್ಯದಲ್ಲಿ ಭರ್ಜರೀ ಪೋಷಾಕನ್ನು ಧರಿಸಿದ ಮುಸಲ್ಮಾನರಿಬ್ಬರು ಎಡಬಲದ ಪಾರ್ಶ್ವಗಳಲ್ಲಿ ಇರುವ ದೊಡ್ಡ ದೊಡ್ಡ ಮನೆಗಳನ್ನು ನೋಡುತ್ತಾ ಹೋಗುತಲಿದ್ದರು. ಹೀಗೆಯೇ ಸ್ವಲ್ಪ ದೂರ ಹೋಗಿ ಒಂದು ಮನೆಯ ಮುಂಭಾಗದಲ್ಲಿ ನಿಂತರು. ಆ ಮನೆಯ ನಂಬರು ಮುನ್ನೂರಾಗಿತ್ತು. ತಮ್ಮ ಇಚ್ಛಿತ ಸ್ಥಳಕ್ಕೆ ಬಂದೆವೆಂದು ಭಾವಿಸುತ್ತಾ ಆ ಇಬ್ಬರು ಮುಸಲ್ಮಾನರು ಆ ಗೃಹದ ಬಾಗಿಲಿಗೆ ಹೋದರು.

ದ್ವಾರದ ಬಳಿಯಲ್ಲಿ ದ್ವಾರರಕ್ಷಕನೊಬ್ಬನು ಇತ್ತಿಂದತ್ತ ಅತ್ತಿಂದಿತ್ತ ತಿರುಗಾಡುತ್ತಿದ್ದನು. ಬಾಗಿಲಿನವರೆಗೆ ಆ ಮುಸಲ್ಮಾನರಿಬ್ಬರು ಬಂದರೂ ದ್ವಾರಪಾಲಕನು ಅವರನ್ನು ವಿಚಾರಿಸಲೇ ಇಲ್ಲ. ಪ್ರಥಮ ಮುಸಲ್ಮಾನನು ಆತನ ಹತ್ತಿರ ಬಂದು, "ರಾಯರಿದ್ದಾರೆಯೆ," ಎಂದು ಕೇಳಿದನು.

ದ್ವಾರಪಾಲಕ—ಯಾವ ರಾಯರು? ರಘುನಂದನರಾಯರೊ? ಪಶುಪತಿರಾಯರೊ? ಹಯವದನರಾಯರೊ? ದಾಮೋದರರಾಯರೋ? ಯಾರು?

ಪ್ರಥಮ ಮುಸಲ್ಮಾನನು ನಾಲ್ಕು ಜನ ರಾಯರ ಹೆಸರನ್ನು ಕೇಳಿದರೂ, ತನಗೆ ಬೇಕಾದ ಹೆಸರು ಆ ನಾಮಾವಳಿಯಲ್ಲಿ ಬರದೇ ಇದ್ದದ್ದನ್ನು ನೋಡಿ ಸ್ವಲ್ಪ ಶಂಕಿತನಾದನು. ಅಷ್ಟರಲ್ಲಿ ದ್ವಿತೀಯ ಮುಸಲ್ಮಾನನು ಹೇಳಿದನು: "ಪಶುಪತಿರಾಯರು. ಅವರಿರುವರೇ?

ದ್ವಾರಪಾಲ—ಯಾವ ರಾಯರೂ ಈಗಿಲ್ಲ. ನಿನ್ನೆ ದಿನವೇ ಎಲ್ಲರೂ ಹೊರಟು ಹೋದರು.

ಪ್ರಥಮ ಮುಸಲ್ಮಾನ—ಹಾಗಾದರೆ ಈಗ ಯಾರೂ ಇಲ್ಲವೇನು?

ದ್ವಾರಪಾಲ—ಇಲ್ಲ. ಅವರನ್ನು ನೀವು ಯಾಕೆ ವಿಚಾರಿಸುತ್ತಿರುವಿರಿ? ಅವರಿಂದ ನಿಮಗೇನಾಗಬೇಕು?

ಪ್ರಥಮ—ಸ್ವಲ್ಪ ಮಾತನಾಡುವುದಿತ್ತು.

ದ್ವಾರಪಾಲ—ನಿಮ್ಮ ಪರಿಚಯವು ನನಗೆ ಸಿಗಲಿಲ್ಲ. ನಿಮಗೆಲ್ಲಿ?

ಪ್ರಥಮ— ನಮಗೆ ಸರದಾರ್ ಪೇಡೆ.

ದ್ವಾರಪಾಲ—ಅಲ್ಲಿ ಏನು ಉದ್ಯೋಗದಲ್ಲಿರುವಿರಿ?

ಪ್ರಥಮ—(ಈ ವಿಚಾರವೆಲ್ಲಾ ಇವನಿಗೆ ಯಾಕ ಎಂದುಕೊಂಡು) ಅಲ್ಲಿ ಜವಳಿ ಅಂಗಡಿಯನ್ನಿಟ್ಟದ್ದೇವೆ.

ದ್ವಾರಪಾಲ—ರಾಯರು ನಿಮ್ಮಿಂದ ಬಟ್ಟೆಯನ್ನು ಕೊಂಡುಕೊಂಡಿರುವರೋ?

ಪ್ರಥಮ—ಹೌದು. ಇನ್ನೂ ಸ್ವಲ್ಪ ಬೇಕೆಂದು ಹೇಳಿದ್ದರು.

ದ್ವಾರಪಾಲ—ನಿಮ್ಮ ಹತ್ತಿರ ಅವರು ಬೇಕೆಂದು ಹೇಳಿದುದು ಯಾವಾಗ?

ಪ್ರಥಮ—ಮೊನ್ನೆ ಸಾಯಂಕಾಲ.

ದ್ವಾರಪಾಲ—ಇದೇನು ಹೀಗೆ ಹೇಳುತ್ತೀರಿ. ನೀವು ಸ್ವಲ್ಪ ಮರೆತಿರುವಂತೆ ತೋರುತ್ತದೆ. ಆ ರಾಯರು ಹೊರಟು ಹೋಗಿ ನಾಲ್ಕು ದಿನಗಳಾದವು.

ಬಾಗಿಲು ಕಾಯುವವನೊಡನೆ ಮಾತಿಗೆ ತಪ್ಪಿದ್ದಕ್ಕೆ ಇಬ್ಬರು ಮುಸಲ್ಮಾನರೂ ಲಜ್ಜೆ ಪಟ್ಟರು. ಅದನ್ನು ಹೊರಗೆ ತೋರಿಸದೆ ದ್ವಿತೀಯ ಮುಸಲ್ಮಾನನು ಹೇಳಿದನು

"ಅವರಿನ್ನು ಯಾವಾಗ ಬರುವರು?"

ದ್ವಾರಪಾಲ—ಅವರೀಗಲೇ ಬರುವಂತೆ ತೋರುವುದಿಲ್ಲ.

ಪ್ರಥಮ—ಈಗ ಯಾರೂ ಮನೆಯಲ್ಲಿಲ್ಲವೇನು? ಸ್ವಲ್ಪ ಒಳಗೆ ಹೋಗಿ ನೋಡಿಕೊಂಡು ಬಾ!

ದ್ವಾರಪಾಲ—ಸ್ವಲ್ಪ ಹೊತ್ತಿನಲ್ಲಿಯೇ ಬರಬಹುದು. ಬನ್ನಿ. ಒಳಗೆ ಬಂದು ಕುಳಿತುಕೊಳ್ಳಿರಿ ಯಾಕೆ ನಿಂತೇ ಇರುವಿರಿ. ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿರುವಷ್ಟರಲ್ಲಿಯೇ ಬರುವರು ಒಳಗೆ ಬನ್ನಿರಿ.

ಪ್ರಥಮ-ಇಲ್ಲ. ಈಗ ಇಲ್ಲಿ ಹೆಚ್ಚು ಹೊತ್ತಿರಲು ನಮಗೆ ಅವಕಾಶವಿಲ್ಲ. ಕೆಲವು ಬೇರೆ ವಿಚಾರಗಳನ್ನು ಅವರ ಹತ್ತಿರ ತಿಳಿಸುವುದಕ್ಕಾಗಿ ಬಂದೆವು. ಆಗಲಿ, ಇನ್ನೊಂದು ಬಾರಿ ಬಂದು ನೋಡುವೆವು.

ದ್ವಾರಪಾಲ—ಹಾಗಾದರೆ ರಾಯರು ಬಂದನಂತರ ಅವರ ಹತ್ತಿರ ಏನನ್ನಾದರೂ ತಿಳಿಸಬೇಕೇ? ಇದ್ದರೆ ಹೇಳಿ?

ಪ್ರಥಮ—ನಾವು ಬಂದು ಹೋಗಿದ್ದೇವೆಂದು ಹೇಳು.

ದ್ವಾರಪಾಲ—ಪುನಃ ಯಾವಾಗ ಇಲ್ಲಿಗೆ ಬರುವಿರಿ?

ಪ್ರಥಮ—ನಾಳೆ. ಎಂದು ಗೌರವದಿಂದ ಹೇಳಿ ಪ್ರಥಮ ಮುಸಲ್ಮಾನನು ತನ್ನ ಸಂಗಡಿಗನೊಡನೆ ಅಲ್ಲಿಂದ ವೇಗವಾಗಿ ಮುಂದೆ ಹೊರಟನು. ದಾರಿಯಲ್ಲಿ ಸಿಕ್ಕಿದ ಪೋಷ್ಟ ಆಫೀಸಿನೊಳಗೆ ಇಬ್ಬರೂ ನಡೆದರು. ಪೋಸ್ಟ ಮಾಸ್ಟರರಿಗೆ ತಮ್ಮ ಗುರುತನ್ನು ತೋರಿಸಿ ಪ್ರೈಜರೀರೋಡಿನಲ್ಲಿ ಕಾಗದಗಳನ್ನು ಪಾವತಿ ಮಾಡತಕ್ಕವನನ್ನು ಕರೆಯಿಸಿ ಕೇಳಿದರು ಆತನು "ರಜನೀಕಾಂತ ನೆಂಬುವವರನ್ನು ತಾನು ೩೦೦ನೇ ನಂಬರಿನ ಗೃಹದಲ್ಲಿ ನೋಡಿರಲಿಲ್ಲವೆಂದೂ, ಬೇರೆ ಯಾರನ್ನೂ ಹೆಚ್ಚಾಗಿ ತಾನು ಅಲ್ಲಿ ನೋಡಿಲ್ಲವೆಂದೂ, ಆದರೆ 'ರಜನೀ ಕಾಂತ' ಎಂಬ ವಿಳಾಸಕ್ಕೆ ಬಂದಿರುವ ಎಷ್ಟೋ ಕಾಗದಗಳನ್ನು ಅಲ್ಲಿ ಕೊಟ್ಟು ಬಂದಿರುವೆನೆಂದೂ," ಹೇಳಿದನು.

ಪ್ರಕೃತರಾದ ಈ ಮುಸಲ್ಮಾನರಿಬ್ಬರಲ್ಲಿ ಒಬ್ಬನು ರಾಕಾಚಂದ್ರನೆಂದೂ ಇನ್ನೊಬ್ಬನು ಸುಖಾನಂದನೆಂದೂ ವಾಚಕರು ಊಹಿಸಿರಬಹುದಲ್ಲವೇ? ಆ ದಿನ ಪ್ರಾತಃಕಾಲ ಸುರೇಂದ್ರನಾಥನ ಗೃಹದಲ್ಲಿ ಆತನ ಪುತ್ರಿಯಾದ ಕೋಮಲೆಯು ಏಕಾಗ್ರತೆಯಿಂದ ವಿಳಾಸವನ್ನು ಬರೆಯುತ್ತಿದ್ದಾಗ ಆ ವಿಳಾಸ ವನ್ನು ನೋಡಿ ರಾಕಾಚಂದ್ರನು ಆ ಸ್ಥಳವನ್ನು ಪರೀಕ್ಷಿಸಲು ಈಗ ಮಿತ್ರ ನೊಡನೆ ಹೋಗಿ, ಅಲ್ಲಿ ದ್ವಾರಪಾಲಕನಂತೆ ನಿಂತಿದ್ದ ಮೋಹನನ ಮಿತ್ರನಾದ ಲಕ್ಷ್ಮೀಶನೆಂಬವನಿಂದ ನಿರಾಶೆಪಡಿಸಲ್ಪಟ್ಟು ಹಿಂದಿರುಗಿ ಬಂದಿದ್ದನು. ಮಿತ್ರ ರಿಬ್ಬರೂ ಬಿಡಾರವನ್ನು ಸೇರಿದರು. ಸುಖಾನಂದನ ಭಾವನು ಒಂದು ಕಾಗದವನ್ನು ಕೊಟ್ಟು "ಇದನ್ನೀಗ ಮೋಟಾರಿನಲ್ಲಿ ಒಬ್ಬ ಪುರುಷನು ಇಲ್ಲಿಗೆ ಬಂದು ಕೊಟ್ಟು ಹೋದನು" ಎಂದು ಹೇಳಿದನು. ರಾಕಾಚಂದ್ರನು ಆ ಕಾಗದವನ್ನು ಓದಿದನು.

"ಸಾಹೇಬರಿಬ್ಬರಿಗೂ ನಮಸ್ಕಾರವಿರಲಿ. ನೀವಿಬ್ಬರು ಸಾಹಸಪಟ್ಟು ಬಂದರೂ ನಿಮ್ಮ ಕಾರ್ಯವು ನೆರವೇರದೆ ವ್ಯರ್ಥವಾದುದಕ್ಕಾಗಿ ನಿರಾಶರಾಗಿ ಹಿಂದಿರುಗುವಿರೇನು? ಬೇಡ. ಹಾಗೆ ನಿರಾಶರಾಗಬಾರದು. ಪುನಃ ಪ್ರಯತ್ನಿ ಸಿರಿ. ಸುರೇಂದ್ರನಾಥನ ಮನೆಯಲ್ಲಿ ಈ ದಿನ ಪ್ರಾತಃಕಾಲದಲ್ಲಿ ಯಾರನ್ನು

ಹಿಡಿದಿರುವಿರಿ? ಅಯ್ಯೋ, ನಿಮ್ಮ ಭ್ರಾಂತಿಗೆ ನಾನೇನು ಹೇಳಲಿ. ಅದಿರಲಿ, ನೀವು ಯಾವಾಗ ತಿರುಗಿ ಇಲ್ಲಿಗೆ ಬರವಿರಿ? ರಾಯರು ಬಂದಿರುವರು. ನೀವು ತಿಳಿಸಬೇಕಾದ ವಿಷಯವನ್ನು ತಿಳಿಸಲು ಕೂಡಲೆ ಇಲ್ಲಿಗೆ ಬರುವಿರಾಗಿ ನಂಬಿ ರುವೆವು. ಇತಿ..........."

ಆ ಪತ್ತೆದಾರರಿಬ್ಬರಿಗೂ ಮೇಲಿನ ಕಾಗದದಿಂದ ಅತಿಯಾಗಿ ಆಶ್ಚರ್ಯ. ವಾಯಿತು. ಸುಖಾನಂದನು ಹೇಳಿದನು:—"ಈ ಕಾಗದವು ಮೋಹನ ನದ್ದೇ ಇರಬಹುದಲ್ಲವೇ?"

ರಾಕಾಚಂದ್ರ—ಅವನಿಗಲ್ಲದೆ ಇನ್ನಾರಿಗೆ ಇಂತಹ ಧೈರ್ಯವು? ಇಲ್ಲಿಗೆ ನಾವು ಬಂದು ಅವನ ಸ್ಥಳವನ್ನು ಹುಡುಕುವದಕ್ಕಿಂತ ಮುಂಚಿತವಾಗಿ ಅವನೇ ನಮ್ಮ ಬಿಡಾರವನ್ನು ಹುಡುಕಿ ಬಿಟ್ಟನು. ನಾವು ಎಷ್ಟು ಗುಟ್ಟಾಗಿ ಇಲ್ಲಿಗೆ ಬಂದರೂ ಪ್ರಯೋಜನವಾಗಲಿಲ್ಲ.

ಸುಖಾನಂದ—ಆ ಗೃಹದ ದ್ವಾರಪಾಲನು ಆ ರೀತಿ ಮಾತನಾಡುತ್ತಿ ರುವಾಗಲೇ ನಾನು ಸಂಶಯಪಟ್ಟೆನು. ಹಾಗಿಲ್ಲದೆ ಇದ್ದಿದ್ದರೆ ಅಷ್ಟು ಮಾತ ನಾಡಲು ಅವನು ಹಿಂಜರಿಯದೆ ಇರುತ್ತಿರಲಿಲ್ಲ. ಆತನು ಸ್ವಲ್ಪವೂ ಹಿಂದೆಗೆ ಯದೆ ನಮ್ಮನ್ನು ಎಷ್ಟು ಹಾಸ್ಯಮಾಡಿದನು! ನನಗಾಕಾಲದಲ್ಲಿ ತುಂಬಾ ಸಿಟ್ಟು ಬಂದಿತ್ತು; ಆದರೆ ಪ್ರಯೋಜನವಿಲ್ಲೆಂದು ಸುಮ್ಮನಿದ್ದೆನು.

ರಾಕಾಚಂದ್ರ—ನಾವಿಷ್ಟು ಗುಪ್ತವಾಗಿ ಇದ್ದರೂ ನಮ್ಮ ಬಿಡಾರವನ್ನು ನೋಡಿದ ಮೇಲೆ ಮುಂದೆ ಇಲ್ಲಿ ನಮ್ಮ ಯಾವ ಪ್ರಯತ್ನಕ್ಕೂ ಜಯವು ಸಿಕ್ಕುವಂತೆ ತೋರುವದಿಲ್ಲ.

ಸುಖಾನಂದ---ನಾವು ಸುರೇಂದ್ರನಾಥನ ಭವನದಲ್ಲಿ ಪ್ರಕಟವಾದುದೇ ಪ್ರಮಾದವಾಯಿತು. ಆ ಸಮಯದಲ್ಲಿಯೇ, ಮೋಹನನೋ, ಅಥವಾ ಆತನ ಮಿತ್ರರಲ್ಲೊಬ್ಬನೊ ನಮ್ಮನ್ನು ಗುರುತಿಸಿ, ನಾವು ಕೂಡಲೆ ಅಲ್ಲಿಂದ ಬಿಡಾರಕ್ಕೆ ಹೋಗುತ್ತಿರಲು, ನಮ್ಮನ್ನು ಹಿಂಬಾಲಿಸಿ ಬಂದು ಈ ನಮ್ಮ ಬಿಡಾರವನ್ನು ನೋಡಿ ಹೋಗಿರಬಹುದು.

ರಾಕಾಚಂದ್ರ—ಹೌದು. ಸುರೇಂದ್ರನಾಥನ ಮನೆಯಲ್ಲಿ ನಾವು ಹಿಡಿ ದಿರುವವನ ವಿಷಯದಲ್ಲಿಯೂ ನನಗೀಗ ಸಂದೇಹವು ತಲೆದೋರುತ್ತಿದೆ.

ಸುಖಾನಂದ—ಸೆರೆ ಸಿಕ್ಕಿರುವವನು ಯಾರೇ ಆದರೂ ಆಗಿರಲಿ. ಆತನ ಬಾಯಿ ಬಿಡಿಸುವುದೇ ಕಷ್ಟವಾಗಿದೆ. ಇದಕ್ಕೇನು ಮಾಡೋಣ? ಸುರೇಂದ್ರನಾಥನ ಮನೆಯಲ್ಲಿಯೇ ಅವನನ್ನಿಟ್ಟಿರುವುದು ಸುರೇಂದ್ರನಾಥನಿಗೇ ಕೆಡುಕನ್ನು ಮಾಡಿದಂತಾಗುವುದು.

ರಾಕಾಚಂದ್ರ—ಸುರೇಂದ್ರನಾಥನ ನಡತೆಯು ಚೆನ್ನಾಗಿಲ್ಲ. ಆದಕ್ಕಾಗಿಯೇ ಮೋಹನನು ಸುರೇಂದ್ರನಾಥನ ಬೆನ್ನಟ್ಟಿರುವನು. ಮೋಹನನು ಅನ್ಯಾಯ ಮಾರ್ಗದಲ್ಲಿ ಎಂದಿಗೂ ನಡೆಯಲಾರನೆಂದು ಅವನ ಕಾರ್ಯಗಳಿಂದ ನನಗೆ ದೃಢನಿಶ್ಚಯವಿದೆ. ಆತನ ಚಾತುರ್ಯವನ್ನು ನೋಡಲು ನನಗೆ ತುಂಬಾ ಇಚ್ಛೆ. ಆ ಸುರೇಂದ್ರನಾಥನಿಗೆ ಕೇಡು ಒದಗಿದರೂ ಚಿಂತೆಯಿಲ್ಲ.

ಸುಖಾನಂದ—ಆದರೂ ಸೆರೆ ಸಿಕ್ಕಿರುವವನು ಸುರೇಂದ್ರನಾಥನ ಮನೆಯಲ್ಲಿರುವುದು ಯುಕ್ತವಲ್ಲ. ಅಲ್ಲಿಗೆ ನಾವು ಹೋಗಿ ಅವನ ಬಾಯಿ ಬಿಡಿಸುವುದು ನಮಗನುಕೂಲವಾಗಿಲ್ಲ.

ರಾಕಾಚಂದ್ರ—ಹಾಗಾದರೆ ನಾಳೆ ಪ್ರಾತಃಕಾಲ ಸುರೇಂದ್ರನಾಥನ ಮನೆಗೆ ಹೋಗಿ, ಕಳ್ಳನ ಸ್ಥಿತಿಯನ್ನು ಪರಿಶೀಲಿಸಿ, ಅನಂತರ ಆತನನ್ನು ಪೋಲೀಸ್ ಸ್ಟೇಷನ್ನಿಗೇ ಒಯ್ಯಲು ಪ್ರಯತ್ನಿಸೋಣ.

ಸುಖಾನಂದ—ಮೋಹನನೀಗ ನಮ್ಮನ್ನು ಗುರುತಿಸಿದ್ದರಿಂದ ಮುಂದೆ ನಮ್ಮ ಕಾರ್ಯವು ಹೆ ಗೆ ಸಾಗುವುದು?

ರಾಕಾಚಂದ್ರ—ನಾಳೆ ಆ ಕಳ್ಳನಿಂದ ಹೆಚ್ಚಿನ ವಿಚಾರವು ತಿಳಿದು ಬಂದರೆ ಅನಂತರ ನಾವಿಲ್ಲಿ ಪ್ರಸಿದ್ಧ ರೀತಿಯಿಂದ ನಿಂತು ಯತ್ನಿಸೋಣ. ಹಾಗೇನೂ ಕಳ್ಳನಿಂದ ತಿಳಿಯದೆ ಹೋದರೆ "ಬಂದ ದಾರಿಗೆ ಸುಂಕವಿಲ್ಲ" ವೆಂದು ತಿಳಿದು ಸುವರ್ಣನಗರಕ್ಕೆ ಹೊರಟು ಹೋಗೋಣ. ಕೆಲವು ದಿನಗಳ ಮೇಲೆ ತಿರುಗಿ ಗುಪ್ತವಾಗಿ ಇಲ್ಲಿಗೆ ಬರೋಣ.

ರಾಕಾಚಂದ್ರನ ಉಪಾಯವು ಸುಖಾನಂದನಿಗೂ ಸಮ್ಮತವಾಯಿತು; ಆದರೆ ಅದೇ ದಿನ ರಾತ್ರಿಯಲ್ಲಿ ಹಿಂದೆ ವರ್ಣಿಸಿದಂತೆ ಸುರೇಂದ್ರನಾಥನ ಮನೆಯಲ್ಲಿ ಗಲಭೆಯಾಗಿ ಸೆರೆ ಸಿಕ್ಕಿದ ಕಳ್ಳನು ಬಿಡಿಸಲ್ಪಟ್ಟು ಸುರೇಂದ್ರನಾಥನು ವಂಚಿತನಾಗಿದ್ದನು. ಪ್ರಾತಃಕಾಲದಲ್ಲಿ ರಾಕಾಚಂದ್ರನು ಸುರೇಂದ್ರನಾಥನ

ಮನೆಯಲ್ಲಿ ನಡೆದ ವಿಚಾರವನ್ನು ತಿಳಿದು ತಾನು ಯೋಚಿಸಿದಂತೆ ಸುಖಾನಂದನೊಡನೆ ಸುವರ್ಣನಗರಕ್ಕೆ ಹೊರಟು ಹೋದನು.

† † † † †

ಈ ದಿನ ಸೋಮವಾರ. ಮಧ್ಯಾಹ್ನ ಹತ್ತು ಗಂಟೆಯ ಸಮಯದಲ್ಲಿ ಸುರೇಂದ್ರನಾಥನ ಪುತ್ರಿ ಕೋಮಲೆಯು ಎಂದಿನಂತೆ ಹೈಸ್ಕೂಲಿಗೆ ಓದುವುದಕ್ಕೆ ಹೋಗಲು ಶೃಂಗರಿಸಿಕೊಂಡು, ಪುಸ್ತಕಗಳನ್ನು ತೆಗೆದುಕೊಂಡು, ಸುಮತಿಯ ಕಿವಿಯಲ್ಲಿ ಏನನ್ನೋ ಗುಟ್ಟಾಗಿ ಹೇಳಿ, ಹೊರಟು, ಹೈಸ್ಕೂಲಿಗೆ ಹೋಗುವ ಮಾರ್ಗವನ್ನು ಬಿಟ್ಟು, ಫ್ರೇಜರೀರೋಡಿಗೆ ಹೊರಟಳು. ಅತ್ತಿತ್ತ ನೋಡದೆ ನೆಟ್ಟಗೆ ೧೫೫ನೇ ನಂಬರಿನ ಮನೆಯ ಕಡೆಗೆ ಹೋದಳು ದ್ವಾರದಲ್ಲಿ ಲಕ್ಷ್ಮೀಶನಿದ್ದನು. ಕೋಮಲೆಯು ಹಿಂದೆ ಮೋಹನನು ಕೊಟ್ಟಿದ್ದ ಉಂಗುರವನ್ನು ಲಕ್ಷ್ಮೀಶನಿಗೆ ತೋರಿಸಿದಳು. ಲಕ್ಷ್ಮೀಶನು ಕೋಮಲೆಯನ್ನು ಗುರುತಿಸಿ ಪ್ರಿಯನಾಥನ ಹತ್ತಿರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟು ತಾನು ಅಲ್ಲಿಂದ ಹೊರಟು ಹೋದನು.

ಕೋಮಲೆಯು ಕೋಣೆಯೊಳಗೆ ಬಂದಾಗ ಪ್ರಿಯನಾಥನು ಕೃಷ್ಣಾಜಿನದ ಮೇಲೆ ಕುಳಿತು ಭಾಗವತವನ್ನು ಪಠಿಸುತಲಿದ್ದನು. ಕೋಮಲೆಯನ್ನು ಒಂದು ಅಲ್ಲಿದ್ದ ಮಣೆಯ ಮೇಲೆ ಕುಳಿತುಕೊಳ್ಳಲು ಸೂಚಿಸಿದನು; ಆದರೆ ಪ್ರಿಯನಾಥನ ಮಾತು ಕೋಮಲೆಗೆ ಕೇಳಿಸಿತೋ ಇಲ್ಲವೋ ತಿಳಿಯಲಿಲ್ಲ ಕೋಮಲೆಯು ಗೋಡೆಗೆ ಕಿವಿ ಆನಿಸಿ ನಿಂತೇ ಇದ್ದಳು. ಕೋಮಲೆಯ ಮನಸ್ಸು ಆ ಕಾಲದಲ್ಲಿ ಅಲ್ಲಿ ಇರಲಿಲ್ಲ ಮೋಹನನನ್ನು ನೋಡಿ ತನ್ನ ಮನೋಭಿಲಾಷೆಯನ್ನು ತಿಳಿಸಿ ಯಾವಾಗ ಆತನ ಪ್ರೀತಿಗೆ ಪಾತ್ರಳಾದೇನು?" ಎಂಬ ಲವಲವಿಕೆಯಿಂದ ಬಂದಿದ್ದ ಕೋಮಲೆಯು ಈಗ ಪ್ರಿಯನಾಥನ ಸೂಚನೆಯನ್ನು ಹೇಗೆ ಸಮ್ಮತಿಸಿಯಾಳು?

"ದ್ವಾರಪಾಲಕನು ತನ್ನನ್ನು ಮೋಹನನ ಹತ್ತಿರವೇ ಕರೆದುಕೊಂಡು ಹೋಗುವನು" ಎಂಬ ಆಶೆಯಿಂದ ಕೋಮಲೆಯು ಲಕ್ಷ್ಮೀಶನ ಹತ್ತಿರ ಉಂಗುರವನ್ನು ಮಾತ್ರ ತೋರಿಸಿದ್ದಳಲ್ಲದೆ ಇನ್ನೇನನ್ನೂ ಹೇಳಿರಲಿಲ್ಲ. ಈಗಲಾದರೂ ಆತನು ಅಲ್ಲಿಯೇ ಇದ್ದಿದ್ದರೆ "ನನ್ನನ್ನು ಮೋಹನನಿರುವಲ್ಲಿಗೆ

ಕರೆದುಕೊಂಡು ಹೋಗು'' ಎಂದು ಹೇಳಿಬಿಡುತ್ತಿದ್ದಳು; ಆದರೆ ಆತನೂ ಅಲ್ಲಿ ಇರಲಿಲ್ಲ. ಪ್ರಿಯನಾಥನೂ ಕೂಡ "ಮಣೆಯ ಮೇಲೆ ಕುಳಿತುಕೋ" ಎಂಬುದನ್ನು ಮಾತ್ರ ಸೂಚಿಸಿದನೆ ಹೊರತು ಇನ್ನೇನನ್ನೂ ಹೇಳಲಿಲ್ಲ. ಪುಸ್ತಕವನ್ನೇ ನೋಡುತ್ತಾ ಪ್ರಿಯನಾಥನು ಕುಳಿತುಬಿಟ್ಟಿದ್ದನು. ಇನ್ನು ಕೋಮಲೆಯಿಂದ ಸಹಿಸಲಾಗಲಿಲ್ಲ.

"ಇದೇನು? ನಾನಿಲ್ಲಿ ಸುಮ್ಮನೆ ನಿಂತು ಏನನ್ನು ಮಾಡಬೇಕು" ಎಂದು ದೈನ್ಯ ಮತ್ತು ದುಃಖದಿಂದ ಯುಕ್ತವಾದ ಸ್ವರದಿಂದ ನುಡಿದಳು.

ಪ್ರಿಯನಾಥನು ಪುಸ್ತಕ ಓದುವುದನ್ನು ಬಿಟ್ಟು ಹಸನ್ಮುಖನಾಗಿ ಉತ್ತರವಿತ್ತನು:—"ನಿಂತಿರಲು ಯಾರು ಹೇಳಿರುವರು! ಕುಳಿತುಕೊಳ್ಳುವಂತೆ ನಾನು ಮೊದಲೇ ಸೂಚಿಸದೆನಲ್ಲವೆ? ಮಣೆಯ ಮೇಲೆ ಕುಳಿತುಕೊಳ್ಳಲು ಇಷ್ಟವಿಲ್ಲವೆ? ಅಥವಾ ಅಭ್ಯಾಸವಿಲ್ಲವೆ? ಹಾಗಿದ್ದರೆ ಕುರ್ಚಿಯೊಂದನ್ನು ತರಿಸುತ್ತೇನೆ."

ಕೋಮಲೆಯು ಪ್ರಿಯನಾಥನ ಈ ಮಾರ್ಮಿಕವಾದ ಉತ್ತರದಿಂದ ಸ್ವಲ್ಪ ಕ್ರುದ್ಧಳಾಗಿಯೇ ಹೇಳಿದಳು: —"ಅದೆಲ್ಲ ಹೇಗಾದರೂ ಇರಲಿ. ನನಗೆ ಇಲ್ಲಿ ನಿಂತು ಮಾತನಾಡುವ ಆವಶ್ಯಕತೆಯೂ ಇಲ್ಲ. ಇಚ್ಛೆಯೂ ಇಲ್ಲ."

ಪ್ರಿಯನಾಥ—ಹಾಗಾದರೆ ಎಲ್ಲಿ ನಿಂತು ಮಾತನಾಡುವ ಆವಶ್ಯಕತೆಯು ನಿನಗೆ ಇದೆ? ಅಥವಾ ಇಚ್ಛೆ ಇದೆ?

ಕೋಮಲೆ—ಮೋಹನನ ಹತ್ತಿರ.

ಪ್ರಿಯನಾಥ—ಅದನ್ನಿಲ್ಲಿಯೇ ತಿಳಿಸಬಾರದೇನು? ದೇವಿ, ಕೋಪಿಸಬೇಡ. ಇಲ್ಲಿಯೇ ತಿಳಿಸು.

ಕೋಮಲೆ—ಬೇರೆ ಯಾರ ಹತ್ತಿರವೂ ಅದು ತಿಳಿಸುವಂತಿಲ್ಲ. ಮೋಹನನು ಎಲ್ಲಿರುವನೆಂಬದನ್ನಾದರೂ ಹೇಳು. ನಾನೇ ಅಲ್ಲಿಗೆ ಹೋಗುವೆನು.

ಪ್ರಿಯನಾಥ—ಅವನೀಗ ಇಲ್ಲಿಲ್ಲ. ಹೊರಗೆ ಹೊರಟು ಹೋಗಿರುವನು. ಈ ದಿನ ಬರುವಂತೆಯೂ ತೋರುವದಿಲ್ಲ.

ಕೋಮಲೆ—ಹಾಗಾದರೆ ಮೋಹನನು ನಿನ್ನೆ ದಿನ ನನ್ನ ಹತ್ತಿರವುಳ್ಳನ್ನು ಹೇಳಿದನೇ?

ಪ್ರಿಯನಾಥ—ಕಳ್ಳರಿಗೆ ಸತ್ಯವೇನು! ಅಸತ್ಯವೇನು? ಕೆಲಸವು ಸಾಧಿಸಿದರೆ ತೀರಿತು.

ಕೋಮಲೆ—ಏನು? ನಿಜವಾಗಿಯೂ ಮೋಹನನು ಮನೆಯಲ್ಲಿಲ್ಲವೇ?

ಪ್ರಿಯನಾಥ—ಖಂಡಿತವಾಗಿಯೂ ನಿನಗೀದಿನ ಮೋಹನನು ಸಿಗಲಾರನು. ಅಷ್ಟು ನೋಡಬೇಕೆಂಬ ಕುತೂಹಲವಿದ್ದರೆ ನಾಳೆ ಬರಬಹುದು. ಅಷ್ಟೇನು ಅವಸರ! ಮೋಹನನ ದರ್ಶನವು ಸುಲಭವಲ್ಲ.

ಪ್ರಿಯನಾಥನ ಈ ಮಾತಿನಿಂದ ಕೋಮಲೆಯ ಹೃದಯವು ದುಃಖದಿಂದಲೂ, ಸಂತಾಪದಿಂದಲೂ ತಳಮಳಿಸಿ, ಕುದಿಯಲಾರಂಭಿಸಿತು. ಕೋಪವು ನೆತ್ತಿಗೇರಿತು. ಕ್ರುದ್ಧವಾದ ಸ್ವರದಿಂದ ಹೇಳಿದಳು:—“ಏನು? ಹೀಗೆ ಮೋಹನನು ಆಲೋಚಿಸಿರುವನೇ? ಅವನನ್ನು ನಂಬಿ, ಅವನಲ್ಲಿ ದೃಢವಿಶ್ವಾಸವನ್ನಿಟ್ಟು ಹೆತ್ತ ತಾಯಿತಂದೆಗಳಿಗೂ ವಿರೋಧವನ್ನಾಚರಿಸಿ, ಆತನ ಕಾರ್ಯವು ನೆರವೇರುವಂತೆ ಮಾಡಿದುದಕ್ಕಾಗಿ ಅಬಲೆಯಾದ ನನ್ನಲ್ಲಿ ಇಂತಹ ಮಾತು ಯುಕ್ತವೇ?

ಪ್ರಿಯನಾಥ—ನೀನೀಕಾರ್ಯದಲ್ಲಿ ಸಹಾಯವನ್ನು ಮಾಡದಿದ್ದರೆ ನಮಗಿದನ್ನು ನೆರವೇರಿಸಲು ಸಾಧ್ಯವಿರುತ್ತಿದ್ದಿಲ್ಲವೇನು? ಇದುವರೆಗೆ ನೂರಾರು ಕಾರ್ಯಗಳು ನಡೆಯಲಿಲ್ಲವೇನು? ಆ ಕಾರ್ಯಗಳು ನೆರವೇರಲು ನೀನೇ ಬಂದು ಸಹಾಯವನ್ನು ಮಾಡಿರುವೆಯಾ?

ಕೋಮಲೆ—ನಾನು ಮೋಸ ಹೋದೆನು. ಪತ್ರಿಕೆಗಳಲ್ಲಿ ಸಂಪಾದಕರು ನಿಮ್ಮ ಭೀತಿಗಾಗಿ ನಿಮ್ಮನ್ನು ಸ್ತುತಿಮಾಡಿ ಶ್ಲಾಘಿಸಿ ಬರೆಯುತ್ತಿದ್ದ ಲೇಖಗಳನ್ನು ನೋಡಿ, ನಿಮ್ಮ ಮೋಸವನ್ನು ತಿಳಿಯದೆ ಹೋದೆನು. ಪತ್ರಿಕೆಗಳಲ್ಲಿ ವರ್ಣಿಸಲ್ಪಡುತ್ತಲಿರುವ ನಿಮ್ಮ ಎಲ್ಲಾ ಗುಣಗಳೂ ಸ್ವಾಭಾವಿಕವಾದವುಗಳೇ ಎಂದು ನಾನು ನಂಬಿ ಪಿತೃವಿರೋಧಿಯಾದೆನು. ನನಗೆ ಮೊದಲೇ ತಿಳಿದಿದ್ದರೆ ಚೆನ್ನಾಗಿತ್ತು. ನನ್ನ ಇಚ್ಛಿತವನ್ನು ಮೊದಲೇ ತಿಳಿಸಿದ್ದರೆ ಇನ್ನೂ ನನ್ನ ಮರ್ಯಾದೆಯು ಹೋಗುತ್ತಿತ್ತು. ಏನು ಮಾಡಲಿ ನಂಬಿ ಮೋಸ ಹೋದೆನು. ಕಾರ್ಯವು ಮಿಂಚಿ ಹೋಯಿತು; ಆದರೆ ಈ ಅಬಲೆಯ ಮೃದುಹೃದಯವನ್ನು ಸಂತಪ್ತಗೊಳಿಸಿದ ವಿಶ್ವಾಸಘಾತಕಿಯರಾದ ನಿಮ್ಮನ್ನು

ಮೋಸಗೊಳಿಸದಿದ್ದರೆ ನಾನು ಸ್ತ್ರೀಯೇ ಅಲ್ಲವೆಂದು ಭಾವಿಸಿರಿ. ನಿಮ್ಮ ಈ ಅನ್ಯಾಯಕ್ಕೆ ತಕ್ಕ ಮದ್ದನ್ನು ಅರೆಯುವೆನು.'' ಇಷ್ಟು ಹೇಳುವದರೊಳಗೆ ಆಕೆಯ ಪ್ರಬಲವಾದ ಆಶೆಯು ವ್ಯರ್ಥ ಹೊಂದಿದ್ದಕ್ಕಾಗಿ ದುಃಖ ವಿಮ್ಮಡಿಸಿ ಕಣ್ಣುಗಳಿಂದ ಧಾರೆ ಧಾರೆಯಾಗಿ ನೀರು ಸುರಿಯಲಾರಂಭಿಸಿತು. ಅಷ್ಟು ಹೊತ್ತಿನ ವರೆಗೆ ಪ್ರಿಯನಾಥನು ಮನಸ್ಸನ್ನು ಬಿಗಿಹಿಡಿದು ಮೋಹನನ ಇಚ್ಛೆಯಂತೆ ಹೇಳಬೇಕಾದುದನ್ನೆಲ್ಲ ಹೇಳಿ ಬಿಟ್ಟಿದ್ದನು; ಆದರೆ ಈಗ ಮಾತ್ರ ಕೋಮಲೆಯ ಬಾಷ್ಪೋದಕನ್ನು ಕಂಡು ಮನದಲ್ಲಿ ತುಂಬಾ ವ್ಯಥೆ ಪಟ್ಟು, ಕೋಮಲೆಯನ್ನು ಕುರಿತು—''ದೇವಿ'' ಎಂದನು.

ಹೃದಯದ ತಳಮಳದಿಂದ ಭ್ರಾಂತಳಂತಾದ ಕೋಮಲೆಯು ಥಟ್ಟನೆ ''ಛೀ. ನಿನ್ನ ದೇವಿಯೂ ಬೇಡ. ಗೀವಿಯೂ ಬೇಡ. ಈ ರೀತಿ ಮೋಸಗೊಳಿಸಿದ ನಿಮ್ಮಗಳ ಹೃದಯವು ಸ್ವಲ್ಪವಾದರೂ ಲಜ್ಜಿಪಡುವುದಿಲ್ಲವೇನು? ನಿಮ್ಮ ಬಾಳ್ವೆಗೆ ಬೆಂಕಿ ಹಾಕಲಿ'' ಎಂದು ನುಡಿದು ಪ್ರಿಯನಾಥನ ಮುಖದ ಮೇಲೆ ನೆಟಿಕೆ ಮುರಿದು ಅಲ್ಲಿ ಕ್ಷಣಕಾಲವೂ ನಿಲ್ಲಲು ಮನಸ್ಸು ಬಾರದೆ ಅಲ್ಲಿಂದ ಹೊರಟು ಹೋದಳು.

ಕೋಮಲೆಯು ಮನೆಗೆ ಬಂದೊಡನೆ ಸುಮತಿಯು ಆಕೆಯ ಮುಖವನ್ನು ನೋಡಿ 'ಏನೋ ಅನರ್ಥ ವೊದಗಿರುವುದು' ಎಂದು ತಿಳಿದಳು. ಕೋಮಲೆಯು ಏನನ್ನೂ ಮಾತನಾಡದೆ ನೆಟ್ಟಗೆ ತನ್ನ ಕೋಣೆಯ ಕಡೆಗೆ ಹೋದಳು. ಅಲ್ಲಿ ಹೋಗಿ ಮಂಚದ ಮೇಲೆ ಬಿದ್ದುಕೊಂಡಳು. ಸುಮತಿಯು ಕೊಠಡಿಯ ಕದವನ್ನು ಮುಚ್ಚಿ ಕೋಮಲೆಯ ಹತ್ತಿರದಲ್ಲಿ ಕುಳಿತುಕೊಂಡು ಮೆಲ್ಲಗೆ ಕೇಳಿದಳು. ''ಕೋಮಲೆ! ಏನಾಯಿತು?''

ಕೋಮಲೆ—ಆಗುವದೇನು! ತಪ್ಪಿಗೆ ತಕ್ಕ ಶಿಕ್ಷೆಯು ಆಯಿತು.

ಸುಮತಿ—ಇದೇನು ಹೀಗೆ ಹೇಳುವಿ. ನೀನಾವ ಅಪರಾಧವನ್ನು ಮಾಡಿರುವಿ? ಅದಕ್ಕೆ ಶಿಕ್ಷೆಯಾದರೂ ಏನು?

ಕೋಮಲೆ—ನಾನು ಮೋಹನನ ಗುಣಗಳನ್ನು ನಿಜವೆಂದು ನಂಬಿ, ಗುಣಲುಬ್ಧಳಾಗಿ ತಂದೆಗೆ ವಿರೋಧವನ್ನಾಚರಿಸಿ ಮೋಹನನಿಗೆ ಸಹಾಯವನ್ನು ಮಾಡಿರುವುದೇ ನನ್ನ ಅಪರಾಧವು. ಮೋಹನನು ನನ್ನನ್ನು ತಿರಸ್ಕರಿಸಿರುವುದೇ ಆ ತಪ್ಪಿಗೆ ತಕ್ಕ ಶಿಕ್ಷೆಯು.

ಸುಮತಿ—ಅಷ್ಟು ಗುಣಶಾಲಿಯೆಂದು ಪ್ರಸಿದ್ಧನಾದ ಮೋಹನನು ತಿರಸ್ಕರಿಸಿದನೇ? ನಿನ್ನ ಉಪಕಾರವನ್ನು ಸ್ವಲ್ಪವಾದರೂ ಮನಸ್ಸಿಗೆ ತರದೆ ಮೋಸಪಡಿಸಿದನೇ? ಅಲ್ಲಿ ಏನೇನು ನಡೆಯಿತು ಹೇಳು."

ಕೋಮಲೆಯು ಎಲ್ಲವನ್ನೂ ತಿಳಿಸಿ, "ಮೋಹನನು ಪ್ರಿಯನಾಥನ ಹತ್ತಿರ ನಾನು ಬಂದೊಡನೆ ಹಾಗೆ ಹೇಳಬೇಕೆಂದು ಹೇಳಿರಬಹುದು. ಇಲ್ಲದಿದ್ದರೆ ಪ್ರಿಯನಾಥನು ನಿರ್ದಯೆಯಿಂದ ಹಾಗೆ ಹೇಳಲು ಶಕ್ತನಾಗುತ್ತಿದ್ದಿಲ್ಲ." ಎಂದಳು.

ಸುಮತಿ—ಆದದ್ದು ಆಗಿಹೋಯಿತು. ಇನ್ನದರ ಚಿಂತೆಯಿಂದ ಪ್ರಯೋಜನವೇನು? ತಂದೆಯನ್ನು ಕ್ಷಮಿಸಲು ಪ್ರಾರ್ಥಿಸಿ, ಅವನ ಆಜ್ಞೆಯಂತೆ ಬೃಹನ್ನಾಥನನ್ನೇ ಮದುವೆಯಾದರೇನು?

ಕೋಮಲೆ:—ನನ್ನ ಹೃದಯವನ್ನರಿತ ನೀನೂ ಕೂಡ ನನಗೆ ಹೀಗೆ ಬೋಧಿಸುವಿಯಾ?

ಸುಮತಿ:— ಹಾಗಾದರೆ ಪ್ರಿಯನಾಥನ ಹತ್ತಿರ ಪ್ರತಿಜ್ಞೆ ಮಾಡಿ ಬಂದಂತೆ ಮೋಹನನನ್ನು ಶಿಕ್ಷಿಸಲು ಪ್ರಯತ್ನಿಸುವಿಯಾ?

ಕೋಮಲೆ:—ಸಿಟ್ಟಿನ ಭರದಲ್ಲಿ ಮನಬಂದಂತೆ ಅಲ್ಲಿ ಏನನ್ನೋ ಹೇಳಿಬಿಟ್ಟೆನು; ಆದರೆ ಅದನ್ನೀಗ ನಾನು ನಡೆಸಲು ಯುಕ್ತವೇ? ಸಾಧ್ಯವೆ? ಮನಃಪೂರ್ವಕವಾಗಿ ವರಿಸಿರುವ ಮೋಹನನನ್ನು ಬಿಟ್ಟು ನಾನಿನ್ನು ಯಾರನ್ನೂ ವರಿಸಲಾರೆನು. ನನ್ನ ದುರದೃಷ್ಟವು ಮಾತ್ರ ಆತನೊಡನೆ ಸೇರಲು ಬಿಡಲಿಲ್ಲ. ಅಬಲೆಯಾದ ನನಗೆ ಮುಂದೆ ಏನು ಗತಿ! ಶೀಘ್ರದಲ್ಲಿಯೆ ನಾನು ಮರಣಹೊಂದಿದರೆ ಸುಖವೆನಿಸುವದು. ಇನ್ನಾವ ಗತಿಯೂ ನನ್ನ ಭಾಗಕ್ಕೆ ಇಲ್ಲ" ಎಂದು ಹೇಳುತ್ತಾ ಗಟ್ಟಿಯಾಗಿ ಅತ್ತುಬಿಟ್ಟಳು. ಸುಮತಿಗೂ ದುಃಖ ತಡೆಯಲಾರದೆ ಹೋಯಿತು. ಮುಂದಿನ ಸಕಲ ಮನೋರಥಗಳೂ ಒಂದೇ ಘಳಿಗೆಯಲ್ಲಿ ನಷ್ಟವಾದ್ದಕ್ಕಾಗಿ ಆ ಸಖಿಯರಿಬ್ಬರೂ ಬಹುಕಾಲದ ವರೆಗೆ ಬಹು ಪರಿಯಿಂದ ಪರಿತಪಿಸಿದರು.

ಆ ದಿನ ಸಂಜೆಯ ನಾಲ್ಕೂವರೆ ಗಂಟೆಯ ಸಮಯದಲ್ಲಿ ಮನೆಯ ಮುಂಭಾಗದಲ್ಲಿರುವ ಉದ್ಯಾನವನದಲ್ಲಿ ಸಖಿಯರಿಬ್ಬರೂ ತಿರುಗಾಡುತ

ಲಿದ್ದರು. ಆ ಸಮಯದಲ್ಲಿ ಪೋಷ್ಟಮೇನ್‌ನು ಕೋಮಲೆಯ ಹತ್ತಿರ ಬಂದು ರಿಜಿಷ್ಟರ್ ಲಕೋಟೆಯೊಂದನ್ನು ಕೊಟ್ಟು ಹೊರಟು ಹೋದನು. ಕೋಮಲೆಯು ಲಕೋಟೆಯ ಮೇಲ್ಗಡೆ ಫ್ರೆಜರೀರೋಡಿನ ಮುದ್ರೆಯು ಬಿದ್ದಿರುವುದನ್ನು ಕಂಡು ಜಾಗ್ರತೆಯಿಂದ ಕೌರನ್ನು ಹರಿದು ಕಾಗದವನ್ನು ಓದಿದಳು.

"ದೇವಿ! ನಾನಾವಿಧವಾಗಿ ಮುಂದಿನ ಮನೋರಥಗಳನ್ನು ಕಲ್ಪಿಸಿಕೊಂಡು ಲವಲವಿಕೆಯಿಂದ ಇಲ್ಲಿಗೆ ಬಂದಿರುವ ನಿನಗೆ ನಾನು ಮಾಡಿದ ತಿರಸ್ಕಾರಕ್ಕಾಗಿ ನಾನೀಗ ತುಂಬಾ ಪರಿತಪಿಸುತ್ತಲಿರುವೆನು; ಆದರೆ ಅದರಲ್ಲಿ ನನ್ನ ದೋಷವೇನೂ ಇಲ್ಲವೆಂಬುದನ್ನು ಸೂಚಿಸುವೆನು. ನೀನು ಅನುಬವಿಸುತ್ತಲಿರುವ ದುಃಖವನ್ನು ಅರಿತೆನು. ಅದಕ್ಕಾಗಿ ಮೋಹನನ ಹೃದಯವನ್ನರಿಯಲು ಪ್ರಯತ್ನಿಸಿದೆನು. ಆ ಪ್ರಯತ್ನದಿಂದ "ನಿನ್ನಲ್ಲಿ ಸಂಪೂರ್ಣವಾಗಿ ಇಚ್ಛೆಯಿಲ್ಲನೆಂದಲ್ಲವೆಂದೂ ಆತನಂತೆ ಕುಶಲಳಾಗಿ ಇರತಕ್ಕವಳನ್ನಲ್ಲದೆ ಬೇರೆಯುವರನ್ನು ವರಿಸಲವನು ಇಚ್ಛಿಸುವುದಿಲ್ಲವೆಂದೂ" ತಿಳಿದು ಬಂದಿತು. ಮುಂದಿನ ವಿಚಾರವು ನಿನಗೆ ಸೇರಿದೆ. ಮೋಹನನಿನ್ನೂ ವಿವಾಹವನ್ನು ಮಾಡಿಕೊಂಡಿಲ್ಲ. ನಿನ್ನ ಪ್ರೇಮಕ್ಕೆ ಜಯವಾಗಲಿ.

ಪ್ರಿಯನಾಥ."

ಪ್ರಿಯನಾಥನ ಕಾಗದವನ್ನೋದಿ ಗೆಳತಿಯರಿಬ್ಬರು ಸ್ವಲ್ಪ ಸಮಾಧಾನವನ್ನು ಹೊಂದಿದರು. ಕೋಮಲೆಯು ಹೇಳಿದಳು:—"ನಾನು ಮೋಹನನ ಮನೆಯಲ್ಲಿ ಕೊನೆಗೆ ಮನಬಂದಂತೆ ನುಡಿದಾಗ ಪ್ರಿಯನಾಥನು ಏನನ್ನೋ ಹೇಳಲು 'ದೇವಿ' ಎಂದು ಆರಂಭಿಸಿದನು, ಆದರೆ ಕ್ರುದ್ಧಳಾದ ನಾನವನನ್ನು ಮುಂದೆ ಮಾತನಾಡಗೊಡಲಿಲ್ಲ. ಪ್ರಿಯನಾಥನು ಮೃದುವಾದ ಹೃದಯವುಳ್ಳವನು ಆದುದರಿಂದಲೇ ಹೀಗೆ ಕಾಗದವನ್ನು ಬರೆದಿರುವನು. ಈ ಕಾಗದದಿಂದ ಸ್ವಲ್ಪ ಮನಸ್ಸಿಗೆ ನೆಮ್ಮದಿಯು ಉಂಟಾಗಿದೆ.

ಸುಮತಿ—ಆದರೇನು? ಮೋಹನನಂತೆ ನೀನು ನಡೆಸಲು ಸಾಧ್ಯವಿರುವುದೇ? ಆತನ ಸಾಹಸವು ಯಾರಿಗೆ ಬಂದೀತು! ಹಾಗೆ ಸಾಹಸವನ್ನು ನಡೆಸಲು ನಿನಗೆ ಧೈರ್ಯವಾದರೂ ಇರುವುದೇ? ನನಗೇನೊ ಭೀತಿಯಾಗುತ್ತಿದೆ.

ಕೋಮಲೆ—ದೈವೇಚ್ಛೆಯು ಇದ್ದಂತಾಗಲಿ. ಹೇಗಿದ್ದರೂ ಜೀವವನ್ನು

ಮೊದಲೇ ತೃಣಕ್ಕೆ ಸಮಾನವಾಗಿ ಎಣಿಸಿಯಾಯಿತು. ಇನ್ನಾವ ಭೀತಿ ಯಿದೆ. ಇದೇ ಕಾರ್ಯದಲ್ಲಿ ಪ್ರಾಣವು ಹೋದರೂ ನನ್ನ ಮನಸ್ಸಿಗೆ ವ್ಯಥೆಯಿಲ್ಲ. ನನ್ನ ಲಲಾಟದಲ್ಲಿ ಬ್ರಹ್ಮನು ಮೋಹನನೊಡನೆ ಸೇರಲು ವಿಧಿಸಿದ್ದರೆ ನಾನೀ ಕಾರ್ಯದಲ್ಲಿ ಜಯಶಾಲಿನಿಯಾಗುವೆನು. ಇಲ್ಲದಿದ್ದರೆ ಯಾವುದೂ ಇಲ್ಲ. ಶರೀರದ ಆಶೆಯು ಇಲ್ಲದಿರುವುದರಿಂದ ಯಾರಿಂದಲೂ ಭೀತಿಯನ್ನು ಹೊಂದದೆ ನನ್ನ ಪ್ರಯತ್ನವನ್ನು ಮಾಡುವೆನು.

"ಸುಮತಿ—ಹಾಗೆಲ್ಲಾ ಯೋಚಿಸಬೇಡ. ದೇವರಿರುವನು. ಗೆಳತಿಯ" ರಿಬ್ಬರೂ ಸಮಾಧಾನ ಚಿತ್ತರಾಗಿ ತಮ್ಮ ಮುಂದಿನ ಕಾರ್ಯಸಾಧನೆಗೆ ಉದ್ಯುಕ್ತರಾದರು.

‡ ‡ ‡ ‡ ‡

ಸುರೇಂದ್ರನಾಥನ ಮನೆಯಲ್ಲಿ ಗಲಭೆಯು ನಡೆದ ಎಂಟನೇ ದಿನದಲ್ಲಿ ಜ್ಯೋತೀಪುರದಲ್ಲಿ ಒಂದು ದೊಡ್ಡ ಉತ್ಸವ. ಪ್ರತಿವರ್ಷದಂತೆ ಈ ವರ್ಷವೂ ನೂರಾರು ಊರುಗಳಿಂದ ಜನರು ಉತ್ಸವ ನೋಡುವದಕ್ಕಾಗಿ ಬಂದು ತುಂಬಿ ದ್ದರು. ಜ್ಯೋತೀಪುರವು ನೋಡಲು ಚಿಕ್ಕದಾಗಿದ್ದರೂ ಯಾತ್ರಾಸ್ಥಳವಾದು ದರಿಂದ ಯಾವಾಗಲೂ ಜನರಿಂದ ಕಿಕ್ಕಿರಿಯುತಲಿತ್ತು. ಅದರಲ್ಲಿಯೂ ವರ್ಷಕ್ಕೊಂದು ಬಾರಿ ನಡೆಯತಕ್ಕ ಈ ಜಾತ್ರೆಯಲ್ಲಿ ಜನಸಂದಣಿಯು ವರ್ಣಿಸಲಸಾಧ್ಯವಾಗಿತ್ತು. ಐದು ದಿನಗಳಿಂದಲೂ ಉತ್ಸವವು ಅಲ್ಲಿ ನಡೆ ದಿತ್ತು. ಈ ದಿನವೇ ಕಡೇ ದಿನ. ಸಾಯಂಕಾಲದ ಪೂಜೆಯೇ ಅಲ್ಲಿ ಅತ್ಯಂತ ವಿಶೇಷ. ಆ ಪೂಜೆಯನ್ನು ನೋಡುವದಕ್ಕೆ ಹೋಗದೆ ಇರುವವರು ಅತಿ ವಿರಳವೆನ್ನಬಹುದು. ಊರಿನ ಮಧ್ಯದಲ್ಲಿ ದೇವಾಲಯವಿದ್ದಿತ್ತು. ಸಾಯಂ ಕಾಲ ಜನರು ತಂಡತಂಡವಾಗಿ ಪೂಜೆಯನ್ನು ನೋಡಲು ಹೋಗುತ್ತಿದ್ದರು. ಗಂಡಸರು, ಹೆಂಗಸರು ಎಂಬ ಭೇದವನ್ನಿಡದೆ ಜನರು ಸಂದುಗಳಲ್ಲಿ ನುಗ್ಗಿ ಕೊಂಡು ಹೋಗುತಲಿದ್ದರು. ಅದೇ ಊರಿನಲ್ಲಿ ವಾಸವಿರುವ ಪೂರ್ವಪರಿ ಚಿತಳಾದ ರಾಗಿಣಿಯು ತನ್ನ ಗಂಡನೊಡನೆ ಪೂಜೆಯನ್ನು ನೋಡಲು ತವಕ್ಕದಿಂದ ಜನರ ನುಗ್ಗಿನಲ್ಲಿ ಹೋಗುತಲಿದ್ದಳು. ಜನರ ನುಗ್ಗಿನಲ್ಲಿ ರಾಗಿ ಣಿಯ ಗಂಡನು ಸ್ವಲ್ಪ ಮುಂದಾಗಿ ಬಿಟ್ಟನು. ರಾಗಿಣಿಯು ಗಂಡನನ್ನು

ಕಾಣದೆ ಬೆದರಿದಳು. ಅಷ್ಟರಲ್ಲಿ ನಾಲ್ಕು ಜನ ಧಷ್ಟಪುಷ್ಟರು ಆಕೆಯನ್ನು ಸುತ್ತುಗಟ್ಟಿ ಕೂಗದಂತೆ ಮುಖಕ್ಕೊಂದು ಬಟ್ಟೆಯನ್ನು ಕಟ್ಟಿ ಎತ್ತಿಕೊಂಡು ಜನರ ಸಂದಿನೊಳಗೆ ಹೊರಟು ಹೋದರು. ಈ ರೀತಿ ಹೊತ್ತುಕೊಂಡು ಹೋದವರು ಇನ್ನಾರೂ ಆಗಿರದೆ ಸುರೇಂದ್ರನಾಥನ ಪ್ರೀತಿಪಾತ್ರ ಸೇವಕ ರಾಗಿದ್ದರು. ಆ ಸೇವಕರು ರಾಗಿಣಿಯನ್ನು ಹೊತ್ತುಕೊಂಡು ತಮ್ಮ ಸಂಕೇತ ಸ್ಥಾನಕ್ಕೆ ಹೋಗಿ ಮುಟ್ಟಿದರು. ಸುರೇಂದ್ರನಾಥನು ಅಲ್ಲಿ ಮೋಟಾರನ್ನು ಸಿದ್ಧಪಡಿಸಿ ನಿಂತಿದ್ದನು. ರಾಗಿಣಿಯನ್ನು ಮೋಟಾರೊಳಗೆ ಸೇರಿಸಿ ಎಲ್ಲರೂ ಮೋಟಾರಿನಲ್ಲಿ ಹೊರಟು ಹೋದರು.

ಇತ್ತ ರಾಗಿಣಿಯ ಗಂಡನು ಹೆಂಡತಿಯನ್ನು ಕಾಣದೆ ಅತ್ತಿತ್ತ ಹುಡುಕ ಲಾರಂಭಿಸಿದನು. ದೊಡ್ಡ ಗಲಾಟೆಯಾಯಿತು. ಪೋಲೀಸರೂ ಬಂದರು. ಪ್ರಯೋಜನವೇನೂ ಆಗಲಿಲ್ಲ. "ರಾಗಿಣಿಯು ಅಪಹರಿಸಲ್ಪಟ್ಟಳು" ಎಂಬ ಸಮಾಚಾರವು ಹರಡಿ ಹೋಯಿತು. ಉತ್ಸವವು ಎಂದಿನಂತೆ ನಡೆದು ಹೋಯಿತು. ಮಾರನೇ ದಿನವೇ ಮೋಹನನು ಮಿತ್ರರೊಡನೆ ಜ್ಯೋತೀ ಪುರಕ್ಕೆ ಬಂದು ರಾಗಿಣಿಯ ಮನೆಗೆ ಬಂದನು. ಮೋಹನನು ರಾಗಿಣಿಯ ಅಪಹಾರದ ವಿಷಯದಲ್ಲಿ ಎಷ್ಟು ವಿಷಯವನ್ನು ತಿಳಿದಿದ್ದನೋ ಅದಕ್ಕಿಂತ ಹೆಚ್ಚಾಗಿ ರಾಗಿಣಿಯ ಗಂಡನು ಅರಿತಿರಲಿಲ್ಲ. ಮೋಹನನು ಕೇಳಿದನು:--

"ಸುರೇಂದ್ರನಾಥನಲ್ಲಿ ನಿನಗೆ ಸಂಶಯವಿರುವುದೇ"

ರಾಗಿಣಿ ಗಂಡ:—ಇರುವುದು.

ಮೋಹನ:—ಸುರೇಂದ್ರನಾಥನ ಕಾರ್ಖಾನೆಯಲ್ಲಿ ಈ ಊರಿನ ಜನ ಗಳು ಇನ್ನಾರಾದರೂ ಇರುವರೇ?

ರಾಗಿಣಿ ಗಂಡ:—ಏಳೆಂಟು ಜನರಿದ್ದಾರೆ.

ಮೋಹನ:-ನೀನು ಅಲ್ಲಿ ಸೇರಿ ಎಷ್ಟು ದಿನಗಳ ವರೆಗೆ ಕೆಲಸ ಮಾಡಿರುವಿ.

ರಾಗಿಣಿ ಗಂಡ:—ಹದಿನೈದು ದಿನಗಳ ವರೆಗೆ ಮಾತ್ರ ಕೆಲಸ ಮಾಡಿ ದ್ದೆನು. ಅಷ್ಟರಲ್ಲಿಯೇ ಹಿಂದೆ ನಡೆದ ಕಷ್ಟವು ನಮ್ಮ ಮೇಲೆ ಬಂದಿತು.

ಮೋಹನ:—ಅಲ್ಲಿಗೆ ನೀನಾಗಿಯೇ ಹೋಗಿದ್ದೆಯೊ? ಅಥವಾ ಯಾರಾ ದರೂ ಪ್ರೇರಿಸಿ, ಹೋಗಿರುವೆಯೋ?

ರಾಗಿಣಿ ಗಂಡ:—ನಮ್ಮ ಬಂಧು ರಾಮಣ್ಣನೆಂಬೊಬ್ಬನು ಸುರೇಂದ್ರನಾಥನ ಕಾರ್ಖಾನೆಯಲ್ಲಿ ಬಹು ವರ್ಷಗಳಿಂದ ಕೆಲಸಕ್ಕೆ ಇದ್ದನು. ಆತನೆ ನನ್ನನ್ನು ಅಲ್ಲಿಗೆ ಬರಲು ಹೇಳಿ ಕೆಲಸವನ್ನು ಕೊಡಿಸಿದನು. ಆತನು ಇದೇ ಊರಿನವನು.

ಮೋಹನ:—ಆ ರಾಮಣ್ಣನಿಗೂ ಸುರೇಂದ್ರನಾಥನಿಗೂ ಪರಸ್ಪರ ಪ್ರೀತಿಯಿದ್ದಿತೇನು?

ರಾಗಿಣಿ ಗಂಡ:--ಇದ್ದಿತ್ತು. ಆದ್ದರಿಂದಲೇ ನಾನಲ್ಲಿಗೆ ಸೇರಿದೊಡನೆಯೇ ಎಲ್ಲರಿಗಿಂತಲೂ ಹೆಚ್ಚಾಗಿ ತಿಂಗಳಿಗೆ ಇಪ್ಪತ್ತೈದು ರೂಪಾಯಿಗಳ ಸಂಬಳವಿರುವ ಕೆಲಸ ಸಿಕ್ಕಿತು. ರಾಮಣ್ಣನು ನನಗೆ ತುಂಬಾ ಉಪಕಾರವನ್ನು ಮಾಡಿದನು; ಆದರೆ ನನಗೆ ಮಾತ್ರ ಅದೃಷ್ಟವು ಚೆನ್ನಾಗಿರಲಿಲ್ಲ.

ಮೋಹನ:-ರಾಮಣ್ಣನಿಗೂ ಸುರೇಂದ್ರನಾಥನಿಗೂ ಅಷ್ಟೊಂದು ಸ್ನೇಹವಿರಲು ಕಾರಣವು ನಿನಗೆ ತಿಳಿದಿರುವುದೆ?

ರಾಗಿಣಿ ಗಂಡ:— ಅದೆನಗೆ ತಿಳಿಯದು.

ಮೋಹನ—ಬೇರೆ ಏನೂ ಇರಲಾರದು. ಸುರೇಂದ್ರನಾಥನ ಅಕೃತ್ಯಗಳಿಗೆ ರಾಮಣ್ಣನೂ ಒಬ್ಬ ಸಹಾಯಕನಾಗಿರುವನು. ನಿನ್ನನ್ನು ಅಲ್ಲಿಗೆ ಕರೆಸಿರುವುದೂ ಅಪಕ್ಕಾಗಿಯೇ!

ರಾಗಿಣಿ ಗಂಡ:—ಇದ್ದರೂ ಇರಬಹುದು. ಇಲ್ಲಿಂದ ರಾಗಿಣಿಯನ್ನು ಅಲ್ಲಿಗೆ ಒಯ್ಯಬಾರದೆಂದು ನನ್ನ ನಿಶ್ಚಯವಿದ್ದರೂ, ಆ ರಾಮಣ್ಣನ ನಿರ್ಬಂಧದಿಂದಲೇ ಅಲ್ಲಿಗೆ ಕರೆದುಕೊಂಡು ಹೋಗಬೇಕಾಯಿತು.

ಮೋಹನ—ನೀನೊಬ್ಬನೇ! ಕಾರ್ಖಾನೆಯ ಕೆಲಸಕ್ಕೆ ಹೋಗಿದ್ದರೆ ನಿನಗೆ ಎಲ್ಲರಿಗಿಂತ ಅಧಿಕವಾಗಿ ಸಂಬಳವನ್ನು ಯಾಕೆ ಕೊಡುತ್ತಿದ್ದರು? ಈ ಕುತಂತ್ರದಿಂದಲೇ ನಿನಗೆ ಅಷ್ಟು ಸಂಬಳವನ್ನು ಕೊಡಲು ಸುರೇಂದ್ರನಾಥನು ಒಪ್ಪಿದನು ಅದಿರಲಿ. ಈ ಜಾತ್ರೆಗೆ ರಾಮಣ್ಣನು ಊರಿಗೆ ಬಂದಿರುವನೇ?

ರಾಗಿಣಿ ಗಂಡ—ಹೌದು. "ನಾಳೆ ಸುವರ್ಣನಗರಕ್ಕೆ ಹೊರಟು ಹೋಗುತ್ತೇನೆ" ಎಂದು ನಿನ್ನೆ ನನ್ನ ಹತ್ತಿರ ಹೇಳಿದ್ದನು.

ಮೋಹನ—ಹಾಗಾದರೆ ಅವನನ್ನು ಈಗ ಕರೆಸಬೇಕು. ನಿನ್ನ ಮನೆ

ಯಲ್ಲಿ ಇನ್ನಾರು ಇರುವರು?

ರಾಗಿಣಿ ಗಂಡ—ನನ್ನ ತಾಯಿ ಮಾತ್ರ ಇರುವಳು.

ಮೋಹನ—ನೀನು ರಾಮಣ್ಣನನ್ನು ಇಲ್ಲಿಗೆ ಬರಲು ಹೇಳಿದಂತೆ ನಿನ್ನ ತಾಯಿಯಿಂದ ಹೇಳಿ ಕಳುಹಿಸು. ರಾಗಿಣಿಯ ಗಂಡನು ತನ್ನ ತಾಯಿ ಯಿಂದ ಹೇಳಿಕಳುಹಿಸಿದನು. ಸ್ವಲ್ಪ ಹೊತ್ತಿನಲ್ಲಿ ರಾಮಣ್ಣನು ಬಂದು ರಾಗಿಣಿಯ ಮನೆಯನ್ನು ಹೊಕ್ಕನು. ಒಡನೆ ಮೋಹನನೂ, ಅವನ ಮಿತ್ರರೂ ರಾಮಣ್ಣನ ಸುತ್ತುವರಿದು "ನೀನು ನಿನ್ನೆ ನಡೆದ ರಾಗಿಣಿಯ ಅಪಹಾರದಲ್ಲಿ ಅಪರಾಧಿಯಿರುವಿ. ನಾವು ಪೋಲೀಸರು" ಎಂದು ಹೇಳಿ ರಾಮಣ್ಣನ ಕೈಗೆ ಸಂಕೋಲೆಯನ್ನು ಹಾಕಿದರು. ರಾಮಣ್ಣನು ಪಟ್ಟಣದಲ್ಲಿ ವಾಸವಿದ್ದರೂ ಸಹಜವಾಗಿ ಹಳ್ಳಿಗಾಡಿನವನಾದುದರಿಂದಲೂ, ನಿಶ್ಚಯವಾಗಿ ಯೂ ಅಪರಾಧಿಯಾಗಿರುವದರಿಂದಲೂ ಸಂಕೋಲೆಯನ್ನು ತೊಡಿಸಲು ಕಷ್ಟವಾಗಲಿಲ್ಲ. ಮೋಹನನು ಸುರೇಂದ್ರನಾಥನ ವಿಚಾರವನ್ನು ತಿಳಿಯಲು ರಾಮಣ್ಣನನ್ನು ಪೀಡಿಸತೊಡಗಿದನು. ಸಾಮಾನ್ಯವಾದ ಪೀಡನೆಯಿಂದ ರಾಮಣ್ಣನು ಬಾಯಿಬಿಡಲಿಲ್ಲ. ಮೋಹನನು ಸಣ್ಣ ಕತ್ತಿಯೊಂದನ್ನು ತೆಗೆದು ರಾಮಣ್ಣನ ಕುತ್ತಿಗೆಗೆ ಇಟ್ಟು ಹೇಳಿದನು:—"ನಿನ್ನ ಸ್ವಭಾವವೆಲ್ಲವೂ ತಿಳಿ ದಿದೆ. ಪ್ರಾಣದ ಮೇಲೆ ಆಶೆಯಿದ್ದರೆ ನಿಜಸ್ಥಿತಿಯನ್ನು ಹೇಳು."

ಆದರೂ ರಾಮಣ್ಣನು ಮಾತನಾಡಲಿಲ್ಲ. ಹರಿತವಾದ ಮೋಹನನ ಕತ್ತಿಯು ಸ್ವಲ್ಪ ಒತ್ತಲ್ಪಟ್ಟೊಡನೆ ರಾಮಣ್ಣನ ಕುತ್ತಿಗೆಯಿಂದ ರಕ್ತವು ಸುರಿಯಲಾರಂಭವಾಯಿತು. ವೇದನೆಯು ರಾಮಣ್ಣನಿಗೆ ಸಹಿಸಲಾರ ದಾಯಿತು. ಮೋಹನನು ಅಲ್ಲಿಂದ ಕತ್ತಿಯನ್ನು ತೆಗೆದು ಇನ್ನೊಂದು ಕಡೆಯಲ್ಲಿ ಗಾಯ ಮಾಡಲು ಮೆಲ್ಲನೆ ಇಟ್ಟನು. ರಾಮಣ್ಣನು ಗತ್ಯಂತರ ವಿಲ್ಲದೆ ಹೇಳಿದನು: "ಅಲ್ಲಿ ಒತ್ತಬೇಡಿ, ಹೇಳುತ್ತೇನೆ."

ಮೋಹನನು: "ನಿನಗೆ ಮಾತನಾಡಲು ಬಾಯಿ ಬರುವುದೇನು?" ಎಂದು ಹೇಳಿ ಇನ್ನೊಂದು ಭಾಗದಲ್ಲಿಯೂ ಕತ್ತಿಯನ್ನು ಒತ್ತಿದನು. ಕೂಡಲೆ ಇನ್ನೊಂದು ಗಾಯವಾಗಿ ರಾಮಣ್ಣನು "ಅಯ್ಯಯ್ಯೋ! ಕೊಲ್ಲ ಬೇಡಿ, ಹೇಳುತ್ತೇನೆ. ಉರಿಯುತ್ತದೆ" ಎಂದು ರೋದನ ಮಾಡಲು

ಆರಂಭಿಸಿದನು.

"ಇದೇನು, ನೋವಾಗುತ್ತದೆಯೇ? ನಿನಗೂ ಕೂಡ ನೋವೆಂಬುದು ತಿಳಿದಿರುವದೇ! ಸ್ವಲ್ಪ ನಿಲ್ಲು. ಸ್ವಲ್ಪ ಸ್ವಲ್ಪ ಭಾಗವನ್ನೇ ಕತ್ತರಿಸಿ ಹಾಕುತ್ತೇನೆ' ಹೀಗೆಂದು ಹೇಳಿ ಇನ್ನೊಂದು ಕಡೆಯಲ್ಲಿ ಕತ್ತಿಯನ್ನಿಟ್ಟನು. ರಾಮಣ್ಣನು ನೋವಿನ ಭಯದಿಂದ ನಡುಗತೊಡಗಿ ಹೇಳಿದನು: "ಅಯ್ಯೋ! ಕಾಪಾಡಿ ನಾನಿನ್ನು ಇಂತಹ ಕಾರ್ಯಕ್ಕೆ ಹೋಗುವದಿಲ್ಲ. ಇದೊಂದು ಬಾರಿ ಬಡವನನ್ನು ಕ್ಷಮಿಸಿರಿ. ನೀವು ಹೇಳಿದಂತೆ ಕೇಳುವೆನು. ನಿಮ್ಮ ಪಾದಸೇವಕನಾಗಿ ಇರುವೆನು."

ಮೋಹನ—ಇಲ್ಲ. ಕ್ಷಮಿಸಲು ಸಾಧ್ಯವಿಲ್ಲ. ನಿನ್ನ ಪಾಪಕ್ಕೆ ಶಿಕ್ಷೆಯಾಗಲೇ ಬೇಕು. ಸೌಮ್ಯದಿಂದ ನಾನು ಎಷ್ಟು ಹೇಳಿದರೂ ನೀನೊಂದಕ್ಕೂ ಉತ್ತರವನ್ನು ಕೊಡಲಿಲ್ಲ. ನಿನ್ನ ಹೆಮ್ಮೆಯು ಇಳಿಯಲೇ ಬೇಕು.

ರಾಮಣ್ಣ—ತಪ್ಪಾಯಿತು. ಕ್ಷಮಿಸಿ. ಇನ್ನು ನೀವು ಹೇಳಿದಂತೆ ಕೇಳುವೆನು. ಪ್ರಮಾಣಪೂರ್ವಕವಾಗಿ ಹೇಳುತ್ತೇನೆ. ಇದಕ್ಕೆ ತಪ್ಪುವದಿಲ್ಲ.

ಮೋಹನ—ಪ್ರಮಾಣವನ್ನು ಮಾಡಿದರೂ ನೀನು ಮಾತಿಗೆ ತಪ್ಪಿದರೆ ಏನನ್ನು ಮಾಡಲಿ?

ರಾಮಣ್ಣ—"ನನ್ನನ್ನು ಕತ್ತರಿಸಿ ಹಾಕಿರಿ" ಮೋಹನನು ಪ್ರಮಾಣಪೂರ್ವಕವಾಗಿ ಸುರೇಂದ್ರನಾಥನ ಕಾರ್ಯದಿಂದ ರಾಮಣ್ಣನನ್ನು ನಿವೃತ್ತಿಹೊಂದಿಸಿ, ಅವನಿಗೆ ಹಾಕಿದ್ದ ಬೇಡಿಯನ್ನು ತೆಗೆದು ಹಾಕಿ ಗಾಯಗಳಿಗೆ ತಕ್ಕ ಚಿಕಿತ್ಸೆಯನ್ನು ಮಾಡಿ ರಾಮಣ್ಣನನ್ನು ಕೇಳಿದನು.

ಮೋಹನ—ರಾಗಿಣಿಯನ್ನು ಅಪಹರಿಸಿರುವವನು ಸುರೇಂದ್ರನಾಥನಷ್ಟೇ?

ರಾಮಣ್ಣ:—ಹೌದು.

ಮೋಹನ:—ಈಗ ಆಕೆಯನ್ನು ಬಿಡಿಸಲು ಉಪಾಯವೇನು?

ರಾಮಣ್ಣ:—ನೀವು ಏನನ್ನು ಮಾಡಬೇಕೆಂದು ಹೇಳಿದರೂ ಒಡನೆ ಆ ಕಾರ್ಯವನ್ನು ಮಾಡುವೆನು.

ಮೋಹನ:—ಕೋಮಲೆಯ ವಿಷಯವಾಗಿ ಸುರೇಂದ್ರನಾಥನು

ಹೇಗಿರುವನು? ನಿನಗೆ ತಿಳಿದಿರುವುದೆ?

ರಾಮಣ್ಣ:—ರಾಗಿಣಿ ಮತ್ತು ಈತನನ್ನು ಬಿಡಿಸಲು ಸಹಾಯ ಮಾಡಿರುವುದು ಕೋಮಲೆಯೇ ಇರಬಹುದೆಂದು ಬೇರೆಯವರು ಸಂದೇಹ ಪಡುತ್ತಿದ್ದರೂ ಸುರೇಂದ್ರನಾಥನಿಗೆ ಆಕೆಯ ವಿಷಯದಲ್ಲಿ ಇದ.ವರೆಗೆ ಯಾವ ಸಂದೇಹವೂ ಬರಲಿಲ್ಲ. ಅಲ್ಲಿ ಈಗ ಬೇರೆಯವರ ಯಾವ ಉಪಾಯವೂ ನಡೆಯುವಂತಿಲ್ಲ ಈಗ ನಡೆದ ಕಾರ್ಯವು ಅತ್ಯಂತ ಗುಪ್ತವಾಗಿ ಇದೆ. ಸುರೇಂದ್ರನಾಥನ ಮನೆಯವರಾರಿಗೂ ಇದು ತಿಳಿಯುವಂತಿಲ್ಲ. ರಾಗಿಣಿಯು "ಈಗ ಎಲ್ಲಿರುವಳು" ಎಂಬುದು ಸುರೇಂದ್ರನಾಥನಿಗೆ ಒಬ್ಬನಿಗೆ ಅಲ್ಲದೆ ಇನ್ನಾರಿಗೂ ತಿಳಿಯುವಂತಿಲ್ಲ. ಸುರೇಂದ್ರನಾಥನು ಈ ಸಾರಿ ಅಷ್ಟು ಗುಪ್ತವಾಗಿ ತನ್ನ ಕಾರ್ಯವನ್ನು ನಡೆಸಿರುವನು.

ಮೋಹನ—ನೀನೇ ಮುಂದಾಳಾಗಿ ನಿಂತು ಈ ಕಾರ್ಯವನ್ನು ಸಾಧಿಸಬೇಕು.

ರಾಮಣ್ಣ—ಏನನ್ನು ಹೇಳಿದರೂ ಮಾಡಲೊಪ್ಪುವೆನು.

ಅನಂತರ ಮೋಹನನು ರಾಮಣ್ಣನ ಕಿವಿಯಲ್ಲಿ ಕೆಲವು ವಿಷಯ ಗಳನ್ನು ಗುಪ್ತವಾಗಿ ತಿಳಿಸಿ ತಾನು ಮಿತ್ರರೊಡನೆ ಹಿಂದಿರುಗಿ ಹೊರಟು ಹೋದನು. ರಾಮಣ್ಣನು ಹಿಂದಿನಂತೆ ಸುವರ್ಣನಗರಕ್ಕೆ ಹೋಗಿ ತನ್ನ ಕೆಲಸಕ್ಕೆ ಸೇರಿದನು. ರಾಮಣ್ಣನು ಬಂದದ್ದನ್ನು ಕೇಳಿ ಸುರೇಂದ್ರನಾಥನು ಆತನನ್ನು ಕರಿಸಿ, ರಾಗಿಣಿಯ ವಿಷಯವಾಗಿ ಸಂಭಾಷಣೆ ನಡೆಸಿದನು:

"ನಿನ್ನ ಸಹಾಯದಿಂದ ರಾಗಿಣಿಯನ್ನು ಹಿಡಿದು ತಂದೆವು; ಆದರೆ ಏನನ್ನು ಹೇಳಿದರೂ ಆಕೆಯು ನನ್ನ ಮಾತನ್ನು ಕೇಳುವುದಿಲ್ಲ. ಬಲಾತ್ಕಾರಕ್ಕೆ ಹೋಗಬಾರದೆಂದು ಎಷ್ಟು ಯತ್ನಿಸಿದರೂ ಪ್ರಯೋಜನವಾಗ ಲಿಲ್ಲ. ನೀನೇ ಹೇಳು. ಇದಕ್ಕೇನು ಮಾಡಲಿ."

ರಾಮಣ್ಣ—ನನ್ನ ಮನಸ್ಸಿಗೊಂದು ಉಪಾಯವು ತೋರುತ್ತಿದೆ; ಆದರೆ ಅದನ್ನು ನೀವು ಒಪ್ಪುವುದಿಲ್ಲ. ಮುತ್ತಾಳೆ? ಹೋಗಲಿ. ಅದೆಲ್ಲಾ ಪೂರ್ವಕಾಲಕ್ಕಾಯಿತು. ಈಗ ಹೊಟ್ಟೆತುಂಬಿಸಿಕೊಳ್ಳುವುದಕ್ಕಾಗಿ ಏನನ್ನಾದರೂ ಹೇಳುತ್ತಾರೆ" ಎಂದು ಹೇಳಿಬಿಡುವಿರಿ.

ಸುರೇಂದ್ರನಾಥ—ಏನದು? ಹೇಳು. ಎಲ್ಲವನ್ನೂ ನಿನ್ನಲ್ಲಿಯೇ ಯಾಕೆ ಮುಗಿಸಿಕೊಳ್ಳುತ್ತೀ? ಹೇಳು.

ರಾಮಣ್ಣಾ—ಇಲ್ಲಿಗೆ ಒಂದು ಮೈಲಿಯು ದೂರದಲ್ಲಿ ಅಶ್ವತ್ಥಕಟ್ಟೆಯು ಬಲಗಡೆಯಿರುವ ಬೀದಿಯಲ್ಲಿ ಒಂದು ಜೀರ್ಣ ದೇವಸ್ಥಾನವಿರುವದು ಗೊತ್ತಿದೆಯಷ್ಟೆ? ಅಲ್ಲಿ ಒಬ್ಬ ಸಾಧು ಪುರುಷನು ಇರುವನು. ಅವನು ಇದು ವರಿಗೆ ಕೆಲವರ ರೋಗಗಳನ್ನು ವಾಸಿ ಮಾಡಿರುವನು. ಕೆಲವರ ಪಿಶಾಚಿ ಗಳನ್ನು ಬಿಡಿಸಿರುವನು. ಕೆಲವರಿಗೆ ಹಸ್ತಪರೀಕ್ಷೆ ಮಾಡಿ ಭೂತ-ಭವಿಷ್ಯ-ದ್ವರ್ತಮಾನಗಳ ವಿಶೇಷಗಳನ್ನು ಹೇಳಿರುವನು. ತಮಗೆ ಇಷ್ಟವಿದ್ದರೆ ಆ ಸಾಧುವನ್ನು ಒಂದು ಬಾರಿ ಕೇಳಬಹುದು.

ಸುರೇಂದ್ರನಾಥ—ಅದೆಲ್ಲಾ ನಂಬುಗೆಗೆ ಯೋಗ್ಯವಲ್ಲ.

ರಾಮಣ್ಣಾ—ಇದರಿಂದ ನಮಗೆ ಹಾನಿಯೇನು? ಅನುಕೂಲಪಡಿಸಿದರೆ ನಮಗೂ ಅನುಕೂಲ. ಹಾಗೆ ಆಕೆಯನ್ನು ಸರಿಪಡಿಸುವುದಕ್ಕೆ ಆತನು ಅಸಮರ್ಥನಾದರೆ ಹೋಗಲಿ. ಅದರಿಂದ ಯಾವ ಕೇಡೂ ನಮಗಿಲ್ಲವಷ್ಟೆ?

ಸುರೇಂದ್ರನಾಥ—ಹಾಗಿದ್ದರೆ ಗುಟ್ಟಾಗಿ ನೀನೇ ಹೋಗಿ ತಿಳಿದು ಕೊಂಡು ಬಾ.

ರಾಮಣ್ಣನು ಸುರೇಂದ್ರನಾಥನ ಆಜ್ಞೆಯನ್ನು ಧರಿಸಿ ಅಲ್ಲಿಂದ ಹೊರಟು ಹೋಗಿ ಸ್ವಲ್ಪ ಹೊತ್ತಿನ ಮೇಲೆ ಹಿಂದಿರುಗಿ ಬಂದು ಸುರೇಂದ್ರ ನಾಥನ ಹತ್ತಿರ ತಿಳಿಸಿದನು. "ಆ ಸಾಧುವು 'ತನ್ನ ಕೈಲಾದುದನ್ನು ಮಾಡು ತ್ತೇನೆ. ಇಲ್ಲಿಗೇ ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಕರೆದುಕೊಂಡು ಬರಬೇಕು' ಎಂದು ಹೇಳಿದನು; ಆದರೆ ಅದಕ್ಕೆ ನಾನು ಒಪ್ಪಲಿಲ್ಲ. ರಾಗಿಣಿ ಯನ್ನು ಅಲ್ಲಿಗೆ ಮಧ್ಯಾಹ್ನದ ಸಮಯದಲ್ಲಿ ಹೇಗೆ ಗುಟ್ಟಾಗಿ ಒಯ್ಯಲು ಸಾಧ್ಯ? ಮನೆಯವರು ಯಾರಾದರೂ ನೋಡಿದರೆ ತೊಂದರೆಯಲ್ಲವೆ?"

ಸುರೇಂದ್ರನಾಥ—ಅದು ಹೌದು. ರಾತ್ರಿ ಎಂಟು ಗಂಟೆಯ ಹೊತ್ತಿಗೆ ಕರೆದುಕೊಂಡು ಹೋದರೆ ತೊಂದರೆ ಏನು?

ರಾಮಣ್ಣಾ—ಅದು ಆಗಬಹುದು.

ಸುರೇಂದ್ರನಾಥ—ಹಾಗಾದರೆ ಇನ್ನೊಂದು ಬಾರಿ ಹೋಗಿ ಕೇಳಿ ಕೊಂಡು ಬಾ.

ಒಡನೆ ರಾಮಣ್ಣನು "ಅಪ್ಪಣೆ" ಎಂಥು ನುಡಿದು ಹೊರಟು ಹೋದನು.

ಸ್ವಲ್ಪ ಹೊತ್ತಿನ ಮೇಲೆ ರಾಮಣ್ಣನು ಹಿಂದಿರುಗಿ ಬಂದು "ಸಾಧುವು ಒಪ್ಪಿರುವನು" ಎಂದು ಸುರೇಂದ್ರನಾಥನಿಗೆ ತಿಳಿಸಿದನು.

ಸುರೇಂದ್ರನಾಥ—ಆದರೆ ಆಕೆಯು ಅಲ್ಲಿಗೆ ಹೋಗಲು ಒಪ್ಪಬೇಕು. ಒಪ್ಪದಿದ್ದರೆ ಏನು ಮಾಡೋಣ. ಆಕೆಗೆ ಈಗ ಸ್ವಲ್ಪ ಜ್ವರವು ಬರುತ್ತಿದೆ ಯೆಂದು ದಾಸಿಯು ಹೇಳಿದಳು

ರಾಮಣ್ಣ—ನಾನು ಸ್ವಲ್ಪ ಹಿತವಚನವನ್ನು ಹೇಳುತ್ತೇನೆ. ಅದನ್ನು ಆಕೆಯು ಕೇಳಬಹುದು.

ಸುರೇಂದ್ರನಾಥನು ಒಪ್ಪಿದನು. ರಾಮಣ್ಣನನ್ನು ಕರೆದುಕೊಂಡು ರಾಗಿಣಿಯನ್ನು ಸೆರೆಯಿಟ್ಟಿರುವ ಸ್ಥಳಕ್ಕೆ ಹೋದನು. ತಾನು ಬಾಗಿಲಿನ ಹೊರಗೇ ನಿಂತು, ರಾಮಣ್ಣನನ್ನು ಒಳಗೆ ಹೋಗಲು ಹೇಳಿದನು ರಾಮಣ್ಣನು ರಾಗಿಣಿಯ ಹತ್ತಿರ ಮೆಲ್ಲಗೆ: "ನಾನೀಗ ಮೋಹನನ ಅಪ್ಪಣೆಯಿಂದ ನಿನ್ನನ್ನು ಬಿಡಿಸಲು ಉಪಾಯವನ್ನು ಹೂಡಿರುವೆನು. ಮಾರುತಿ ದೇವಾಲಯದ ವರೆಗೆ ಮಾತ್ರ ನೀನು ಬರಲು ಒಪ್ಪಿದರೆ ನೀನು ಈ ಬಂಧನದಿಂದ ತಪ್ಪಿಸಿಕೊಳ್ಳುವಿ. ಸುರೇಂದ್ರನಾಥನನ್ನು ಮೋಸಕ್ಕೆ ಸಿಕ್ಕಿಸಿರುವೆನು. ಖಂಡಿತವಾಗಿಯೂ ನೀನೀದಿನ ಬಿಡಿಸಲ್ಪಡುವಿ. ನಾನು ಮೋಹನನ ಹತ್ತಿರ ಪ್ರಮಾಣ ಮಾಡಿ ಬಂದಿರುವೆನು" ಎಂದು ಹೇಳಿದನು. ರಾಗಿಣಿಯು ರಾಮಣ್ಣನ ಮಾತನ್ನು ನಂಬಿ ರಾತ್ರಿ ದೇವಾಲಯಕ್ಕೆ ಹೋಗಲು ಸಮ್ಮತಿಸಿದಳು.

ರಾಮಣ್ಣನು ಹೊರಗೆ ಬಂದು ಸುರೇಂದ್ರನಾಥನ ಹತ್ತಿರ ಹೇಳಿದನು: "ಒಪ್ಪಿರುವಳು"

ರಾತ್ರಿ ಎಂಟು ಗಂಟೆಯ ಸಮಯದಲ್ಲಿ ಗುಪ್ತವಾಗಿ ಸುರೇಂದ್ರನಾಥ, ರಾಮಣ್ಣ, ಸುರೇಂದ್ರನಾಥನ ಆಪ್ತಸೇವಕರಿಬ್ಬರು, ರಾಗಿಣಿ ಇಷ್ಟು ಜನರು ಮೋಟಾರಿನಲ್ಲಿ ಕುಳಿತು ಹಾಳು ದೇವಾಲಯದ ಕಡೆಗೆ ಹೊರಟರು. ದಾರಿಯಲ್ಲಿ ಎಲ್ಲಾದರೂ ಮೋಹನನ ಉಪಟಳವು ಬಂದೀತೆಂಬ ಭೀತಿಯಿಂದ ಸುರೇದ್ರನಾಥನು ಸೇವಕರ ಕೈಯಲ್ಲೊಂದೊಂದು ಬಾರ್ ಮಾಡಿದ ಪಿಸ್ತೂ

ಲನ್ನು ಕೊಟ್ಟು ತಾನೂ ಒಂದನ್ನು ಹಿಡಿದಿದ್ದನು. ಮೋಟಾರು ಹಾಳು ಬಿದ್ದ ದೇವಾಲಯದ ಬಾಗಿಲಿನಲ್ಲಿ ಬಂದು ನಿಂತು, ಎಲ್ಲರೂ ಇಳಿದು ದೇವಾಲಯವನ್ನು ಹೊಕ್ಕರು. ದೇವಸ್ಥಾನದ ಒಂದು ಭಾಗದಲ್ಲಿ ಮಿಣಮಿಣನೆ ಉರಿಯುತ್ತಿದ್ದ ದೀಪದ ಎದುರಿನಲ್ಲಿ ಒಬ್ಬ ಸಾಧುಪುರುಷನು ಕುಳಿತುಕೊಂಡು ಒಂದು ಪುಸ್ತಕವನ್ನು ಓದುತಲಿದ್ದನು. ಸುರೇಂದ್ರನಾಥನೇ ಮೊದಲಾದವರು ಮುಂದೆ ಹೋಗಿ ಸಾಧುವರ್ಯನನ್ನು ನಮಸ್ಕರಿಸಿದರು. ಆ ಸಾಧುಪುರುಷನು ಸುರೇಂದ್ರನಾಥಾದಿಗಳನ್ನು ನೋಡಿ ಕುಳಿತುಕೊಳ್ಳಲು ಹೇಳಿ ಹತ್ತಿರವಿದ್ದ ಪೆಟ್ಟಿಗೆಯ ಬಾಗಿಲನ್ನು ತೆಗೆದು ಒಂದು ತಾಮ್ರದ ಪ್ರತಿಮೆಯನ್ನು ತೆಗೆದು ಕೆಳಗಿಟ್ಟು ಅದನ್ನು ಪೂಜಿಸಲಾರಂಭಿಸಿದನು. ಪೂಜೆಯೆಲ್ಲವೂ ಸಾತ್ವಿಕವಾಗಿ ನಡೆದು ಮಂಗಳಾರತಿಯಾಗಿ, ಮಂತ್ರ ಪುಷ್ಪವನ್ನು ತೆಗೆದುಕೊಳ್ಳಲು ಕೈ ತೊಳೆವುದಕ್ಕಾಗಿ ಸಾಧುಪುರುಷನು "ಎಲ್ಲರೂ ಮುಂದೆ ಬಂದು ನೀರನ್ನು ತೆಗೆದುಕೊಳ್ಳಿ" ಎಂದನು. ಸುರೇಂದ್ರನಾಥನು ಗತ್ಯಂತರವಿಲ್ಲದೆ ಪಿಸ್ತೂಲನ್ನು ಅಲ್ಲಿಯೇ ಕೆಳಗಿಟ್ಟು, ಮುಂದೆ ಬಂದು ನೀರನ್ನು ತೆಗೆದುಕೊಂಡನು. ಒಡೆಯನು ಮಾಡಿದಂತೆ ಸೇವಕರೂ ಪಿಸ್ತೂಲನ್ನು ಕೆಳಗಿಟ್ಟು ನೀರನ್ನು ತೆಗೆದುಕೊಂಡರು ಅನಂತರ ಅವರ ಕೈಯಲ್ಲಿ ಸಾಧುವು ಮಂತ್ರ ಪುಷ್ಪವನ್ನು ದೇವರ ಮೇಲೆ ಹಾಕಲು ಹೇಳಿ ಹೂವನ್ನೂ, ಅಕ್ಷತೆಯನ್ನೂ ಕೊಟ್ಟನು. ಮಂತ್ರಪುಷ್ಪವನ್ನು ಹಾಕಿ ಎಲ್ಲರೂ ನಮಸ್ಕರಿಸಲು ನೆಲದ ಮೇಲೆ ಮಲಗಿದರು. ಥಟ್ಟನೆ ಆ ಸಾಧುಪುರುಷನು ಒಂದು ಎಲೆಕ್ಟ್ರಿಕ್ ದೀಪದಿಂದ ದೇವಾಲಯವೆಲ್ಲವನ್ನೂ ಬೆಳಕು ಮಾಡಿದನು. ನಮಸ್ಕರಿಸುತಲಿದ್ದ ಸುರೇಂದ್ರನಾಥನು "ಇದೇನು ಬೆಳಕು" ಎಂದು ಗಾಬರಿಯಿಂದ ಏಳಲು ಉದ್ಯುಕ್ತನಾಗುವುದರೊಳಗೆ ನಾಲ್ಕು ಜನರು ಸುರೇಂದ್ರನಾಥನ ಮೇಲೆ ಬಿದ್ದರು. ರಾಮಣ್ಣನು ಒಡನೆ ಎದ್ದುನಿಂತು ಹಿಂದೆ ಇದ್ದ ತನ್ನವರ ಪಿಸ್ತೂಲುಗಳನ್ನು ವಶಪಡಿಸಿಕೊಂಡು ಸುರೇಂದ್ರನಾಥನ ಇಬ್ಬರು ಸೇವಕರ ಮೇಲೆ ಏರಿ ಹೋದನು.

ಸಾಧುಪುರುಷನೂ ಕೂಡ ರಾಮಣ್ಣನ ಕೈಯಿಂದ ಪಿಸ್ತೂಲೊಂದನ್ನು ತೆಗೆದುಕೊಂಡು ಸೇವಕರು ಸುರೇಂದ್ರನಾಥನ ಸಹಾಯಕ್ಕೆ ಬರದೇ ಇರುವಂತೆ

ಮಾಡಲು ನಿಂತನು. ಮಲಗಿದ್ದಾಗ ಮೇಲೆ ನಾಲ್ಕು ಜನರು ಬಿದ್ದುಬಿಟ್ಟಿದ್ದರಿಂದ ಸುರೇಂದ್ರನಾಥನ ಬಲವೇನೂ ಫಲಕಾರಿಯಾಗದೆ ಆ ನಾಲ್ಕು ಜನರ ಬಲವಾದ ಹಿಡಿತದಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲದೆ ಬಂಧಿಸಲ್ಪಟ್ಟನು. ಪಿಸ್ತೂಲನ್ನು ಸುರೇಂದ್ರನಾಥನು ತಂದಿದ್ದರೂ ಅದನ್ನು ಹಿಂದೆ ಬಿಟ್ಟು ನಮಸ್ಕಾರ ಮಾಡುತ್ತಿದ್ದದರಿಂದ ಪಿಸ್ತೂಲಿನ ಪ್ರಯೋಜನವಾಗಲಿಲ್ಲ. ಆತನ ಸೇವಕರೂ ನಿಸ್ಸಹಾಯಕರಾಗಿ ಬಂಧಿಸಲ್ಪಟ್ಟರು. ರಾಮಣ್ಣನು ಕೆಲಸವು ನೆರವೇರಿದ್ದಕ್ಕಾಗಿ ಸಂತೋಷಿಸಿ ಸಾಧುವಿಗೆ ವಂದಿಸಿ, ರಾಗಿಣಿಯ ಹತ್ತಿರ: "ಇವರ ಪರಿಚಯವಾಯಿತೆ! ನಿನ್ನನ್ನು ಹಿಂದೊಂದು ಬಾರಿ ರಕ್ಷಿಸಿದವರು ಇವರೇ? ನಮಸ್ಕರಿಸು" ಎಂದು ಹೇಳಿದನು. ರಾಗಿಣಿಯು ಸಾಧುವು ಮೋಹನನೆಂದೂಹಿಸಿ ನಮಸ್ಕರಿಸಿದಳು. ನಿಜವಾಗಿಯೂ ಸಾಧುವು ಮೋಹನನೇ ಇದ್ದನು. ಸುರೇಂದ್ರನಾಥನ ಮೇಲೆ ಬಿದ್ದವರು ಮೋಹನನ ಮಿತ್ರರಾಗಿದ್ದರು. ಮೋಹನನು ಹೇಳಿಕೊಟ್ಟಿರುವ ಯುಕ್ತಿಯಿಂದ ರಾಮಣ್ಣನು ಸುರೇಂದ್ರನಾಥನನ್ನು ಮೋಸಗೊಳಿಸಿದ್ದನು.

ಮೋಹನನು ರಾಗಿಣಿಯನ್ನು ಅಲ್ಲಿಂದ ಜ್ಯೋತಿಪುರಕ್ಕೆ ಕಳುಹಿಸುವ ವ್ಯವಸ್ಥೆಯನ್ನು ಮಾಡಿ, ಸುರೇಂದ್ರನಾಥನ ಮೋಟಾರಿನಲ್ಲಿ ಆತನನ್ನು ಇಟ್ಟುಕೊಂಡು, ಮಿತ್ರರೊಂದಿಗೆ ತನ್ನ ಮನೆಯನ್ನು ಸೇರಿ, ನಾನಾವಿಧವಾದ ಹಿತಕರ ಬೋಧನೆಯಿಂದ ಸುರೇಂದ್ರನಾಥನನ್ನು ಕೆಟ್ಟದಾರಿಯಿಂದ ಹಿಂದಿರುಗಿಸಿ, ಆತನ ಹಿಂದಿನ ಆಪ್ತಸ್ನೇಹಿತರಂತಿದ್ದ ಸೇವಕರನ್ನು ಕೆಲಸದಿಂದ ಬಿಡಿಸಿ, ಕಾರ್ಖಾನೆಯ ಕೆಲಸಗಾರರನ್ನು ನ್ಯಾಯದಿಂದ ಪಾಲಿಸುವುದನ್ನು ತಿಳಿಯಪಡಿಸಿ, ಸುರೇಂದ್ರನಾಥನನ್ನು ನ್ಯಾಯಮಾರ್ಗಗಾಮಿಯನ್ನಾಗಿ ಮಾಡಿದನು. ಮೋಹನನು ಈ ಸುರೇಂದ್ರನಾಥನನ್ನು ಸನ್ಮಾರ್ಗಕ್ಕೆ ತರುವ ಕಾರ್ಯದಲ್ಲಿ ತನ್ನ ಬುದ್ಧಿಶಕ್ತಿಯೆಲ್ಲವನ್ನೂ ಉಪಯೋಗಿಸಿದ್ದನು.

ಸುರೇಂದ್ರನಾಥನು ಮೋಹನನಿಂದ ಶಿಕ್ಷಿಸಲ್ಪಟ್ಟು ತನ್ನ ಎಲ್ಲಾ ಅಕೃತ್ಯಗಳಿಂದ ದೂರವಾದುದನ್ನು ಕೋಮಲೆಯು ತಿಳಿದು ಸಂತೋಷಿಸಿದಳು. ಅದುವರೆಗೂ ಗುಪ್ತವಾಗಿರಿಸಿದ್ದ ತಾನು ಹಿಂದೆ ಮಾಡಿದ ಅಪರಾಧವನ್ನು ತಿಳಿಸಿ ಕ್ಷಮೆಯನ್ನು ಬೇಡಿದಳು; ಮತ್ತು ಮೋಹನನ ಮೇಲೆ

ಇಟ್ಟ ಪ್ರೇಮವನ್ನೂ, ಅವನು ತಿರಸ್ಕರಿಸಿರುವುದನ್ನೂ, ಪ್ರಿಯನಾಥನು ಕಾಗದ ಬರೆದದ್ದನ್ನೂ ಹೇಳಿ, ತಾನು ಮುಂದೆ ಅದಕ್ಕಾಗಿ ಯತ್ನಿಸಲು ಒಪ್ಪಿಗೆಯನ್ನು ಯಾಚಿಸಿದಳು.

ಸುರೇಂದ್ರನಾಥನು ಪುತ್ರಿಯ ಸಾಹಸ ಕಾರ್ಯದಲ್ಲಿ ಒಪ್ಪಿಗೆಯನ್ನಿತ್ತು, ಅದಕ್ಕೆ ಬೇಕಾದ ಸಹಾಯವನ್ನು ಒದಗಿಸಿ ಕೊಟ್ಟನು. ತಾನು ಕಾರ್ಯವನ್ನು ಆರಂಭಿಸಿದ ಮೇಲೆ ಯಾವ ವಿಪತ್ತು ಬರುವುದಾದರೂ ಅದೆಲ್ಲವೂ ತನ್ನ ಮೇಲೆ ಬರಬೇಕೇ ಹೊರತು ತನ್ನ ಮನೆಯವರ ಮೇಲೆ ಬರಬಾರದೆಂದು ಯೋಚಿಸಿ ಅದಕ್ಕಾಗಿ ಬೇರೊಂದು ಬಿಡಾರವನ್ನು ಏರ್ಪಡಿಸಿ, ತಾಯಿಯ ಮತ್ತು ತಂದೆಯ ಹತ್ತಿರ: "ನಾನಿನ್ನು ಮೋಹನನಿಂದ ಸಹಿತಳಾಗಿ ನಿಮ್ಮ ದರ್ಶನಕ್ಕೆ ಬರುವೆನೇ ಹೊರತು, ಅದರೊಳಗೆ ಜೀವದಿಂದಿದ್ದು ಏಕಾಕಿನಿಯಾಗಿ ಎಂದಿಗೂ ಬರಲಾರೆನು" ಎಂದು ಹೇಳಿ ಒಡನೆ ಅಲ್ಲಿಂದ ಸಮ್ಮತಿಯೊಡನೆ ಹೊರಟು ಹೋದಳು.

---

## ಅಷ್ಟಮ ಗುಚ್ಛ.

ಒಂದು ದಿನ ಮಟ ಮಟ ಮಧ್ಯಾಹ್ನ. ಮೋಹನನೂ ಅವನ ಮಿತ್ರರೂ ಊಟಮಾಡಿ ವಿಶ್ರಾಂತಿಯನ್ನು ಹೊಂದುತ್ತಿದ್ದರು. ಲಕ್ಷ್ಮೀಶನು ಯಾವುದೋ ಒಂದು ಕಾರ್ಯದ ನಿಮಿತ್ತವಾಗಿ ಬೆಳಗ್ಗೆ ಮನೆಯಿಂದ ಹೊರಟು ಹೋಗಿ ಆಗ ಮನೆಯ ಕಡೆಗೆ ಬರುತ್ತಿದ್ದನು. ಲಕ್ಷ್ಮೀಶನು ಮನೆಯ ಹತ್ತಿರಕ್ಕೆ ಬಂದನು. ಅಷ್ಟರಲ್ಲಿ ಎದುರಿನ ದಿಕ್ಕಿನಿಂದ ವೇಗವಾಗಿ ಒಂದು ಮೋ-ಟಾರ್ ಬರುತ್ತಿದ್ದು, ಲಕ್ಷ್ಮೀಶನನ್ನು ನೋಡಿ ಆತನ ಹತ್ತಿರದಲ್ಲಿಯೇ ಬಂದು ನಿಂತಿತು. ಮೋಟಾರಿನಲ್ಲಿ ಡ್ರೈವರನನ್ನು ಕೂಡಿ ಐದು ಜನರಿದ್ದರು. ಒಬ್ಬನು ಮಲಗಿದ್ದನು. ಅವರಲ್ಲೊಬ್ಬನು ಲಕ್ಷ್ಮೀಶನನ್ನುದ್ದೇಶಿಸಿ, "ಸ್ವಾಮಿ, ನಿಮ್ಮನ್ನು ಹುಡುಕುವದಕ್ಕಾಗಿಯೇ ಬಂದೆವು. ಅಯ್ಯೋ! ಇಲ್ಲಿ ಬಂದು ನೋಡಿ" ಎಂದು ನುಡಿದು ಅಳಹತ್ತಿದನು. ತನ್ನನ್ನು ನೋಡಿ ಮೋಟಾರ್ ನಿಂತು ಅದರಿಂದೊಬ್ಬನು ಹೀಗೆ ಹೇಳಿದುದನ್ನು ಕೇಳಿ ಲಕ್ಷ್ಮೀಶನಿಗೆ ಏನು

ಉತ್ತರವನ್ನೂ ಕೊಡಲು ತೋಚದೆ, "ಮೋಟಾರಿನಲ್ಲಿ ಮಲಗಿದ್ದವನಿಗೆ ಏನಾದರೂ ಆಗಿರಬಹುದು" ಎಂದು ಯೋಚಿಸಿ, ಆತನನ್ನು ನೋಡಲು ಮೋಟಾರಿನ ಒಳಗೆ ತಲೆ ಹಾಕಿದನು. ಒಡನೆ ಮೋಟಾರಿನೊಳಗಿದ್ದವರು ಲಕ್ಷ್ಮೀಶನ ಕೈಗಳನ್ನು ಬಲವಾಗಿ ಹಿಡಿದುಕೊಂಡು ಮೋಟಾರಿನೊಳಗೆ ಎಳೆದುಕೊಂಡರು. ಕೂಡಲೆ ಮೋಟಾರು ಅಲ್ಲಿ ಕ್ಷಣಕಾಲವೂ ನಿಲ್ಲದೆ ಅತಿವೇಗವಾಗಿ ಹೊರಟು ಹೋಯಿತು. ಇದೆಲ್ಲವೂ ಒಂದೇ ಕ್ಷಣದಲ್ಲಿ ನಡೆದುದಾದುದರಿಂದಲೂ, ಮಧ್ಯಾಹ್ನಕಾಲವಾದುದರಿಂದಲೂ ರಸ್ತೆಯಲ್ಲಿ ಹೆಚ್ಚು ಜನಸಂಚಾರವಿಲ್ಲದೆ ಇದ್ದುದರಿಂದ ನಡೆದ ವಿಷಯವು ಇಂಥದೆಂಬದು ಯಾರಿಗೂ ಸರಿಯಾಗಿ ತಿಳಿಯಲಿಲ್ಲ.

"ಮಧ್ಯಾಹ್ನ ಒಂದು ಗಂಟೆಗೆ ಸರಿಯಾಗಿ ಬರುವೆನು" ಎಂದು ಹೇಳಿ ಪ್ರಾತಃಕಾಲದಲ್ಲಿ ಹೊರಟು ಹೋದ ಲಕ್ಷ್ಮೀಶನು ಮಧ್ಯಾಹ್ನ ಮೂರು ಗಂಟೆಯಾದರೂ ಬರದೇ ಇದ್ದದ್ದನ್ನು ನೋಡಿ ಮೋಹನನು ಪ್ರಿಯನಾಥನನ್ನು ಕುರಿತು "ಇದೇನು ಕಾರಣ? ಲಕ್ಷ್ಮೀಶನು ಇನ್ನೂ ಬರಲಿಲ್ಲ. ಮಧ್ಯಾಹ್ನದ ಊಟವೂ ಅವನಿಗೆ ಆಗಲಿಲ್ಲ" ಎಂದನು.

ಪ್ರಿಯನಾಥನು "ಈಗ ಬರಬಹುದು" ಎಂದನು. ಸಾಯಂಕಾಲ ಆರು ಗಂಟೆಯಾದರೂ ಲಕ್ಷ್ಮೀಶನು ಬರಲಿಲ್ಲ ಲಕ್ಷ್ಮೀಶನು ಅಪಹರಿಸಲ್ಪಟ್ಟಾಗ ಮೋಹನನ ಮನೆಯ ಬಾಗಿಲಿನಲ್ಲಿ ಯಾರೂ ನಿಂತಿರಲಿಲ್ಲ. ಸ್ವಲ್ಪ ಹಿಂದೆ ಮುಂದೆ ಇರತಕ್ಕ ದಾರಿಗರು ಆ ಕಾರ್ಯವನ್ನು ನೋಡಿದ್ದರೂ, ಲಕ್ಷ್ಮೀಶನು ದಾರಿಯಲ್ಲಿ ಬರುತ್ತಿದ್ದಾಗ ಹಿಡಿಯಲ್ಪಟ್ಟದ್ದರಿಂದ ಹಿಡಿಯಲ್ಪಟ್ಟವನು ಯಾರೆಂಬುದನ್ನು ತಿಳಿಯಲು ಅವರಿಗೂ ಅಸಾಧ್ಯವಾಗಿತ್ತು.

ಸಾಯಂಕಾಲ ಏಳು ಗಂಟೆಯ ಸಮಯದಲ್ಲಿ ಹೊರಗೆ ತಿರುಗಾಡಲು ಹೋಗಿದ್ದ ಮೋಹನನ ಮಿತ್ರ ಗುಣಾನಂದನೆಂಬೊಬ್ಬನು ಮನೆಗೆ ಬಂದು ಮೋಹನನ ಕೈಯಲ್ಲೊಂದು ಕಾಗದವನ್ನಿತ್ತನು. ಮೋಹನನು ಆ ಕಾಗದವನ್ನು ನೋಡಿದನು.

"ನಿನ್ನ ಅಕೃತ್ಯಕ್ಕೆ ತಕ್ಕ ಫಲವನ್ನು ಅನುಭವಿಸುತ್ತಿರುವಿ. ಇದು ಸ್ವಲ್ಪವೇ ಸರಿ. ಇನ್ನೂ ಅನುಭವಿಸಲು ಸಿದ್ಧನಾಗು. ಇತಿ ಸತೀಶ."

ಮೋಹನನು ಗುಣಾನಂದನನ್ನು ಕೇಳಿದನು: "ಈ ಕಾಗದವು ನಿನಗೆ ಅಲ್ಲಿ ಹೇಗೆ ಸಿಕ್ಕಿತು?

ಗುಣಾನಂದ—ನಾನು ಇತ್ತ ಕಡೆಗೆ ಬರುತ್ತಿದ್ದಾಗ ಒಂದು ಮೋಟಾರು ವೇಗವಾಗಿ ಬರುತ್ತಿದ್ದು, ಅದರೊಳಗಿನಿಂದ ಈ ಕಾಗದವು ನನ್ನ ಮೇಲೆ ಎಸೆಯಲ್ಪಟ್ಟು, ಮೋಟಾರು ಅತಿವೇಗವಾಗಿ ಹೊರಟು ಹೋಯಿತು.

ಮೋಹನ—ಮೋಟಾರಿನ ನಂಬರನ್ನು ನೋಡಿದ್ದೆಯಾ?

ಗುಣಾನಂದ—ನಂಬರ್ ೨೦೦೦

ಮೋಹನ (ಪ್ರಿಯನಾಥನನ್ನು ಕುರಿತು)—ಮೋಟಾರಿನ ನಂಬರ್ ತಿಳಿದಿರುವುದರಿಂದ ಸ್ವಲ್ಪ ಅನುಕೂಲವಾಯಿತು. ಈತನೇ ಲಕ್ಷ್ಮೀಶನನ್ನು ಸೆರೆ ಹಿಡಿದಿರಬಹುದೆಂದು ಊಹಿಸಬಹುದಾಗಿದೆ. ನೋಡು. ಕಾಗದವು ಮಾರ್ಮಿಕವಾಗಿದೆ, ಎಂದು ನುಡಿದು ಮೋಹನನು ಆ ಕಾಗವನ್ನು ಪ್ರಿಯನಾಥನಿಗೆ ಕೊಟ್ಟನು. ಪ್ರಿಯನಾಥನು ಅದನ್ನೋದಿ "ಯಾವ ಸತೀಶ" ಎಂದು ಕೇಳಿದನು.

ಮೋಹನ—ಏನೋ ಒಂದೂ ತಿಳಿಯುವದಿಲ್ಲ. ಈ ಕಾಗದವನ್ನು ನಂಬುವಂತಿಲ್ಲ. ಹೆಸರನ್ನೂ ನಂಬುವಂತಿಲ್ಲ. ಸಿಟ್ಟಿನಿಂದ ಹೊರಟು ಹೋದ ಕೋಮಲೆಯು ಹೀಗೆ ಆರಂಭಿಸಿರುವಳೇ?

ಗುಣಾನಂದ—ಮೋಟಾರಿರಲ್ಲಿ ಹೆಂಗಸರಿದ್ದಂತೆ ತೋರಲಿಲ್ಲ.

ಮದನ—ಪ್ರಮಾಣವನ್ನು ಮಾಡಿ ಈಗ ಸನ್ಮಾರ್ಗಿಯಾಗಿರುವ ಸುರೇಂದ್ರನಾಥನು ಅದಕ್ಕೆ ಒಪ್ಪಲಾರನು. ಕೋಮಲೆಗಾದರೂ ಇಂತಹ ಸಾಹಸವು ಹೇಗೆ ಬಂದೀತು. ಇದು ರಾಕಾಚಂದ್ರನ ಕೆಲಸವಿದ್ದರೂ ಇರಬಹುದು.

ಪ್ರಿಯನಾಥ—ರಾಕಾಚಂದ್ರನಿಗೆ ಗುಣಾನಂದನ ಪರಿಚಯವು ಹೇಗೆ ಉಂಟಾಯಿತು? ಮತ್ತು ಲಕ್ಷ್ಮೀಶನ ಪರಿಚಯುವಾದರೂ ಹೇಗೆ? ಲಕ್ಷ್ಮೀಶನನ್ನು ಸೆರೆ ಹಿಡಿದಿರುವವರೆಂದೇ ಹೇಗೆ ತಿಳಿಯಲು ಸಾಧ್ಯವು?

ಮೋಹನ—ಕಾಗದದಿಂದ ಲಕ್ಷ್ಮೀಶನನ್ನು ಸೆರೆ ಹಿಡಿದಿರುವಂತೆ ಸೂಚನೆಯು ತೋರುವದಿಲ್ಲವೇ? ಆದರೆ ಗುಣಾನಂದನ ಪರಿಚಯವು ರಾಕಾಚಂದ್ರನಿ

ಗಿರುವದು ಸಂದೇಹವಾಗಿದೆ

ಮದನ—ರಾಕಾಚಂದ್ರನು ಈಗ ಯಮುನಾಪುರಿಯಲ್ಲಿ ಇರುವನೋ ಇಲ್ಲವೋ ಗೊತ್ತಾಗುವದಿಲ್ಲ. ಮೊದಲು ಇದ್ದ ಬಿಡಾರದಲ್ಲಿ ಅವರಿಬ್ಬರೂ ಈಗ ಕಾಣಿಸುವದಿಲ್ಲ.

ಪ್ರಿಯನಾಥ—ಸುವರ್ಣನಗರಕ್ಕೆ ಹೊರಟು ಹೋಗಿ ತಿರುಗಿ ಈಗ ಯಾಕೆ ಬಂದಿರಲಾರರು?

ಮೋಹನ—ರಾಕಾಚಂದ್ರನಾಗಿದ್ದರೆ ಹೀಗೆ ಕಾಗದವನ್ನು ಬರೆಯು ವನೇ? ಮತ್ತು ಗುಣಾನಂದನ ಪರಿಚಯುವನ್ನು ಮಾಡಿಕೊಂಡ ಮೇಲೆ ಆತನನ್ನು ಹಿಂಬಾಲಿಸಿ ಈ ನಮ್ಮ ಸ್ಥಳವನ್ನು ಯಾಕೆ ಗೊತ್ತುಹಚ್ಚಲಿಲ್ಲ?

ಪ್ರಿಯನಾಥ:—ಮುಂಚೆಯೇ ಈ ಮನೆಯನ್ನು ಗುರುತಿಸಿದ್ದರೂ ಇರಬಹುದು.

ಮೋಹನ—ರಾಕಾಚಂದ್ರನೇ ಆಗಿದ್ದರೆ, ಈ ಮನೆಯನ್ನು ಮೊದಲೇ ಗುರುತಿಸಿದ್ದರೆ ಇಷ್ಟರಲ್ಲಿಯೇ ಪೋಲೀಸರೊಡನೆ ಬಂದು ಈ ಮನೆಯನ್ನು ಮುತ್ತುತ್ತಿದ್ದನು.

ಪ್ರಿಯನಾಥ—ಹಾಗಾದರೆ ಈ ಕೆಲಸವನ್ನು ನಡೆಸಿದಾತನು ರಾಕಾ ಚಂದ್ರನಲ್ಲವೆಂದೇ ನೀನು ಊಹಿಸುವಿಯಾ?

ಮೋಹನ—ಇರತಕ್ಕ ಸ್ಥಿತಿಯನ್ನು ಪರೀಕ್ಷಿಸಿದರೆ ಹಾಗೆಯೇ ತೋರಿ ಬರುತ್ತಿದೆ. ಹಿಂದೆ ಮೋಸಹೊಂದಿದ್ದ ಧನಿಕರಲ್ಲಿ ಯಾರಾದರೂ ಅಂತಹ ಸಾಹಸ ಉಳ್ಳವರು ಇದ್ದರೆ ಈ ಕಾರ್ಯವನ್ನು ಮಾಡಬಹುದು. ಶತ್ರುಗಳೇ ಈ ಕಾರ್ಯವನ್ನು ಮಾಡಿದ್ದರೆ ಲಕ್ಷ್ಮೀಶನನ್ನು ತುಂಬಾ ಪೀಡಿಸಬಹುದು.

ಮದನ—ಇದೊಂದು ಈಗ ಪೇಚಾಟವಾಗಿದೆ. ಮೋಟಾರಿನ ನಂಬ ರನ್ನು ಇಟ್ಟುಕೊಂಡು ಪ್ರಕೃತ ಸಮಯದಲ್ಲಿ ಹುಡುಕಬೇಕಾಗಿದೆ.

ಪ್ರಿಯನಾಥ—ಸದ್ಯಕ್ಕೆ ನಮಗಿರುವುದು ಇದೊಂದೇ ಉಪಾಯ; ಆದರೆ ಮೋಟಾರಿನ ನಂಬರನ್ನು ಮೋಸಗೊಳಿಸಿದ್ದರೆ ಈ ಉಪಾಯವೂ ಪ್ರಯೋಜನವಿಲ್ಲ.

ಮೋಹನ—ಈ ಕಾಗದವನ್ನು ನೋಡಿದರೆ ನಮ್ಮ ಮೇಲೆ ಇನ್ನು

ಕಠಿಣ ಪ್ರಸಂಗವು ನಡೆಯುವಂತೆ ತೋರುತ್ತಿದೆ ಎಲ್ಲರೂ ಜಾಗರೂಕರಾಗಿ ತಿರುಗಬೇಕು.

ಎಲ್ಲರೂ ವೇಷಧಾರಿಗಳಾಗಿ ಅಲ್ಲಿಂದ ಹೊರಟು ಹೋದರು. ಮೋಹನನು ಅಲ್ಲಲ್ಲಿ ಸಂಚರಿಸುತ್ತಾ ಹೋಗುತ್ತಿದ್ದಾಗ ಎದುರಾಗಿ ಮೋಟಾರೊಂದು ಆ ಮಾರ್ಗವಾಗಿ ಬರುತಲಿತ್ತು. ಆ ಮೋಟಾರಿನ ನಂಬರ್ ೨೦೦೦ವೇ ಆಗಿತ್ತು. ಮೋಹನನು ನಂಬರನ್ನು ನೋಡಿ ತವಕದಿಂದ ಮೋಟಾರನ್ನೇ ನೋಡುತ್ತಾ ನಿಂತನು. ಮೋಟಾರಿನಲ್ಲಿ ಐಯ್ಯಂಗಾರ್ಯರಂತೆ ಲಲಾಟದಲ್ಲಿ ನಾಮವನ್ನೂ, ಮಾರ್ವಾಡಿಗಳಂತೆ ತಲೆಗೆ ರುಮಾಲನ್ನೂ ಧರಿಸಿದ್ದ ಒಬ್ಬ ಡ್ರೈವರನಲ್ಲದೆ ಇನ್ನಾರೂ ಇರಲಿಲ್ಲ. ಡ್ರೈವರನು ಮೋಟಾರನ್ನು ಆತುರನಾಗಿ ನೋಡುತ್ತಾ ನಿಂತಿದ್ದ ಮೋಹನನ ಮೇಲೆ ಕಾಗದವೊಂದನ್ನು ಎಸೆದು, ವೇಗವಾಗಿ ಹೊರಟು ಹೋದನು. ಕಾಗದದಲ್ಲಿ ಎರಡೇ ಪಂಗ್ತಿಗಳಿದ್ದವು.

"ಎಷ್ಟು ಜಾಗರೂಕನಾಗಿ ತಿರುಗುತ್ತಿರುವಿ? ನಿನ್ನನ್ನು ಭಂಗಗೊಳಿಸುವುದು ಏನೂ ಕಷ್ಟವಿಲ್ಲ. ಇನ್ನಾದರೂ ಎಚ್ಚರಿಕೆಯಿಂದ ಸಂಚರಿಸು. ಇತಿ

ಸತೀ.ಶ"

ಮೋಹನನು ಕಾಗದವನ್ನೋದಿ ಆಶ್ಚರ್ಯಪಟ್ಟನು.

ಹೀಗೆ ಇನ್ನೊಂದೆಡೆಯಲ್ಲಿ ಹೋಗುತಲಿದ್ದ ಪ್ರಿಯನಾಥನು ಅಲ್ಲಲ್ಲಿ ಸಂಚರಿಸಿ ವಿಮಲಾ ಬೀದಿಗೆ ಬಂದನು ಆ ಬೀದಿಯಲ್ಲಿ ಪ್ರಿಯನಾಥನು ನಡೆದು ಹೋಗುತ್ತಿರಲು, ಹಿಂದಿನಿಂದ ಒಂದು ಮೋಟಾರು ವೇಗವಾಗಿ ಬರುತಲಿತ್ತು. ಆ ಮೋಟಾರಿನ ನಂಬರು ೨೦೦೦ ಇದ್ದದ್ದನ್ನು ನೋಡಿ ಪ್ರಿಯನಾಥನು ಆ ಮೋಟಾರನ್ನು ನಿರೀಕ್ಷಿಸಲು ಹವಣಿಸಿದನು. ಆ ಮೋಟಾರು ವೇಗವಾಗಿ ಬರುತ್ತಿದ್ದು, ಪ್ರಿಯನಾಥನು ನಿಂತಿದ್ದ ಸ್ಥಳಕ್ಕಿಂತ ಸ್ವಲ್ಪ ಮುಂದೆ ಇರುವ ಒಂದು ಗೇಟಿನೊಳಗೆ ಪ್ರವೇಶಿಸಿತು.

ಪ್ರಿಯನಾಥನು ಅದನ್ನು ನೋಡಿ ಆ ಗೇಟಿನ ಕಡೆಗೆ ಹೋದನು. ಅಲ್ಲಿ ಗೇಟನ್ನು ದಾಟಿದೊಡನೆ ದೊಡ್ಡದಾದೊಂದು ಉಪವನವಿದ್ದು, ಅದರ ಮಧ್ಯದಲ್ಲಿ ಒಂದು ಭವನವಿದ್ದಿತು. ಕಾವಲಿಲ್ಲದ ಆ ಗೇಟಿನೊಳಗೆ ಪ್ರಿಯನಾಥನು ನಿಶ್ಶಬ್ದವಾಗಿ ಪ್ರವೇಶಿಸಿದನು. ಪ್ರಿಯನಾಥನಿಗೆ ಆ ಉದ್ಯಾನವನ

ವೆಲ್ಲವೂ ನಿರ್ಜನವಾಗಿ ನಿಶ್ಶಬ್ದವಾಗಿ ತೋರಿತು. ಮನೆಯ ಮುಂಭಾಗ ದಲ್ಲಿ ನಿಂತಿದ್ದ ಮೋಟಾರೂ ಈಗ ಶೂನ್ಯವಾಗಿದ್ದಿತು. "ಇದೇನು? ಈಗ ತಾನೆ ಈ ಮೋಟಾರಿನಲ್ಲಿ ಬಂದವನು ಎಲ್ಲಿಗೆ ಹೋಗಿರುವನು? ಮನೆ ಯೆಲ್ಲವೂ ನಿಶ್ಶಬ್ದವಾಗಿದೆ. ಇದೆಲ್ಲವೂ ಮೋಸವಾಗಿ ತೋರುತ್ತಿದೆ ಇದೆಲ್ಲ ವನ್ನೂ ಸಂಪೂರ್ಣವಾಗಿ ಪರೀಕ್ಷಿಸಲೇ ಬೇಕು" ಎಂದು ಪ್ರಿಯನಾಥನು ಯೋಚಿಸಿ, ಒಳಹೊಕ್ಕ ಗೇಟಿನಿಂದ ಹೊರಗೆ ಹೋಗಿ, ಪಕ್ಕದ ಗೋಡೆ ಯಲ್ಲಿ ಒಂದು ಚಿಹ್ನೆಯ ಗೆರೆಯನ್ನು ಎಳೆದನು. "ಯಾವುದಾದರೂ ಅಪರಿ ಚಿತವಾದ ಮನೆಯನ್ನು ಪ್ರವೇಶಿಸುವ ಸಂದರ್ಭವು ಒದಗಿದರೆ ಮನೆಯ ಹೊರಗೊಂದು ಚಿಹ್ನೆಯನ್ನು ಮಾಡುವದು ಮೋಹನನ ಸಂಕೇತವಿದ್ದಿತು. ಆ ಸಂಕೇತದಿಂದ ಒಳಗೆ ಪ್ರವೇಶಿಸಿದವರು ಅದೃಷ್ಟವಶಾತ್ತಾಗಿ ಕಷ್ಟಕ್ಕೆ ಸಿಕ್ಕಿದರೆ ಮೋಹನನ ಇತರ ಮಿತ್ರರಿಗೆ ಅದು ತಿಳಿಯಬಹುದಾಗಿತ್ತು." ಪ್ರಿಯನಾಥನು ಅಲ್ಲಿಂದ ತಿರುಗಿ ಉದ್ಯಾನವನವನ್ನು ಪ್ರವೇಶಿಸಿದನು. ಆಗಲೂ ಅಲ್ಲಿ ನಿಶ್ಶಬ್ದವಾಗಿತ್ತು. ಪ್ರಿಯನಾಥನು ಆ ಮನೆಗೊಂದು ಬಾರಿ ಸುತ್ತು ಹಾಕಿದನು. ಆಗಲೂ ಶಬ್ದವಿರಲಿಲ್ಲ. ಬಳಿಕ ಪ್ರಿಯನಾಥನು ಮನೆಯನ್ನು ಪ್ರವೇಶಿಸಿದನು. ಪ್ರಿಯನಾಥನು ಕೋಣೆಯೊಂದನ್ನು ಹೊಕ್ಕೊಡನೆ ಬಾಗಿಲು ಮುಚ್ಚಲ್ಪಟ್ಟು ಅಲ್ಲಿಯೇ ಸೆರೆಯಾಳಾದನು!

ಮಾರನೇ ದಿನ ಅದೇ ಬೀದಿಯಲ್ಲಿ ಹೋಗುತಲಿದ್ದ ಮದನನು ಪ್ರಿಯ ನಾಥನು ಮಾಡಿದ್ದ ಗುರುತನ್ನು ಕಂಡು ಆ ಮನೆಯನ್ನು ಗುರತಿಸಿಕೊಂಡು, ಹಿಂದಿರುಗಿ ವೇಗವಾಗಿ ಮನೆಗೆ ಬಂದನು. ತಾನು ನೋಡಿದ ಗುರತನ್ನು ಮೋಹನನಿಗೆ ಹೇಳಿದನು "ಇದುವರೆಗೆ ವಿಮಲಾಬೀದಿಗೆ ನಿಮ್ಮಲ್ಲಿ ಯಾರಾ ದರೂ ಹೋಗಿದ್ದಿರಾ?" ಎಂದು ಮೋಹನನು ಕೇಳಿದನು. ಎಲ್ಲರೂ 'ಇಲ್ಲ' ವೆಂದರು.

ಮೋಹನ:—ಹಾಗಾದರೆ ಈ ಗುರತನ್ನು ಯಾರು ಮಾಡಿದರು? ಪ್ರಿಯನಾಥ ಲಕ್ಷ್ಮೀಶರು ಈಗ ಕಾಣದೆ ಇರುವುದರಿಂದ ಇವರಿಬ್ಬರಲ್ಲಿ ಯಾರು ಮಾಡಿದವರು ಎಂಬುದನ್ನು ತಿಳಿಯಲಾಗುವುದಿಲ್ಲ. ಯಾರಾದರೂ ಇರಲಿ. ಇಬ್ಬರಲ್ಲೊಬ್ಬನು ಆ ಮನೆಯಲ್ಲಿ ಸಿಕ್ಕಿ ಬಿದ್ದಿರುವನು; ಆದರೆ

ಇನ್ನೊಂದು ಸಂಶಯವಿದೆ. ಆಲೀ ಬಾಬನ ಕಥೆಯಲ್ಲಿ ಮಾರ್ಜೀನೆಯು ಗುರತು ಮಾಡಿದಂತೆ ಅಲ್ಲಿಯೂ ಹಾಗೆ ಗುರತನ್ನು ಶತ್ರುಗಳು ಬೇರೆ ಕಡೆ ಯಲ್ಲಿ ಮಾಡಿಬಿಟ್ಟರೆ ಆಗ ಏನು ಮಾಡೋಣ?

ಮದನ—ಆಲೀ ಬಾಬನ ಕಥೆಯ ಕಳ್ಳನಂತೆ ನಾನು ಅಷ್ಟೇನೂ ಮೂಢನಲ್ಲ. ಆ ವಿಮಲಾ ಬೀದಿಯ ಪರಿಚಯವು ನನಗೆ ಚೆನ್ನಾಗಿದೆ. ಆ ಮನೆಯನ್ನೂ ಚೆನ್ನಾಗಿ ನೋಡಿ ಬಂದಿರುವೆನು. ನಮ್ಮ ಶತ್ರುಗಳಿಗಾದರೂ ಈ ನಮ್ಮ ಸಂಕೇತದ ಪರಿಚಯವು ಆಗಲಾರದು. ಹಾಗೆ ಉಂಟಾದರೆ ಇನ್ನು ನಾವು ನಮ್ಮ ಕಾರ್ಯದಿಂದ ನಿವೃತ್ತರಾಗಬೇಕಾದೀತು.

ಗುಣಾನಂದ—ಗುಪ್ತವಾದ ಆ ಚಿಹ್ನೆಯನ್ನು ಕಂಡು ಹಿಡಿಯಲು ಯಾರಿಗೂ ಸಾಧ್ಯವಿಲ್ಲ.

ಮೋಹನ—ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಎಲ್ಲರೂ ಅಲ್ಲಿಗೆ ಹೋಗಬೇಕು. ಅಷ್ಟರೊಳಗೆ ಎಲ್ಲರೂ ಸಿದ್ಧರಾಗಿರ್ರಿ.

ಸಾಯಂಕಾಲ ಆರು ಗಂಟೆಯ ಸಮಯದಲ್ಲ ಬೀದಿಯ ಬಾಗಿಲಿನಲ್ಲಿ ಮದನನು ನಿಂತಿದ್ದನು. ಆ ಸಮಯದಲ್ಲಿ ಒಂದು ಮೋಟಾರು ವೇಗವಾಗಿ ಬಂದು ಆ ಮನೆಯ ಬಾಗಿಲಿನಲ್ಲಿ ನಿಂತಿತು. ಮೋಟಾರಿನಲ್ಲಿ ಒಬ್ಬ ಡ್ರೈವ ರನೂ, ಕುರೂಪಿಣಿಯಾದ ಒಬ್ಬ ಸ್ತ್ರೀಯೂ ಇದ್ದರು. ಮೋಟಾರು ನಿಂತೊ ಡನೆ ಆ ಕುರೂಪಿಣಿಯು ಮೋಟಾರಿನಿಂದಿಳಿದು ಮದನನು ನಿಂತಿದ್ದ ಮನೆಯ ಕಡೆಗೆ ಬಂದಳು. ಮದನನು "ಇದು ಯಾವ ಹೆಂಗಸು?" ಎಂದು ಯೋಚಿ ಸುತ್ತಾ ಬಾಗಿಲಿನಲ್ಲಿಯೇ ನಿಂತಿದ್ದನು. ಕುರೂಪಿಣಿಯು ಮದನನ ಹತ್ತಿರ ಬಂದು ಕೆಂಪುಬಣ್ಣದ ಒಂದು ಲಕ್ಕೋಟೆಯನ್ನು ಕೊಡಲು ಕೈ ಮುಂದು ಮಾಡಿದಳು. ಮೋಟಾರು ಅಲ್ಲಿ ಬಂದು ನಿಂತಿರುವ ಮೊದಲ್ಗೊಂಡು ಸಂದೇಹಪಡುತ್ತಾ ನಿಂತಿದ್ದ ಮದನನು ಇದನ್ನು ಪರೀಕ್ಷಿಸಬೇಕೆಂದು ಯೋಚಿಸಿ ಮೆಲ್ಲಗೆ ಕದದ ಒಳಭಾಗದಲ್ಲಿದ್ದ ಗುಂಡಿಯೊಂದನ್ನು ಒತ್ತಿದನು. ಒಡನೆ ಮನೆಯೊಳಗೆ ಸದ್ದಾಗಿ ಮೋಹನನೂ ಅವನ ಮಿತ್ರರೂ ಬಾಗಿಲಿಗೆ ಬಂದರು. ಮದನನು ಲಕ್ಕೋಟೆಯನ್ನು ತೆಗೆದುಕೊಳ್ಳದೆ ನಿಂತಿದ್ದನ್ನು ನೋಡಿ ಆ ಕುರೂಪಿಣಿಯು ಆ ಲಕ್ಕೋಟೆಯನ್ನು ಮದನನ ಮೈಮೇಲೆ

ಎಸೆದು ಮೋಟಾರಿನ ಕಡೆಗೆ ಹೊರಟು ಹೋದಳು. ಕುರೂಪಿಣಿಯು ಮೋಟಾರನ್ನು ಹತ್ತಿದೊಡನೆ ಮೋಟಾರು ಅತಿವೇಗವಾಗಿ ಹೊರಟು ಹೋಯಿತು. ಮದನನು ಕುರೂಪಿಣಿಯು ಮಾಡಿದ ಕೆಲಸವನ್ನು ನೋಡುತ್ತ ಬಾಗಿಲಿನಲ್ಲಿ ಸ್ತಬ್ಧನಾಗಿ ನಿಂತಿದ್ದನು. ಮೋಟಾರು ಕಣ್ಣಿಗೆ ಕಾಣಿಸದೆ ಹೊರಟು ಹೋದ ಮೇಲೆ ನೆಲದ ಮೇಲೆ ಬಿದ್ದಿದ್ದ ಲಕ್ಕೋಟೆಯನ್ನು ಕೈಯಲ್ಲಿ ತೆಗೆದುಕೊಂಡು ಒಳಗೆ ನಿಂತು ನೋಡುತ್ತಿದ್ದ ಮೋಹನನಿಗೆ ಕೊಟ್ಟನು. ಬಳಿಕ ಬಾಗಿಲನ್ನು ಮುಚ್ಚಿ ಎಲ್ಲರೂ ಒಳಗೆ ಹೋದರು. ಮೋಹನನು ಲಕ್ಕೋಟೆಯನ್ನು ಹರಿದು ಅದರೊಳಗೆ ಇದ್ದ ಕಾಗದವನ್ನು ಓದಿದನು.

"ಮೋಹನ! ನಿನ್ನ ವಾಸಸ್ಥಳವನ್ನು ಕಂಡು ಹಿಡಿದಿರುವೆನು. ಈ ದಿನ ರಾತ್ರಿ ಅದನ್ನು ಧ್ವಂಸಗೊಳಿಸುವೆನು. ಜಾಗರೂಕನಾಗಿ ನಿಂತಿರು. ರಾತ್ರಿ ಎರಡು ಗಂಟೆಯ ಸಮಯದಲ್ಲಿ ಬರುವೆನು."

ಹೀಗೆ ಮೋಹನನು ಕಾಗದವನ್ನೋದಿ ಹೇಳಿದನು "ಎರಡು ಗಂಟೆಯ ಸಮಯದಲ್ಲಿ ಬರಬಹುದಷ್ಟೆ? ಬರಲಿ. ಅಷ್ಟರೊಳಗೆ ಆತನ ಗತಿಯು ಏನಾಗುವುದೋ ನೋಡುತ್ತಿರಲಿ."

ಮದನ:—ಈಗ ಬಂದಿದ್ದ ಆ ಕುರೂಪಿಣಿಯನ್ನು ಹಿಡಿಯಬೇಕೆಂದು ನಿಮ್ಮೆಲ್ಲರನ್ನೂ ಕರೆದೆನು; ಆದರೆ ಅಷ್ಟರೊಳಗೆ ಆಕೆಯು ಪರಾರಿಯಾದಳು.

ಗುಣಾನಂದ:—ಶತ್ರುಗಳ ಉಪಾಯವು ಚೆನ್ನಾಗಿದೆ. "ಸ್ತ್ರೀಯ ಮೇಲೆ ಯಾರು ತಾನೆ ಕೈಮಾಡಬಲ್ಲರು?" ಎಂಬುದನ್ನು ತಿಳಿದು ಆ ವೇಷವನ್ನು ಧರಿಸಿರಬೇಕು.

ಮೋಹನ:—ಆಕೆಯು ವೇಷಧಾರಿಣಿಯೇ ಇರಬೇಕೆಂದು ನಾನೂ ಊಹಿಸಿದೆನು. ಆಕೆಯು ಒಳಗೆ ಬಂದಿದ್ದರೆ ನಾವು ಪರೀಕ್ಷಿಸಬಹುದಾಗಿತ್ತು. ಆಕೆಯು ಹೊರಗೆ ನಿಂತಾಗ ನಾವು ಹೊರಗೆ ಹೋಗಿ ಅವಳನ್ನು ಪ್ರಕಟವಾಗಿ ನಿರ್ಬಂಧಿಸುವುದು ನಮಗೇ ಕೇಡನ್ನುಂಟು ಮಾಡೀತೆಂದು ಸುಮ್ಮನಿದ್ದೆನು. ನಮ್ಮ ಯಾವ ಉಪಾಯಕ್ಕೂ ಅವಕಾಶವನ್ನೀಯದೆ ಆಕೆಯು ಹೊರಟು ಹೋದಳು. ಹೇಗಾದರೂ ಆಗಲಿ, ಈ ದಿನ ರಾತ್ರಿ ಶತ್ರುವಿನ ಪರಿಚಯವಾದೀತು.

ರಾತ್ರಿ ಹನ್ನೊಂದು ಗಂಟೆಯ ಸಮಯದಲ್ಲಿ ಎಲ್ಲರೂ ಸೇರಿ ಎರಡು ಮೋಟಾರುಗಳಲ್ಲಿ ಕುಳಿತು ತಮ್ಮ ಕಾರ್ಯಕ್ಕಾಗಿ ಹೊರಟು ನಡೆದರು. ಮದನನು ತಾನು ಗುರ್ತಿಸಿದ ಮನೆಯನ್ನು ತೋರಿಸಿದನು. ಮನೆಗೆ ಹೊರಗಿನ ಗೇಟು ಇತ್ತು. ಮೋಟಾರುಗಳು ಗೇಟಿನಿಂದ ಒಳಹೊಕ್ಕವು. ಆ ಕಾಲದಲ್ಲಿ ಮನೆಯು ನಿಶ್ಶಬ್ದವಾಗಿತ್ತು. ಮೋಟಾರುಗಳನ್ನು ಉದ್ಯಾನದ ಒಂದೆಡೆಯಲ್ಲಿ ನಿಲ್ಲಿಸಿದರು. ಮೋಟಾರುಗಳ ಕಾವಲಿಗೊಬ್ಬನು ನಿಂತು ಉಳಿದವರು ಸಶಸ್ತ್ರರಾಗಿ ಮನೆಯ ಕಡೆಗೆ ಹೋದರು. ಮನೆಯ ಎಲ್ಲಾ ಭಾಗಗಳಲ್ಲಿಯೂ ಹುಡುಕಿದರು. ಏನೂ ಪ್ರಯೋಜನವಾಗಲಿಲ್ಲ. ಮನೆಯು ಶೂನ್ಯವಾಗಿತ್ತು. ಅಲ್ಲಿ ಯಾರೂ ವಾಸವಿರುವಂತೆಯೇ ತೋರಲಿಲ್ಲ. ಯಾರಾದರೂ ಅಲ್ಲಿ ಶತ್ರುಗಳು ದೊರಕಿದ್ದರೆ ಅವರನ್ನು ಕಡಿದು ಬಿಡುವಂತಹ ಕೋಪವು ಎಲ್ಲರಲ್ಲಿಯೂ ಉದ್ಭವಿಸಿತ್ತು; ಆದರೆ ಮಾಡುವುದೇನು? ಕಣ್ಣಿಗೆ ಬೀಳಲಿಲ್ಲ. ಮೋಟಾರನ್ನು ನಿಲ್ಲಿಸಿರುವ ಸ್ಥಳಕ್ಕೆ ಹಿಂದಿರುಗಿದರು. ಅಲ್ಲಿ ಎರಡೂ ಮೋಟಾರುಗಳ ಒಂದೊಂದು ಚಕ್ರವು ಅಪಹರಿಸಲ್ಪಟ್ಟಿತ್ತು. ಕಾವಲಿಗೆ ನಿಂತಿದ್ದ ಮನುಷ್ಯನು ಬಂಧಿತನಾಗಿದ್ದನು. ಮೋಹನನೂ ಅವನ ಮಿತ್ರರೂ ಆಶ್ಚರ್ಯದಿಂದ ಚಕಿತರಾದರು. ಕ್ರೋಧವು ಇಮ್ಮಡಿಯಾಯಿತು. ಅಪಹರಿಸಲ್ಪಟ್ಟ ಚಕ್ರದ ಸ್ಥಾನಕ್ಕೆ ಸೇರಿಸಲು ಬೇರೆ ಚಕ್ರವೂ ಇರಲಿಲ್ಲ. ಬಂಧಿತನಾಗಿದ್ದ ಮಿತ್ರರನ್ನು ಮೊದಲು ಬಿಡಿಸಿ "ಇಲ್ಲಿ ನಡೆದುದೇನು?" ಎಂದು ಕೇಳಿದರು.

ಆ ಪುರುಷನು ಹೇಳಿದನು:-"ಅಕಸ್ಮಾತ್ತಾಗಿ ನನ್ನ ಮೇಲೆ ಯಾರೋ ಬಿದ್ದು ಕಟ್ಟಿ ಉರುಳಿಸಿದರು. ಅನಂತರ ಮೋಟಾರುಗಳ ಚಕ್ರಗಳನ್ನು ಒಯ್ದರು."

ಮುಂದೆ ಯಾವ ಉಪಾಯವನ್ನು ಮಾಡಬೇಕೆಂದು ಯೋಚಿಸಿದರು. ಆ ಸ್ಥಳದಲ್ಲಿ ಯಾವ ವಿಷಯವನ್ನೂ ಬಾಯಿಬಿಟ್ಟು ಮಾತನಾಡುವಂತಿರಲಿಲ್ಲ. ಸಮೀಪದಲ್ಲಿಯೇ ಶತ್ರುಗಳು ತಮ್ಮನ್ನು ಹೊಂಚು ಹಾಕುತ್ತಿರಬಹುದೆಂಬ ಶಂಕೆಯು ಮೋಹನನಿಗೂ ಆತನ ಮಿತ್ರರಿಗೂ ಉಂಟಾಗಿತ್ತು. ಅದಕ್ಕಾಗಿ ಮೋಹನನು ತನ್ನ ಮಿತ್ರರನ್ನು ಕುರಿತು ಗುಪ್ತಭಾಷೆಯಿಂದ ಹೇಳಿದನು:

"ಓತಾವಣ್ಣು ಶಾಕ್ಷ್ನು ಆಗಿಡವೆಣದಡೇ ಶೋಘುರವು. ದಾವಿಲಯ್ಯಿಶಿದಿಲ ಭಶುಡೆಂಡು ಮರವ ಲೋಜಣೆ. ಮಾಘಯಿ. ಣೋದೋನ. ಣೀರು ಮೀಘ ಭೇವೆ ಬೇವೆಲಾಘಿ ಶೊವತು ಶೋಘಿವಿ. ಲಾವಾಡವೂ ಮದ್ದಘ ತ್ರಿಡವೆ ಜೆಣ್ಣಾಘಿ ಪೈಟೋವಿಷಿವಿ. ಕ್ಷ್ವಾನ ಶವೆನ ಆಟ್ಟೆ ಮಾಘಬಾದಡು."

(ಮೋಟಾರನ್ನು ಹಾಳುಮಾಡಿದರೆ ನಡದೇ ಹೋಗುವದು. ದಾರಿಯಲ್ಲಿ ಹಿಡಿಯಬಹುದೆಂದು ಅವರ ಯೋಚನೆ. ಆಗಲಿ. ನೋಡೋಣ. ನೀವು ಈಗ ಬೇರೆಬೇರೆಯಾಗಿ ಹೊರಟು ಹೋಗಿರಿ. ಯಾರಾದರೂ ಅಡ್ಡಗಟ್ಟಿದರೆ ಚೆನ್ನಾಗಿ ಕೈ ತೋರಿಸಿರಿ. ಪ್ರಾಣಹರಣ ಮಾತ್ರ ಆಗಬಾರದು.)

ಕೂಡಲೆ ಮೋಹನನ ಅಪ್ಪಣೆಯಂತೆ ಒಬ್ಬೊಬ್ಬರು ಒಂದೊಂದು ದಾರಿಯಿಂದ ವೇಗವಾಗಿ ಹೊರಟು ಹೋದರು. ಅಲ್ಲಿ ಮದನನು ಮಾತ್ರ ಮೋಹನನ ಹತ್ತಿರ ನಿಂತಿದ್ದನು. ಮೋಹನನು ಮದನನ ಹತ್ತಿರ ಗುಪ್ತ ಭಾಷೆಯಿಂದ ಏನನ್ನೋ ಹೇಳಿ ಯಾವುದೋ ಒಂದು ದಾರಿಯಿಂದ ಹೊರಟು ಹೋದನು. ಮದನನು ಗೇಟಿನಿಂದ ಹೊರಗೆ ಹೋಗಿ ಸ್ವಲ್ಪ ಹೊತ್ತು ನಿಂತು ತಿರುಗಿ ಗುಪ್ತವಾಗಿ ನಿಶ್ಶಬ್ದದಿಂದ ಉದ್ಯಾನವನ್ನು ಪ್ರವೇಶಿಸಿದನು. ಅಲ್ಲಿ ಒಂದೆಡೆಯಲ್ಲಿ ನಾಲ್ಕಾರು ಜನರು ಪಿಸುಪಿಸು ಮಾತನಾಡುತ್ತಿದ್ದರು. ಆ ಮಾತು ಮದನನಿಗೆ ಸ್ಪಷ್ಟವಾಗಿ ಕೇಳಿಸಲಿಲ್ಲ ಸ್ವಲ್ಪ ಹೊತ್ತಿನೊಳಗೆ ಮೋಟಾರೊಂದು ಹೊರಗೆ ಹೊರಡಲು ಸಿದ್ಧವಾಯಿತು. ಒಡನೆ ಅಲ್ಲಿ ಗುಸುಗುಸು ಮಾತನಾಡುತ್ತಿದ್ದವರು ಆ ಮೋಟಾರನ್ನು ಹತ್ತಿದರು. ಮೋಟಾರು ಅಲ್ಲಿಂದ ಮುಂದಕ್ಕೆ ಹೊರಡಲು ಆರಂಭವಾಯಿತು. ಅಷ್ಟರೊಳಗೆ ಮದನನು ಮುಂದೆ ಬಂದು ಕೈಯಲ್ಲಿದ್ದ ಒಂದು ದೊಡ್ಡ ದೊಣ್ಣೆಯಿಂದ ಮೋಟಾರಿನ ಮುಂಭಾಗದ ಕನ್ನಡಿಯ ಮೇಲೆ ಬಲವಾಗಿ ಬಡಿದುಬಿಟ್ಟನು. ಕನ್ನಡಿಯು ಮದನನ ಬಲವಾದ ಏಟಿನಿಂದ ಒಡೆದು ಚೂರುಚೂರಾಯಿತು. ಮೋಟಾರಿನಲ್ಲಿ ಕುಳಿತವರ ಮೈಗೂ ಕನ್ನಡಿಯ ಕೆಲವು ಚೂರುಗಳು ಚುಚ್ಚಿದವು. ಕ್ಷಣಮಾತ್ರದಲ್ಲಿ ಮದನನ ದೊಣ್ಣೆಯ ಇನ್ನೊಂದು ಏಟು ಮೋಟಾರಿನ ದೀಪದ ಮೇಲೆ ಬಿದ್ದು ಅದರ ಕನ್ನಡಿಯು ಒಡೆದು ದೀಪವು ಆರಿ ಹೋಯಿತು. ಒಡನೆ ಮದನನು ಅಲ್ಲಿಂದ ಪರಾರಿಯಾದನು!

ಮೋಟಾರಿಗೆ ಅಕಸ್ಮಾತ್ತಾಗಿ ಉಂಟಾದ ಈ ಅಸಾಹುತದಿಂದ ಮೋ-ಟಾರಿನಲ್ಲಿ ಕುಳಿತವರು ಭೀತರಾಗಿ ತಮ್ಮ ಮುಂದಿನ ಕಾರ್ಯವನ್ನು ಅಷ್ಟಕ್ಕೇ ನಿಲ್ಲಿಸಿದರು.

ಮೋಹನನೂ ಆತನ ಮಿತ್ರರೂ ನಿರಾತಂತಕವಾಗಿ ಮನೆಯನ್ನು ಸೇರಿದರು. ಮರುದಿನ ಮೋಹನನಿದ್ದ ಮನೆಯ ಹೊರಬಾಗಿಲಿನ ಸಂದಿ ಯಲ್ಲಿ ಒಂದು ಕಾಗದವು ಬಿದ್ದಿತ್ತು. ಅದರಲ್ಲಿ ಈ ಮೇರೆ ಬರೆದಿತ್ತು:

"ಮೋಹನಾ! ನಿನ್ನೆ ರಾತ್ರಿ ಸ್ವಲ್ಪ ಮೋಸವಾಯಿತು. ನಮ್ಮ ಮೋಟಾರು ಹಾಗೆ ಆಗದೆ ಇದ್ದಿದ್ದರೆ ನೀನು ದಾರಿಯಲ್ಲಿಯೇ ಸಿಕ್ಕಿ ಬೀಳು ತ್ತಿದ್ದಿ. ನಿನ್ನ ಮಿತ್ರರಿಬ್ಬರೂ ಮರಣಾವಸ್ಥೆಯಲ್ಲಿರುವರು. ಅವರನ್ನು ಬಿಡಿಸಲು ಕೂಡಲೆ ಸಿದ್ಧನಾಗು. ವಿಲಂಬವಾದರೆ ಅವರ ಶವಗಳನ್ನು ಮಾತ್ರ ನೋಡಬಹುದು. ನಾನು ಹೇಳಿದಂತೆ ಕೇಳಿದರೆ ಅವರನ್ನು ಬಿಡಿಸ ಲನುಕೂಲವಾಗಬಹುದು. ನಾನಂದಂತೆ ನಡೆಯಲು ನಿನಗೆ ಇಚ್ಛೆಯಿದ್ದರೆ ಈ ದಿನ ಸಾಯಂಕಾಲ ಹನ್ನೆರಡು ಗಂಟೆಯ ಸಮಯದಲ್ಲಿ ಯಾವುದೊಂದು ಆಯುಧವನ್ನೂ ತೆಗೆದುಕೊಳ್ಳದೆ ಏಕಾಕಿಯಾಗಿ ನಿನ್ನೆ ನೋಡಿರುವ ಮನೆಗೇ ಬರಬೇಕು. ಮುಂದಿನ ವಿಚಾರವನ್ನು ಅಲ್ಲಿಗೆ ಬಂದ ನಂತರ ತಿಳಿಯುವಿ. ಇತಿ.

ಸತೀಶ."

ಮೋಹನನು ಆ ಕಾಗದವನ್ನು ಓದಿ ಮಿತ್ರರೊಡನೆ ಆಲೋಚನೆ ಯನ್ನು ಮಾಡಿ, "ರಾತ್ರಿ ತಾನು ಅಲ್ಲಿಗೆ ಹೋಗುವುದೇ ಯುಕ್ತವು" ಎಂದು ನಿಶ್ಚಯಮಾಡಿ ಮಿತ್ರರ ಹತ್ತಿರ ಹೇಳಿದನು. "ಯಾವುದಿದ್ದರೂ ಈ ದಿನವೇ ನಿಶ್ಚಯವಾಗುವದು. ಸಾಧ್ಯವಾದರೆ ಈ ದಿನ ಈ ವಿಘ್ನದಿಂದ ಪಾರಾಗು ವೆನು; ಇಲ್ಲವೆ ನಾಶಹೊಂದುವೆನು. ನಿನ್ನೆ ನಡೆದ ಅಪಮಾನವು ನನ್ನ ಹೃದಯವನ್ನು ದಹಿಸುತ್ತಲಿದೆ. ನಮ್ಮಲ್ಲಿರುವ ಸಾಹಸವೆಲ್ಲವನ್ನೂ ಈ ದಿನ ತೋರಿಸಬೇಕು. ನಾನು ರಾತ್ರಿ ಅಲ್ಲಿಗೆ ಹೋಗುವೆನು. ಈ ದಿನ ನಿಮ ಗೆಲ್ಲರಿಗೂ ಮದನನೇ ನಾಯಕನು. ನಿನ್ನಂತೆಯೇ ಈ ದಿನವೂ ನೀವೆಲ್ಲರೂ ಆ ಮನೆಯ ಹತ್ತಿರದಲ್ಲಿ ಎಲ್ಲಾದರೂ ಗುಪ್ತವಾಗಿ ಕಾದು ನಿಂತಿರಬೇಕು. ಗುಂಡಿನ ಸದ್ದಾದೊಡನೆ ಸ್ವಲ್ಪವೂ ವಿಲಂಬವನ್ನು ಮಾಡದೆ ಬಲಾತ್ಕಾರ

ದಿಂದ ಮನೆಯೊಳಗೆ ನುಗ್ಗಬೇಕು. ದಾರಿಯಲ್ಲಿ ಅಡ್ಡಗಟ್ಟಲು ಬಂದವರನ್ನು ನಿರ್ದಯದಿಂದ ಹೊಡೆದು ಹಾಕಿರಿ. ಸ್ವಲ್ಪವೂ ದಯೆಯನ್ನಿಡಬೇಡಿರಿ. ಇದುವರೆಗೆ ನಾವು ದಯೆ ತೋರಿದ್ದರಿಂದಲೇ ನಮಗೀಗ ಈ ಗತಿಯು ಸಂಭವಿಸಿದೆ. ಜಾಗರೂಕರಾಗಿ ಕಾರ್ಯವನ್ನು ಸಾಧಿಸಿರಿ.''

ರಾತ್ರಿ ಮೋಹನನು ನಿರ್ಭೀತನಾಗಿ ಹಿಂದಿನ ದಿನ ನೋಡಿದ ಮನೆಗೆ ಹೋದನು. ಗೇಟಿನಲ್ಲಿ ಕಾದು ನಿಂತಿದ್ದ ಸೇವಕನು ಮೋಹನನನ್ನು ತಡೆದನು. ಕಾಗದದಲ್ಲಿ ಸೂಚಿಸಿದಂತೆ ತಾನು ಇಲ್ಲಿಗೆ ಬಂದಿರಲು ಸೇವಕನು ತಡೆದುದು ಮೋಹನನಿಗೆ ಸಹಿಸಲಿಲ್ಲ 'ಛೀ ಕತ್ತೆ!' ಎಂದು ನುಡಿದು ಸೇವಕನ ಕೆನ್ನೆಯ ಮೇಲೆ ಫಟೇರೆಂದು ಹೊಡೆದು ಮುಂದೆ ನಡೆದುಬಿಟ್ಟನು. ಸೇವಕನು ಮೋಹನನ ಬಲವಾದ ಆ ಏಟಿನಿಂದ ತಲೆ ತಿರುಗಿ ನೆಲಕ್ಕೆ ಕುಸಿದನು.

ಇದುವರೆಗೆ ಈ ರೀತಿ ಮೋಹನನನ್ನು ತೊಂದರೆಗೊಳಿಸಿದ ಶತ್ರುವು ಕೋಮಲೆಯೇ ಇರಬಹುದೆಂದು ವಾಚಕರು ತಿಳಿದಿರಬಹುದಲ್ಲವೇ? ಗೇಟಿನಲ್ಲಿ ಮೋಹನನು ಮಾಡಿದ ಕಾರ್ಯವನ್ನು ಕೋಮಲೆಯು ದೂರದಲ್ಲಿ ಸುಮತಿಯೊಡನೆ ನಿಂತು ನೋಡುತ್ತಿದ್ದಳು. ಇಬ್ಬರೂ ಪುರುಷ ವೇಷವನ್ನು ಧರಿಸಿದ್ದರು.

"ಮೋಹನನಿಗೆ ಕೋಪವು ಮಿತಿಮೀರಿದೆ. ಹಾಗಿಲ್ಲದಿದ್ದರೆ ನಿರ್ದಯೆಯಿಂದ ಈ ರೀತಿ ಮಾಡುತ್ತಿರಲಿಲ್ಲ. ಈ ದಿನ ಏನೇನು ಆಗುವುದೋ ತಿಳಿಯಲಸಾಧ್ಯ" ಎಂದು ಕೋಮಲೆಯು ಮನಸ್ಸಿನಲ್ಲಿ ಹೇಳಿಕೊಂಡಳು. ಮೋಹನನು ಉದ್ಯಾನವನವನ್ನು ದಾಟಿ ಮನೆಯ ಬಾಗಿಲಿಗೆ ಬಂದನು. ಮನೆಯು ಹಿಂದಿನ ದಿನದಂತಿರದೆ, ಚೆನ್ನಾಗಿ ಅಲಂಕೃತವಾಗಿ ಶೋಭಿಸುತಿತ್ತು. ಎಲ್ಲೆಲ್ಲೂ ಎಲೆಕ್ಟ್ರಿಕ್ ದೀಪಗಳು ಪ್ರಜ್ವಲಿಸುತ್ತಿದ್ದವು. ಮೋಹನನು ಬಾಗಿಲಿಗೆ ಬಂದು ನಿಂತೊಡನೆ ಕೋಮಲೆಯು ವೇಗವಾಗಿ ಆತನ ಮುಂಭಾಗದಲ್ಲಿ ಬಂದು ನಿಂತು 'ಸುಖಾಗಮನವೇ?' ಎಂದು ಮಂದಹಾಸದಿಂದ ಕೇಳಿದಳು. ಮೋಹನನಿಗೆ ಕೋಪವು ಪ್ರಜ್ವಲಿಸುತ್ತಿದ್ದರಿಂದ ಕೋಮಲೆಯ ಪ್ರಶ್ನೆಗೆ ಉತ್ತರವು ದೊರೆಯಲಿಲ್ಲ. ಮೋಹನನು ಮೌನದಿಂದ ನಿಂತಿದ್ದನ್ನು ಕಂಡು, ಕೋಮ

ಲೆಯು "ನಿಮ್ಮನ್ನು ಮಾತನಾಡಿಸುವ ರೀತಿಯೂ ನನಗೆ ತಿಳಿದಿದೆ" ಎಂದು ಮನದಲ್ಲಿ ಅಂದುಕೊಂಡು ಕೇಳಿದಳು.

"ಯಾರು ನೀವು? ಎಲ್ಲಿಂದ ಬಂದಿರುವಿರಿ? ಇಲ್ಲೇನು ಕೆಲಸ?"

ಮೋಹನ—ಯಾರಾದರೇನು? ಬಂದಿರುವುದು ಎಲ್ಲಿಂದಾದರೂ ಇರಲಿ. ಕೆಲಸವಿದ್ದೇ ಇಲ್ಲಿಗೆ ಬಂದಿರುವೆನು.

ಕೋಮಲೆ—ಇಲ್ಲಿ ಯಾರ ಹತ್ತಿರ ಕೆಲಸ?

ಮೋಹನ—ನನಗೆ ಕಾಗದ ಬರೆದಿರುವವರ ಹತ್ತಿರ.

ಕೋಮಲೆ—ಕಾಗದ ಬರೆದವರು ಯಾರು?

ಮೋಹನ—ನಿಮ್ಮ ಹೆಸರೇನು? ''ಸತೀಶ"ರೆಂಬವರು ನನಗೆ ಕಾಗದ ವನ್ನು ಬರೆದಿರುವರು.

ಕೋಮಲೆ—ನನ್ನ ಹೆಸರು 'ಸತೀಶ'ನೆಂದಲ್ಲ. ನಿಮ್ಮ ಪರಿಚಯವು ಸಿಗದಿದ್ದ ಮೇಲೆ ನನ್ನ ಪರಿಚಯವನ್ನಾದರೂ ಯಾಕೆ ಹೇಳುವೆನು? ಅದನ್ನೂ ಬಾಗಿಲಿನಲ್ಲಿಯೇ ನಿಂತು ಕೇಳಬೇಕೆ? ಸ್ವಲ್ಪ ಕುಳಿತುಕೊಂಡು ಮಾತನಾಡಿ ಹೋಗುವದಿದ್ದರೆ ಮೇಲಕ್ಕೆ ಬನ್ನಿರಿ, ಎಂದು ನುಡಿದು, ಕೋಮ ಲೆಯು ಮೋಹನನ ಉತ್ತರವನ್ನು ನಿರೀಕ್ಷಿಸದೆ ಮಹಡಿಯ ಕಡೆಗೆ ನಡೆ ದಳು. ಮೋಹನನೂ ಆಕೆಯ ಹಿಂದೆಯೇ ಹೋದನು. ಸುಸಜ್ಜಿತವಾದ ಕೋಣೆಯೊಂದರಲ್ಲಿ ಇಬ್ಬರೂ ಕುಳಿತುಕೊಂಡರು. ಕೋಮಲೆಯು ಹೇಳಿ ದಳು:—"ತಮ್ಮ ಪರಿಚಯವನ್ನು ಮೊದಲು ತಿಳಿಸಿರಿ."

ಮೋಹನ—ನಾನು ಮೋಹನ.

ಕೋಮಲೆ—ಯಾರು? ಮೋಹನನೇ! ಆ ಕಳ್ಳ ಮೋಹನನೇ! ಗುಣವಂತನೆಂದು ಪ್ರಸಿದ್ಧಿಪಡಿಸಿಕೊಂಡು ಜನರನ್ನು ವಂಚಿಸಿ, ಘಾತಿಸುವ ಮೋಹನನು ನೀನೇ ಏನು?

ಮೋಹನ (ಕ್ರುದ್ಧಸ್ವರದಿಂದ)—ಛೀ! ಛೀ! ನಾಲಿಗೆಯನ್ನು ಬಿಗಿ ಹಿಡಿದು ಮಾತನಾಡು.

ಸುಮತಿ—ಯಾಕೆ ನಾಲಿಗೆಯನ್ನು ಬಿಗಿ ಹಿಡಿಯುವದು? ಮೋಹ ನನು ಅಂತಹ ದ್ರೋಹಿಯಲ್ಲವೇ? ಧನಿಕರನ್ನು ವಂಚಿಸುವವನಲ್ಲವೇ?

ಸಿಕ್ಕಿದ ಹೆಣ್ಣುಮಕ್ಕಳನ್ನು ಹಾಳು ಮಾಡುವವನಲ್ಲವೇ?

ಮೋಹನ—ಇದೇನು! ಮಿತಿಮೀರಿ ಹರಟುತ್ತಿರುವಿರಿ?

ಕೋಮಲೆ—ಎಲ್ಲವೂ ತಿಳಿದಿದೆ ನಿನ್ನಲ್ಲಿ ಇವೆಲ್ಲಾ ಗುಣಗಳು ಸಹಜವಾಗಿಯೇ ಇರುವವು.

ಮೋಹನ—ನನ್ನ ಗುಣಗಳು ಹೇಗಾದರೂ ಇರಲಿ. ಅದರಿಂದ ನಿಮಗೇನೂ ಬಾಧಕವಿರಲಾರದಷ್ಟೆ?

ಕೋಮಲೆ—ಬಾಧಕವಿಲ್ಲದೆ ಏನು? ಇದ್ದೇ ಇದೆ.

ಮೊಹನ—ಆ ವಿಚಾರಗಳೆಲ್ಲವೂ ಪ್ರಕೃತ ಆವಶ್ಯಕವಿಲ್ಲ ನನಗೀಗ ಉತ್ತರವೇನು? ಕಾಗದ ಬರೆದವರಾರು?

ಕೋಮಲೆ—ನಿಮಗೆ ಬರೆದ ಕಾಗದದಲ್ಲಿ ಹೆಸರಿದ್ದಿಲ್ಲವೇನು?

ಮೋಹನ—ಸತೀಶನೆಂದಿತ್ತು. ಅದು ಯಾರು?

ಕೋಮಲೆ—ನಾನೇ ಸತೀಶನು.

ಮೋಹನ—ನನ್ನನ್ನಿಲ್ಲಿಗೆ ಬರಲು ಹೇಳಿದ ವಿಷಯವೇನು?

ಕೋಮಲೆ—ಕಾಗದದಲ್ಲಿ ತಿಳಿಸಿದ ನಿಯಮಕ್ಕೆ ವಿರುದ್ಧವಾಗಿ ಇಲ್ಲಿಗೆ ಬಂದಿರುವದರಿಂದ ಈಗ ಯಾವುದನ್ನೂ ಹೇಳುವಂತಿಲ್ಲ.

ಮೋಹನ—ಕಾಗದದಲ್ಲಿ ಬರೆದ ಯಾವ ನಿಯಮಕ್ಕೆ ಭಂಗ ಬಂದಿದೆ?

ಕೋಮಲೆ—ನಿರಾಯುಧವಾಗಿ ಬರಬೇಕೆಂದಿರುವುದಕ್ಕೆ.

ಮೋಹನ—ಆಯುಧವನ್ನು ತಂದಿರುವುದರಿಂದ ಹಾನಿಯೆನು?

ಕೋಮಲೆ—ಹಾಗಾದರೆ ನಾನು ಕಾಗದದಲ್ಲಿ ಬರೆದದ್ದಾದರೂ ಏನು? "ನಿಯಮದಂತೆ ಬಂದರೆ ಅನುಕೂಲವಾದೀತು" ಎಂದು ಬರೆದಿದ್ದೆನು. ಇನ್ನೇನೂ ಇಲ್ಲಿ ಕಾರ್ಯವಿಲ್ಲ; ಹೊರಡಬಹುದು.

ಮೋಹನ—ನಾನೊಬ್ಬನೇ ಹಿಂದಿರುಗುವುದೇನು?

ಕೋಮಲೆ—ಇನ್ನು ಯಾರು ಜೊತೆಯಲ್ಲಿ ಬರುವರು? ನಾನು ಬರಲೇನು? ಅದು ನಿನಗಿಷ್ಟವಿಲ್ಲ ನಿಯಮಕ್ಕೆ ತಪ್ಪಿದರೆ ಯಾರು ತಾನೇ ಬಂದಾರು? ದಾರಿಯಲ್ಲಿ ಯಾರಿಂದಲಾದರೂ ತೊಂದರೆಯುಂಟಾಗಬಹುದೆಂಬ ಭೀತಿಯಿಂದ ಸಹಾಯವನ್ನಪೇಕ್ಷಿಸುವಿಯಾ?

ಮೋಹನ—ಅಂತಹ ಭಯವು ನನಗಿಲ್ಲ. ನನ್ನ ಮಿತ್ರರಿಬ್ಬರನ್ನು ಬಿಟ್ಟು ಕೊಡಬೇಕೆಂದು ಕೇಳುವೆನು.

ಕೋಮಲೆ—ಇದು ಸಾಧ್ಯವಿಲ್ಲವೆಂದು ಹೇಳಿದರೆ....

ಮೋಹನ—ನನ್ನ ಸ್ವಂತ ಶಕ್ತಿಯಿಂದ ಅದು ಸಾಧ್ಯವೆಂದು ಹೇಳುವಂತೆ ಮಾಡುವೆನು.

ಕೋಮಲೆ—ನಿನ್ನ ಶಕ್ತಿಯು ತಿಳಿದಿದೆ. ತಿಳಿಯುತ್ತಲೂ ಇದೆ. ಉಪಕಾರವನ್ನು ಮರೆತು ನಿರ್ದಯೆಯಿಂದ ಘಾತಿಸುವ ನಿನಗೆ ಅದಾವ ಶಕ್ತಿಯಿರುವುದು? ಎಂಬುದನ್ನು ನೋಡುವುದಕ್ಕಾಗಿಯೇ ನಿನಗೆ ಕಾಗದವನ್ನು ಬರೆದಿದ್ದೆನು.

ಮೋಹನ—ನಾನೊಬ್ಬನೇ ಇಲ್ಲಿಗೆ ಬಂದಿರುವೆನೆಂದು ತಿಳಿಯಬೇಡ. ಒಂದು ಗುಂಡಿನ ಸದ್ದಾದೊಡನೆ ಅಲ್ಲಲ್ಲಿ ಅಡಗಿ ಕುಳಿತಿರುವ ನಮ್ಮವರು ಈ ಮನೆಯನ್ನು ಸುತ್ತುಗಟ್ಟುವರು.

ಕೋಮಲೆ—ಏನು, ನನ್ನನ್ನು ಬೆದರಿಸುವೆಯಾ? ನೀನೊಬ್ಬನು ವೀರನೆಂದು ನಾನು ತಿಳಿಯಲೇ ಇಲ್ಲ. ನಿನಗೊಬ್ಬನಿಗೆ ಮಾತ್ರ ಸಹಾಯವಿರುವುದೆಂದು ಭಾವಿಸಿರುವಿ. ನಿನ್ನವರು ಗೇಟಿನೊಳಗೆ ಪ್ರವೇಶಿಸಿದೊಡನೆ ಹತರಾಗುವರು. ಇದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿಯೇ ಇಲ್ಲಿಗೆ ಬಂದಿರುವೆನು. ನಿನ್ನ ಶೌರ್ಯವೇನೂ ನನ್ನಲ್ಲಿ ನಡೆಯಲಾರದು.

ಮೋಹನ—ಏನು! ನನ್ನ ಶೌರ್ಯವು ನಡೆಯಲಾರದೇ? ನಿನ್ನನ್ನು ಧ್ವಂಸಗೊಳಿಸಿಯೇ ಮುಂದರಿಯುವೆನು, ಎಂದು ನುಡಿದು ಮೋಹನು ಕ್ರೋಧದಿಂದ ಕಣ್ಣನ್ನು ಕೆಂಪರಳಿಸಿ ಪಿಸ್ತೂಲನ್ನು ತೆಗೆದು ಬಾರ್ ಮಾಡಿ ಕೋಮಲೆಯ ಮುಖಕ್ಕೆ ಹಿಡಿದನು. ಎಷ್ಟಾದರೂ ಕೋಮಲೆಯು ಅಬಲೆಯಲ್ಲವೇ? ಮೋಹನನ ಈ ಭಯಂಕರ ಸ್ಥಿತಿಯನ್ನು ನೋಡಿ ಭಯಗೊಂಡು ಸ್ತಬ್ಧಳಾದಳು. ಕೂಡಲೆ ಸುಮತಿಯು ಎದ್ದು ನಿಂತು ಸ್ವಲ್ಪವೂ ಹಿಂಜರಿಯದೆ "ಕೋಮಲೆ! ಎಲ್ಲಿ ನಿನ್ನ ಧೈರ್ಯ! ಹೆದರಬೇಡ. ಹಿಡಿ ಪಿಸ್ತೂಲನ್ನು. ಎಲ್ಲವೂ ಏಕಕಾಲದಲ್ಲಿಯೇ ಧ್ವಂಸವಾಗಿ ಹೋಗಲಿ" ಎಂದು ನುಡಿದಳು. ಕೋಮಲೆಯು ಸುಮತಿಯ 'ಮಾತಿನಿಂದ ಉತ್ತೇಜಿತಳಾಗಿ

ಧೈರ್ಯಗೊಂಡು ಹೊರಗಿನ ಪುರುಷವೇಷವನ್ನೆಸೆದು ತನ್ನ ಸ್ತ್ರೀ ವೇಷದಿಂದ ಲೇ ನಿಂತು ಪಿಸ್ತೂಲನ್ನು ಬಾರ್‌ಮಾಡಿ ಮೋಹನನ ಮುಖಕ್ಕೆ ಹಿಡಿದು ನುಡಿದಳು: "ಮೋಹನ! ಏನು ನೋಡುತ್ತಿರುವೆ? ಬಿಡು ಗುಂಡನ್ನು! ಈ ದಿನ ನಮ್ಮಿಬ್ಬರ ಮರಣವೂ ಆಗಿ ಹೋಗಲಿ. ನಾನು ತಂದೆಗೆ ಅಹಿತ ವನ್ನಾಚರಿಸಿದ್ದಕ್ಕೂ, ನೀನೀ ಅಬಲೆಯನ್ನು ಕೃತಘ್ನತೆಯಿಂದ ತಿರಸ್ಕರಿಸಿ ದ್ದಕ್ಕೂ ಒಂದೇ ಕಾಲದಲ್ಲಿ ಪ್ರಾಯಶ್ಚಿತ್ತವಾಗಲಿ." ಇದಿಷ್ಟನ್ನು ನುಡಿಯು ವದರೊಳಗಾಗಿ ಹಿಂದಿನ ಸ್ಮೃತಿಯುಂಟಾಗಿ ಕೋಮಲೆಯ ಕಣ್ಣುಗಳಿಂದ ಧಾರೆ ಧಾರೆಯಾಗಿ ನೀರು ಹರಿಯಲಾರಂಭವಾಯಿತು.

ಮೋಹನನಿಗೆ ಈಗ ಎಲ್ಲವೂ ಹೊಳೆಯಿತು. ಸುಮತಿಯು ಆಡಿದ ವಚನದಿಂದ ತನ್ನ ಎದುರಿಗೆ ನಿಂತಿರುವ ಪ್ರತಿದ್ವಂದ್ವಿಯು ತನ್ನಿಂದ ತಿರ ಸ್ಕೃತಳಾದ ಕೋಮಲೆಯೆಂದು ತಿಳಿಯಿತು. ಆ ಮೇಲೆ ಕೋಮಲೆಯ ಮರ್ಮಭೇದಕವಾದ ವಾಗ್ಬಾಣವು ಹೃದಯದಲ್ಲಿ ನಾಟಿತು. ತನ್ನ ಕೃತಘ್ನತೆಯ ನೆನಪಿನಿಂದಲೂ, ಹೃದಯವನ್ನು ಕರಗಿಸುವ ಕೋಮಲೆಯ ಕಣ್ಣೀರಿನ ಧಾರೆಯ ದರ್ಶನದಿಂದಲೂ ಮೋಹನನ ಕಣ್ಣುಗಳಿಗೆ ಕತ್ತಲೆಯು ಮುಸುಕಿದಂತಾಯಿತು. ದುಃಖದಿಂದ ಕಂಠವು ಗದ್ಗದಿತವಾಯಿತು. "ಹಾ ಕೋಮಲೆ! ಹಾಳಾದೆನು. ಕ್ಷಮಿಸು" ಎನ್ನುತ್ತಾ ಮೋಹನನು ಕೋಮ ಲೆಯ ಚರಣದ ಮೇಲೆ ಬಿದ್ದು ಬಿಟ್ಟನು. ಬಿದ್ದೊಡನೆ ಮೂರ್ಛಿತನಾದನು. ಒಡನೆ ಕೋಮಲೆಯು ಪಿಸ್ತೂಲನ್ನು ದೂರ ಎಸೆದು ಮೋಹನನನ್ನು ಎಬ್ಬಿಸ ಹೋದಳು. ಮೋಹನನಿಗೆ ಎಚ್ಚರವಿಲ್ಲದೆ ಇರುವದನ್ನು ನೋಡಿ "ಹಾ! ಪ್ರಮಾದವಾಯಿತು. ಸುಮತೀ! ಓಡು. ಪ್ರಿಯನಾಥನನ್ನೂ, ಲಕ್ಷ್ಮೀಶನನ್ನೂ ಕರೆದುಕೊಂಡು ಬಾ" ಎಂದು ಹೇಳಿ ಮೋಹನನ ತಲೆಯನ್ನು ತನ್ನ ಉತ್ಸಂಗದ ಮೇಲೆ ಇಟ್ಟುಕೊಂಡು ಬೀಸಣಿಕೆಯಿಂದ ಗಾಳಿ ಬೀಸ ಲಾರಂಭಿಸಿದಳು. ಸುಮತಿಯೊಡನೆ ಪ್ರಿಯನಾಥನೂ, ಲಕ್ಷ್ಮೀಶನೂ ಬಂದು ಮೋಹನನ ಅವಸ್ಥೆಯನ್ನು ನೋಡಿ ಮರುಗಿದರು. ಕೋಮಲೆಯು ಲಕ್ಷ್ಮೀಶನ ಹತ್ತಿರ ಮನೆಯ ಹೊರಗೆ ಅಡಗಿರುವ ಮೋಹನನ ಮಿತ್ರರೆಲ್ಲ ರನ್ನೂ ಕರೆತರಲು ಹೇಳಿದಳು. ಲಕ್ಷ್ಮೀಶನು ಅಲ್ಲಿಂದ ಹೊರಟು ಗೇಟಿನ

ಹತ್ತಿರ ಹೋಗಿ ಒಂದು ಸಾಂಕೇತಿಕ ಶಬ್ದವನ್ನು ಮಾಡಿದನು. ಒಡನೆ ಅಲ್ಲಲ್ಲಿ ಅಡಗಿ ನಿಂತಿದ್ದವರು ಓಡಿ ಬಂದರು. ಲಕ್ಷ್ಮೀಶನಿಂದ ನಡೆದ ವಿಚಾರ ವನ್ನು ತಿಳಿದು ಎಲ್ಲರೂ ಮೋಹನನು ಮಲಗಿರುವ ಕೋಣೆಗೆ ಹೋದರು. ಅಲ್ಲಿ ಮೋಹನನ ಸ್ಥಿತಿಯನ್ನು ನೋಡಿ ಸುಮ್ಮನೆ ಕಣ್ಣುಬಿಡುತ್ತಾ ಕುಳಿತು ಕೊಂಡರು. ಸಮಾಧಾನ ವಚನವನ್ನು ಹೇಳಲು, ಯಾರೂ ಇರಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಕೋಮಲೆಯ ಸ್ಪರ್ಶದಿಂದಲೂ, ಶೀತಲೋ ಪಚಾರದಿಂದಲೂ ಮೋಹನನು ಮೆಲ್ಲನೆ ಕಣ್ಣುಗಳನ್ನು ತೆರೆದು ತಾನು ಕೋಮಲೆಯ ಉತ್ಸಂಗದ ಮೇಲೆ ತಲೆಯಿಟ್ಟು ಮಲಗಿರುವದನ್ನು ತಿಳಿದನು, ಕಣ್ಣೀರಿಟ್ಟು ಉಪಚರಿಸುವ ಕೋಮಲೆಯನ್ನೂ ಹತ್ತಿರದಲ್ಲಿ ಕುಳಿತ ತನ್ನ ಸ್ಥಿತಿಗೆ ಮರುಗುತ್ತಿರುವ ಮಿತ್ರರನ್ನೂ ನೋಡಿ ತಿರುಗಿ ಕಣ್ಣುಗನ್ನು ಮುಚ್ಚಿ ಕೊಂಡನು ಮನಸ್ಸಿನಲ್ಲಿಯೇ ತಕ್ಕ ಸಮಾಧಾನವನ್ನು ತಂದುಕೊಂಡು ಪುನಃ ಕಣ್ಣುಗಳನ್ನು ತೆರೆದು, ಕೋಮಲೆಯ ಕೈಗಳನ್ನು ಹಿಡಿದುಕೊಂಡು ಗದ್ಗದ ಸ್ವರದಿಂದ ಹೇಳಿದನು: "ಕೋಮಲೆ! ನನ್ನ ಕೃತಘ್ನತೆಯನ್ನು ಮರೆಯುವೆಯಾ? ಈ ನೀಚನನ್ನು ಕ್ಷಮಿಸುವೆಯಾ?"

ಮೋಹನನ ಈ ಮಾತಿನಿಂದ ಕೋಮಲೆಯ ದುಃಖವು ಒತ್ತರಿಸಿತು. "ಪ್ರಿಯಾ, ಇನ್ನೂ ನನ್ನನ್ನು-ಈ ದೀನಳಾದ ಅಬಲೆಯನ್ನು ಪರೀಕ್ಷಿಸು ವೆಯಾ?" ಎಂದು ದುಃಖದಿಂದ ನುಡಿದಳು. "ನೀನು ಕ್ಷಮಿಸಿರುವೆಯಾ- ದರೆ ನಾನು ನಿಶ್ಚಿಂತನಾದೆನು" ಎಂದು ಹೇಳಿ ಮೋಹನನು ಮೆಲ್ಲನೆ ಎದ್ದು ಕುಳಿತನು. ಎಲ್ಲರೂ ಹರ್ಷಭರಿತರಾದರು. ಪ್ರಿಯನಾಥನನ್ನು ನೋಡಿ ಮೋಹನನು ಹೇಳಿದನು: "ಮಿತ್ರಾ, ನೀನು ಆಗಲೇ ಸ್ವಲ್ಪ ಬುದ್ಧಿವಾದ ಹೇಳಿದ್ದರೆ ನಾನು ಇಷ್ಟು ಕಷ್ಟಕ್ಕೆ ಸಿಲುಕುತ್ತಿದ್ದಿಲ್ಲ. ಈಗೆಂತಹ ಕಷ್ಟಕ್ಕೆ ಗುರಿಯಾದೆನು!"

ಕೋಮಲೆ—ಅದೇನು ಪ್ರಿಯನಾಥನನ್ನು ಹಂಗಿಸುವಿರಿ? ನೀವಂದಂತೆ ಪ್ರಿಯನಾಥನು ಮಾಡಿದನು. ಅವನದೇನು ತಪ್ಪು? ನಿಮ್ಮ ಮುಂದೆ ಬುದ್ಧಿ ವಾದದ ಕಥೆಯು ಇರಲಿ. ಮಾತನಾಡುವುದಕ್ಕಾದರೂ ಯಾರಿಗೆ ಧೈರ್ಯ ವಿದೆ? ಆದರೆ ಕೆಲಸದಲ್ಲಿ ಹಿಂಜರಿಯದೆ ಇರಲು ಧೈರ್ಯವನ್ನುಂಟುಮಾಡಿ

ನನ್ನನ್ನೂ ಪ್ರೋತ್ಸಾಹಗೊಳಿಸಿದವನು ಪ್ರಿಯನಾಥನೇ.

ಮೋಹನ—ಹೇಗೆ?

ಕೋಮಲೆ—ನಿಮ್ಮ ಪ್ರೇರಣೆಯಿಂದ ಪ್ರಿಯನಾಥನು ಮಾಡಿದ ತಿರಸ್ಕಾರದಿಂದ ಪರಿತಪಿಸುತಲಿದ್ದ ಈ ದೀನಳನ್ನು ಪ್ರೋತ್ಸಾಹಿಸಲು ನಿಮ್ಮ ಮನೋನಿಶ್ಚಯವನ್ನರಿತು ನನಗೆ ಕಾಗದವನ್ನು ಬರೆದನು. ಪ್ರಿಯನಾಥನು ಆ ಕಾಗದದಲ್ಲಿ ಪ್ರೋತ್ಸಾಹಿಸದೇ ಇದ್ದಿದ್ದರೆ, ನಾನೀಗ ಮರಣಾವಸ್ಥೆಯಲ್ಲಿ ಇರುತ್ತಿದ್ದೆನು.

ಮೋಹನ—ಹಾಗಾದರೆ ನೀವಿಬ್ಬರೂ ಒಟ್ಟಿಗೆ ಸೇರಿ ಈ ಬಲೆಯನ್ನೊಡ್ಡಿರುವಿರಾ?

ಕೋಮಲೆ—ಬಲೆಯೂ ಇಲ್ಲ. —ಗಿಲೆಯೂ ಇಲ್ಲ. ಇದೆಲ್ಲವೂ ನಿಮ್ಮ ವಿದ್ಯಾಪ್ರಭಾವವೇ!

ಮೋಹನ-ನನ್ನ ವಿದ್ಯೆಯೆಲ್ಲಿ? ನಿನ್ನ ವಿದ್ಯೆಯೆಲ್ಲಿ? ನೀನೇ ನಾನಾಗಿದ್ದರೆ ನಾನೀ ಭೂಮಂಡಲವನ್ನೇ ದಂಗು ಬಡಿಸುತಲಿದ್ದೆನು.

ಕೋಮಲೆ—ಹಾಗಾದರೆ ಈಗ ನೀವೇ ನಾನಲ್ಲ; ನಾನೇ ನೀವಲ್ಲವೆಂದಹಾಗಾಯಿತು.

ಮೋಹನ—ಸರಿ. ಸರಿ. ನೀನು ಎಲ್ಲಾ ವಿಷಯದಲ್ಲಿಯೂ ನನ್ನನ್ನು ಮೀರಿರುವಿ.

ಕೋಮಲೆಯು ಲಜ್ಜಿತಳಾದಳು.

ಮೋಹನ—ಅದಿರಲಿ. ಪ್ರಿಯನಾಥಾ, ನನ್ನ ಒಪ್ಪಿಗೆಯು ಏನೂ ಇಲ್ಲದೆ ನೀನು ಮೊದಲೇ ಇಲ್ಲಿಗೆ ಹೇಗೆ ಬಂದಿರುವಿ?

ಕೋಮಲೆ—ಅದೇನು? ಪ್ರಿಯನಾಥನಲ್ಲಿಯೂ ಸಂಶಯವೇನು?

ಮೋಹನ—ಸಂಶಯಕ್ಕಾಸ್ಪದವಾಗುವುದಿಲ್ಲವೇ?

ಕೋಮಲೆ—ಅಷ್ಟು ಸಂಶಯಪಡಬೇಕಾದುದಿಲ್ಲ.

ಪ್ರಿಯನಾಥ—ಅಕ್ಕನು ಹೇಳಿದಂತೆ ನಾನೇನೂ ವಂಚಿಸಲಿಲ್ಲ

ಮೋಹನ—ಕೋಮಲೆ, ನೋಡು-ನೋಡು. ನೀನು ಪ್ರಿಯನಾಥನಿಗೆ ಅಕ್ಕನಂತೆ. ಅವನು ನಿನಗೆ ತಮ್ಮನಂತೆ. ಕೇಳು ಆದಾವ ಜನ್ಮದಲ್ಲಿ

ನಿನಗೆ ಪ್ರಿಯನಾಥನು ಭ್ರಾತೃವಾಗಿದ್ದನು.

ಕೋಮಲೆ—ಇದೇನು? ಪ್ರಿಯನಾಥನಲ್ಲಿಯೂ ಅಪಹಾಸ್ಯವೇ? ಒಡ ಹುಟ್ಟಿದರೆ ಮಾತ್ರ ತಮ್ಮನಾಗುವನು; ಸಹೋದರ ಸ್ನೇಹವಿದ್ದರೆ ತಮ್ಮ ನಾಗಲಾರನು ಎಂದಿರುವುದೇ?

ಆ ಮೇಲೆ ಪ್ರಿಯನಾಥನು ಹಿಂದೆ ನಡೆದ ಸಮಾಚಾರವನ್ನು ಹೇಳಿ ದನು. ಮೋಹನನು ಪ್ರಿಯನಾಥನನ್ನು ಕುರಿತು ನುಡಿದನು: "ಮಿತ್ರಾ! ನಿನ್ನಲ್ಲಿ ಸಂಶಯಪಟ್ಟೆನೆಂದು ಬೇಸರಿಯಬೇಡ. ಹಾಸ್ಯಕ್ಕಾಗಿ ಹೇಳಿದ್ದೇ ಹೊರತು ಬೇರೇನೂ ಇಲ್ಲ. ಎಷ್ಟೋ ಕಷ್ಟಕರವಾದ ಕಾರ್ಯಗಳಲ್ಲಿಯೂ ಹಿಂಜರಿಯದೆ ಸಾಧಿಸಿದರೂ ಇದೊಂದು ಕಾರ್ಯದಲ್ಲಿ ಮಾತ್ರ ಹೀಗೆ ಭಂಗ ವನ್ನು ಹೊಂದಿರುವುದು ನನಗೆ ತುಂಬಾ ಆಶ್ಚರ್ಯವೆನಿಸುತ್ತದೆ. ಯಾವುದ ರಲ್ಲಿಯೂ ಭಯಪಡದೆ ಇದ್ದ ನನಗೂ ಕೂಡ ಈ ಸಮಯದಲ್ಲಿ ಹೃದಯವು ತಲ್ಲಣಿಸಿ ಹೋಯಿತು. ಕೊನೆಗೆ ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ; ನನ್ನನ್ನೇ ನಂಬಿ ಮುಂದೊತ್ತಿರುವ ನಿಮ್ಮನ್ನು ಬಿಡಿಸಲೇಬೇಕೆಂಬ ದೃಢ ಪ್ರತಿಜ್ಞೆಯನ್ನು ಮಾಡಿ ಇಂದು ಹೊರಟಿದ್ದೆನು.

ಕೋಮಲೆ—ಅದೇನು! ಅಷ್ಟು ಭೀತಿಯುಂಟಾಗಲು ಕಾರಣವೇನು? "ನ್ಯಾಯಮಾರ್ಗದಲ್ಲಿ ಸಂಚರಿಸುವ ನನ್ನ ಮೇಲೆ ಕಣ್ಣಿಟ್ಟರಲು ಯಾರಿಗೆ ಧೈರ್ಯವು ಬಂದೀತು" ಎಂದು ನೀವು ಹೇಳಿಕೊಳ್ಳುತ್ತಿದ್ದಿಲ್ಲವೇನು? ಹಾಗಾ ದರೆ ನಿಮ್ಮಿಂದ ಯಾವದೋ ಒಂದು ಅನ್ಯಾಯವು ನಡೆದಿರಲೇಬೇಕು. ಅಲ್ಲವೇ? ಎಂದು ಮಾರ್ಮಿಕವಾಗಿ ನುಡಿದಳು.

ಮೋಹನ—ಪುನಃ ಅದನ್ನೇ ಎತ್ತಿ ಆಡುವಿಯಾ? ಹಿಂದೆ ನಡೆದುದನ್ನು ಮರೆತುಬಿಡು.

ಕೋಮಲೆ:-ಅದಿರಲಿ. ನಿಮಗೆ ಹಿಂದೆ ನನ್ನಲ್ಲಿ ಇಷ್ಟವಿಲ್ಲದಿದ್ದ ಮೇಲೆ ನಾನು ಅಲ್ಲಿಗೆ ಬಂದಾಗ ನೀವೇ ಮುಂದೆ ನಿಂತು ಯಾಕೆ ತಿರಸ್ಕರಿಸಬಾರ ದಾಗಿತ್ತು. ಪಾಪ! ಪ್ರಿಯನಾಥನ ಮೇಲೆ ಆ ಭಾರವನ್ನು ಹೊರಿಸಿ ಬಿಟ್ಟರೇಕೆ?

ಮೋಹನ—ಹಾಗೆ ನಾನೇ ಅದನ್ನು ತಿಳಿಸುವಂತಿರಲಿಲ್ಲ. ನಾನೇ ಎದುರಿನಲ್ಲಿ ನಿಂತಿದ್ದರೆ ಅದಾವ ಮಾತೂ ನನ್ನ ಬಾಯಿಂದ ಹೊರಡುತ್ತಿರಲಿಲ್ಲ;

ಅದಕ್ಕಾಗಿಯೇ ಪ್ರಿಯನಾಥನನ್ನು ಆ ಕಾರ್ಯದಲ್ಲಿ ಪ್ರೇರಿಸಿದ್ದೆನು.

ಕೋಮಲೆ—ನೀವು ಆ ಕಾಲದಲ್ಲಿ ಆ ರೀತಿ ಯೋಚನೆ ಮಾಡಿದಂತೆ ಈ ದೀನಳ ಸ್ಥಿತಿಯನ್ನೂ ಕೂಡ ಸ್ವಲ್ಪ ಯೋಚಿಸಬೇಕಾಗಿತ್ತು. ನಿಮ್ಮ ಗುಣಗಳಿಗೆ ಲುಬ್ಧಳಾಗಿ, ನಿಮ್ಮನ್ನು ಮನಸ್ಸಿನಿಂದ ವರಿಸಿ, ಮುಂದಿನ ಎಷ್ಟೋ ಮನೋರಥಗಳನ್ನು ಕಲ್ಪಿಸಿಕೊಂಡು ಪ್ರೇಮವನ್ನು ಯಾಚಿಸಲು ನಿಮ್ಮ ಮನೆಗೆ ತವಕದಿಂದ ಬಂದ ನನಗೆ ದರ್ಶನವನ್ನೂ ಕೂಡ ದಯಪಾಲಿಸದೆ ಆ ವಿಧವಾದ ತಿರಸ್ಕಾರಗಳನ್ನು ಮಾಡಿದರೆ ನನ್ನ ಹೃದಯವು ಎಷ್ಟು ಕ್ಷೋಭಿಸೀತು ಎಂಬುದನ್ನು ಯೋಚಿಸಿದಿರಾ! ನಿಮ್ಮ ಮಿತ್ರರಲ್ಲಿಯೇ ಯಾರನ್ನಾದರೂ ಕೇಳಿರಿ, ನನಗೆ ಆ ಸಮಯದಲ್ಲಿ ಎಷ್ಟು ದುಃಖವಾಗಿರಬೇಕೆಂಬದನ್ನು? ನಿಮಗಾಗಿ, ನಿಮ್ಮ ಪ್ರೇಮಸಂಪಾದನೆಗಾಗಿ ತಂದೆಗೂ ಮೋಸ ಮಾಡಿದ ನಾನು ಪಾಪಿಣಿಯಾಗಲಿಲ್ಲವೆ? ಇತ್ತ ನೀವೂ ತಪ್ಪಿ, ಅತ್ತ ತಂದೆಯೂ ತಪ್ಪಿದ್ದ ಈ ಅಬಲೆಯು ಮುಂದೆ ಹೇಗೆ ಜೀವಿಸಬೇಕಾದೀತು? (ಮೋಹನನ ಮಿತ್ರರ ಕಡೆಗೆ ತಿರುಗಿ) ಅಯ್ಯೋ! ಇಷ್ಟು ಜನರಲ್ಲಿ ನೀವೊಬ್ಬರಾದರೂ ಈ ಅಬಲೆಯ ಮುಂದಿನ ದುಃಖಪರಂಪರೆಯನ್ನು ಸೂಚಿಸಬಾರದಾಗಿತ್ತೆ? ಎಂದು ನುಡಿಯುತ್ತಾ, ಹಿಂದಿನ ಸ್ಮರಣೆಯುಂಟಾಗಿ ದೊಡ್ಡದಾಗಿ ಅತ್ತು ಬಿಟ್ಟಳು!

ಎಲ್ಲರ ಕಣ್ಣಲ್ಲಿಯೂ ಥಟ್ಟನೆ ನೀರು ಬಂದಿತು. ಮೋಹನನು ಒಡನೆ ಕೋಮಲೆಯನ್ನು ತಬ್ಬಿಕೊಂಡು ಕಣ್ಣೀರನ್ನು ಒರಿಸಿ ಹೇಳಿದನು:— ಇದೇನು ಕೋಮಲೆ! ಮತ್ತೆ ಮತ್ತೆ ದುಃಖಿಸಿ ಪ್ರಯೋಜನವೇನು? ತಪ್ಪೆಲ್ಲವೂ ನನ್ನದೇ ಎಂದು ನಾನು ಒಪ್ಪಲಿಲ್ಲವೆ? ಪುನಃ ಪುನಃ ಅದನ್ನೇ ಹೇಳಿಯ್ಯಾಕೆ ವ್ಯಥೆಪಡುವಿ? ಇದಿರಲಿ. ನೀನು ಮೃದುಹೃದಯಳಾದವಳು ಇಷ್ಟರವರೆಗೆ ನನ್ನನ್ನು ಇಷ್ಟು ತೊಂದರೆಗಳಲ್ಲಿ ಕೆಡವಿ ಬಿಟ್ಟಿರುವಿ! ಇನ್ನಾವ ಉಪಾಯವನ್ನೂ ಹುಡುಕದೆ ನನ್ನ ಉಪಾಯವನ್ನು ನನ್ನ ಮೇಲೆಯೇ ಬಿಟ್ಟುಬಿಟ್ಟಿರುವಿ.

ಕೋಮಲೆ—ನೂರಾರು ಜನರನ್ನು ದಂಗುಗೊಳಿಸಿದ್ದ ನೀವು ಈ ಬಲೆಯಲ್ಲಿ ಸಿಕ್ಕಿಬಿದ್ದಿರುವುದು ನನಗೆ ಅತ್ಯಾಶ್ಚರ್ಯಕರವಾಗಿದೆ. "ಯಾರಿಗೂ ಅಪಾಯವನ್ನುಂಟು ಮಾಡದೆ ಕಾರ್ಯವನ್ನು ಸಾಧಿಸತಕ್ಕವರು" ಎಂದು

ಪ್ರಸಿದ್ಧಿಪಡಿಸಿದ್ದ ನೀವು ಕಳೆದ ರಾತ್ರಿಯಲ್ಲಿ ಮತ್ತು ಈ ದಿನದಲ್ಲಿ ಪ್ರಾಣಾಪಾಯವನ್ನು ಮಾಡಿ ಕಾರ್ಯವನ್ನು ಸಾಧಿಸಲು ಹವಣಿಸಿದ್ದಿರಲ್ಲವೆ?

ಮೋಹನ:—ಅಂತಹ ಕೋಪವೇನೋ ಬಂದಿರುವುದು ನಿಜ; ಆದರೆ ಅದು ನಡೆಯಲಿಲ್ಲವಷ್ಟೆ? ಹಾಗ್ಗೆ ನಡೆದಿದ್ದರೆ ನೀನು ಹಂಗಿಸಬಹುದಾಗಿತ್ತು.

ಕೋಮಲೆ—ಗೇಟಿನಲ್ಲಿ ನಿಮ್ಮನ್ನು ತಡೆದಿರುವ ಸೇವಕನಿಗೆ ಆ ರೀತಿ ಹೊಡೆದರೆ ಆತನು ಜೀವಿಸಿರುವನೇ?

ಮೋಹನ—ಅದು ನಿನ್ನ ತಪ್ಪೇ ಹೊರತು ನನ್ನದಲ್ಲ. ಬರಲು ಕಾಗದ ಬರೆದ ಮೇಲೆ ಅಲ್ಲಿ ತಡೆಯಲು ಯಾಕೆ ಹೇಳಿರುವಿ?

ಕೋಮಲೆ:—"ನಿಮ್ಮ ಕೋಪವು ಎಷ್ಟು ಮಿತಿಮೀರಿದೆ?"ಎಂಬುದನ್ನು ತಿಳಿಯುವುದಕ್ಕಾಗಿಯೇ ಸೇವಕನನ್ನು ನೇಮಿಸಿದ್ದೆನು. ನೀವು ನಿನ್ನೆ ರಾತ್ರಿ ಮೋಟಾರಿನ ಮೇಲೆ ಆ ರೀತಿಯಾಗಿ ಬಲವನ್ನು ಪಯೋಗಿಸಲು ಕಾರಣವೇನು!

ಮೋಹನ—ಆ ಉಪಾಯವನ್ನು ಪ್ರಯೋಗಿಸದೆ ಇದ್ದಲ್ಲಿ ನೀನು ಹಿಂದಿನಿಂದ ಬಂದು ಮಧ್ಯದಾರಿಯಲ್ಲಿ ನನ್ನನ್ನು ಹಿಡಿಯುತ್ತಿರಲಿಲ್ಲವೆ!

ಕೋಮಲೆ—ಹೌದು.

ಮೋಹನ—ನಿನಗೀ ಕಾರ್ಯದಲ್ಲಿ ಸಹಾಯಕರು ಯಾರು! ಸುರೇಂದ್ರನಾಥನು ಇದರಲ್ಲಿ ಸೇರಿರುವನೇ?

ಕೋಮಲೆ— ಇಲ್ಲ. ತಂದೆಯ ಜೊತೆಗೆ ನಾನಿದ್ದು ಈ ಕಾರ್ಯವನ್ನು ಮಾಡಿದರೆ ಆತನಿಗೆ ತೊಂದರೆಯು ಸಂಭವಿಸಬಹುದು, ಎಂದು ತಿಳಿದೇ ನಾನಿಲ್ಲಿ ಗೋಪ್ಯವಾಗಿ ಇದ್ದೆನು. ಇರಲಿ. ನಾನೇ ಈ ಕಾರ್ಯವನ್ನು ಮಾಡಿರುವೆನೆಂದು ನಿಮಗೆ ಮೊದಲು ತಿಳಿದಿತ್ತೇ?

ಮೋಹನ—ಇಲ್ಲ. ನಿನ್ನ ಕೆಲಸವು ಬಹು ಗೋಪ್ಯವಾಗಿತ್ತು. ಸ್ವತಃ ತಳಾಗಿ ಹೊರಟು ಹೋಗಿರುವ ನೀನು ಇಷ್ಟು ಚತುರಳಾಗಿ ನಮ್ಮನ್ನು ಮೋಸಗೊಳಿಸುವಿ ಎಂದು ನನ್ನ ಮನಸ್ಸಿಗೆ ಹೊಳೆಯಲೇ ಇಲ್ಲ. ನೀನೇ ಶತ್ರುವು ಎಂಬುದನ್ನು ಸ್ವಲ್ಪವಾದರೂ ತಿಳಿದಿದ್ದರೆ, ನಾನಿಷ್ಟು ಭಯಪಡುತ್ತಿರಲಿಲ್ಲ. ಯಾರೋ ಚಿರಶತ್ರುಗಳು ನನ್ನನ್ನು ಕಾಡಿಸಿ, ನನ್ನ ಮಿತ್ರರನ್ನು ಕೊಂದು ಹಾಕುವರೆಂಬ ಭೀತಿಯು ತಲೆದೋರಿ ನನಗೆ ಕಳವಳ

ವುಂಟಾಯಿತು. ಇನ್ನು ಮುಂದೆ ನಮ್ಮ ಕಾರ್ಯಕ್ಕೆ ದೊಡ್ಡ ಸಹಾಯ ವೊಂದು ಒದಗಿತು. ನನ್ನ ಭಾರವು ಅರ್ಧಾಂಶವಿಳಿಯಿತು. ಅಲ್ಲವೇನು?

ಕೋಮಲೆ—ಭಾರ ತಪ್ಪುವುದು ಇರಲಿ. ದೊಡ್ಡದಾದ ಒಂದು ಭಾರ ವನ್ನು ಹೊತ್ತಂತೆ ಆಯಿತು. ಈ ಅಬಲೆಯ ಸಹಾಯವು ಸಿಗುವುದು ಒತ್ತಟ್ಟಿಗುಳಿದು, ರಕ್ಷಿಸುವ ಭಾರವೊಂದು ಮಾತ್ರ ಹೆಚ್ಚಾಗಿ ಬಂದಿದೆ.

ಮೋಹನ—ಸರಿ. ಅದಿರಲಿ ಸುರೇಂದ್ರನಾಥನು ನಿನ್ನ ಕಾರ್ಯಕ್ಕೆ ಒಪ್ಪಿರುವನೇ?

ಕೋಮಲೆ—ತಂದೆಯು ಒಪ್ಪಿಗೆ ಇದ್ದರೆ ಏನು? ಇಲ್ಲದಿದ್ದರೆ ಏನು? ಅಣ್ಣನ ಸಮ್ಮತಿಯು ದೊರಕಿದ ಮೇಲೆ ಯಾರ ಸಮ್ಮತಿಯೂ ಬೇಕಾಗಿಲ್ಲ. ಅಲ್ಲವೆ ಪ್ರಿಯನಾಥ? ನಿನ್ನ ಒಪ್ಪಿಗೆಯು ಸಾಕಾಗಲಾರದೆ?

ಪ್ರಿಯನಾಥ (ನಗುತ್ತಾ)—ಅದೂ ಬೇಡ ಈ ಕಾಲದಲ್ಲಿ ಯಾರ ಒಪ್ಪಿಗೆಯೂ ಬೇಕಾಗಿರುವುದಿಲ್ಲ ದಿನವೂ ನಾವಿದನ್ನು ನೋಡುತ್ತಲೇ ಇದ್ದೇವೆ. ತಂದೆ, ತಾಯಿ, ಬಂಧುಗಳು ಯಾರಿಗೂ ಒಪ್ಪಿಗೆಯಿದ್ದರೂ-ಇಲ್ಲದಿದ್ದರೂ ಸಮಾನವೆಂದೇ ಭಾವಿಸಿ, ತಮ್ಮ ಇಚ್ಛೆ ಬಂದಲ್ಲಿಗೆ ಹೊರಟು ಹೋಗುವರು ಆ ಪುರುಷರಲ್ಲಿಯೂ ಬೇಸರವು ಬಂದರೆ ಇನ್ನೊಂದು ಕಡೆಗೆ ಹೊರಟು ಹೋಗುವರು. ಅದೀ ಹಾಳು ಕಾಲದ ಮಹಿಮೆ!

ಮದನ—ಪ್ರಿಯನಾಥನು ತನ್ನ ಸ್ವಂತ ಉದ್ಗಾರವನ್ನು ಹೊರಪಡಿಸಿದನು.

ಮೋಹನ—ಪ್ರಿಯನಾಥನು ಹೇಳಿರುವುದು ಸುಳ್ಳಲ್ಲ. ಈಗ ನಡೆಯುತಕ್ಕ ವಿಚಾರವೇ ಹೀಗೆ ಇದೆ.

ಕೋಮಲೆ—ಹೇಳಿರಿ. ಹೇಳಿರಿ. ಅದೇನು ಅಷ್ಟಕ್ಕೆ ನಿಂತಿತು. ಇನ್ನೂ ಸ್ವಲ್ಪ ದೂರ ಸಾಗಲಿ ಇದೇನು ಪ್ರಿಯನಾಥ! ಇಷ್ಟು ಕಠೋರ ಹೃದಯನಾಗಿರುವಿ!

ಮದನ—ಅಕ್ಕಾ! ಪ್ರಿಯನಾಥನು ಮೃದುಹೃದಯುದವನೆಂದು ಭಾವಿಸಿರುವಿಯಾ! ಸುಳ್ಳು. ಅವನ ಅಂತರ್ಯವು ಹೇಗಿದೆ ಎಂಬುದು ನಮಗೆಲ್ಲರಿಗೂ ತಿಳಿದಿದೆ. ಇವನು ಸಂಪೂರ್ಣ ಸ್ತ್ರೀವಿರೋಧಿಯು. ಅದಕ್ಕಾಗಿಯೇ

ನಾವೆಲ್ಲರೂ ಒಟ್ಟು ಸೇರಿ ಇವನಿಗೆ "ಸ್ತ್ರೀವಿರೋಧಿ" ಎಂದು ಬಿರುದನ್ನು ಕೊಡಬೇಕೆಂದು ಯೋಚಿಸಿದ್ದೆವು.

ಮೋಹನ—ಪ್ರಿಯನಾಥನು ನುಡಿದುದು ಅಸತ್ಯವಲ್ಲ. ಮದನಾ! ಇಂತಹ ಅಕೃತ್ಯಗಳು ದಿನವೂ ಎದುರಿಗೇ ನಡೆಯುತ್ತಿದ್ದುದನ್ನು ನೀನು ನೋಡಿಲ್ಲವೆ!

ಕೋಮಲೆ—ಹೌದು. ಹೌದು. ಮದನಾ! ನೀನೇಕೆ ಪ್ರತಿಬಂಧಿಸುವಿ! ಪ್ರಿಯನಾಥನಿಗೆ ಬಾಯಿ ನೋವಾದರೆ ನೀನು ಹೇಳು. ನಿನಗೂ ಬಾಯಿ ನೋವಾದರೆ ಇವರಿರುವರು. ಹೇಳಿರಿ. ಕಲಿಯ ಮಹಿಮೆಯಿಂದ ಹಾಗೆ ಕೆಲವು ಕಡೆಗಳಲ್ಲಿ ನಡೆಯುತ್ತಿದ್ದರೂ ಇರಬಹುದು; ಆದರೆ ಲೋಕದಲ್ಲಿ ಎಲ್ಲೆಲ್ಲಿಯೂ ಧರ್ಮವು ಸಮೂಲವಾಗಿ ನಷ್ಟವಾಯಿತೇ? ಹಾಗಿದ್ದರೆ ಭೂಮಿಯು ತಲೆಕೆಳಗಾಗದೆ ಇನ್ನೂ ಯಾಕೆ ಅಚಲವಾಗಿ ನಿಂತಿದೆ? ನೂರರಲ್ಲಿ ಒಬ್ಬರಾದರೂ ಧರ್ಮದಿಂದ ಇರಲಾರರೇನು?

ಮೋಹನ—ನೂರರಲ್ಲಿ ಒಬ್ಬರು ಇಲ್ಲವೆಂದು ಅದಾರು ಹೇಳುವರು! ಆದರೆ ಆ ನೂರರಲ್ಲೊಬ್ಬಳು ನೀನೇಯೋ? ಎಂದು ನಗುತ್ತಾ ವ್ಯಾಮಿಕವಾಗಿ ನುಡಿದನು.

ಕೋಮಲೆ—ಹೌದು. ಹಾಗೆ ಯಾಕಾಗಿರಬಾರದು?

ಮೋಹನ—ಹಾಗಿರಬಾರದೆಂದು ನಾನು ಹೇಳಿರುವುದಿಲ್ಲ. ನೀನು ಮಾತ್ರ ಹಾಗಿರುವಿಯಾ? ಇಲ್ಲ. ಪ್ರಿಯನಾಥನು ನುಡಿದಂತೆಯೇ ನೀನು ಆಚರಿಸಿರುವಿ. ತಂದೆಗೂ ವಿರೋಧವನ್ನಾಚರಿಸಿ ನನ್ನನ್ನು ನೀನಾಗಿಯೇ ಪ್ರೀತಿಸಿರುವಿ. ಇದು ಧರ್ಮವೇ?

ಕೋಮಲೆ—ನನಗೆ ಇನ್ನೊಬ್ಬರನ್ನು ಕಾಮಿಸುವ ಇಚ್ಛೆಯುಂಟಾಗುವದಕ್ಕಿಂತ ಮೊದಲೇ ನನ್ನನ್ನು ವಿವಾಹ ಮಾಡಿಕೊಡುವುದು ತಂದೆಯ ಧರ್ಮವಲ್ಲವೇ? ತಂದೆಯು ಹಾಗೆ ಮಾಡಿರುವನೇ?

ಮೋಹನ—ತಂದೆಯು ಧರ್ಮವನ್ನತಿಕ್ರಮಿಸಿ ವಿವಾಹ ಮಾಡದೆ ಇದ್ದರೂ, ಎಲ್ಲಾ ಧರ್ಮವನ್ನರಿತ ನೀನೇ ಯಾಕೆ ಈ ಕಾರ್ಯದಲ್ಲಿ ಯತ್ನಿಸಿದಿ?

ಕೋಮಲೆ—ನಾನು ಧರ್ಮವನ್ನರಿತವಳೆಂದು ಅದಾರು ಹೇಳುವರು?

ನಾನೇನೂ ಹೇಳಿಕೊಳ್ಳುವದಿಲ್ಲ. ಹಾಗೆ ನಾನು ಪಾಪಿನಿಯೆಂದಿದ್ದ ಮೇಲೆ ಈಗ ನೀವು ನನ್ನನ್ನು ಯಾಕೆ ಪ್ರೀತಿಸಿದಿರಿ? ಪ್ರೀತಿಸಲಿಲ್ಲವೆಂದು ಈಗಲೂ ಹೇಳು ವಂತಿದ್ದರೆ ಹಾಗೂ ಹೇಳಿರಿ. ನನ್ನ ಪಾಪಕರ್ಮಕ್ಕೆ ತಕ್ಕಫಲವಾಯಿತೆಂದು ತಿಳಿಯುವೆನು. ನಾನಿದನ್ನು ಮೊದಲೇ ಯೋಚಿಸಿದ್ದೆನು; ಆದರೆ ಈ ಪ್ರಿಯ ಸಾಧನ ಮಾತಿನ ಭರವಸೆಯಿಂದ ಕಾರ್ಯದಲ್ಲಿ ಪ್ರವೃತ್ತಳಾದೆನು. ಆದರೂ ಚಿಂತೆಯಿಲ್ಲ. ಈಗಲಾದರೂ ಸ್ಪಷ್ಟವಾಗಿ ನುಡಿದುಬಿಟ್ಟರೆ ನನ್ನ ಮುಂದಿನ ಗತಿಯನ್ನು ಹಿಂದೆಯೇ ಯೋಚಿಸಿದಂತೆ ನೋಡಿಕೊಳ್ಳುವೆನು.

ಮೋಹನ—ಅದೇನು! ಆತ್ಮಹತ್ಯೆಯಲ್ಲಿ ಉದ್ಯುಕ್ತಳಾಗುವಿಯಾ?

ಕೋಮಲೆ—ನಿಮ್ಮನ್ನು ಬಿಟ್ಟರೆ ಆತ್ಮಹತ್ಯಕ್ಕಿಂತ ಬೇರೆ ಯಾವ ಉಪಾಯವೂ ಇಲ್ಲವೆ? ಇಲ್ಲ. ಇಲ್ಲ. ಇದಕ್ಕಿಂತ ಬೇರೆ ಯಾವ ಉಪಾಯವೂ ಇಲ್ಲ. ಅದೇ ನನಗೆ ಹಿತಕರವು. ನನ್ನ ಅದೃಷ್ಟವೇ ಹೀಗೆ ಇದ್ದ ಮೇಲೆ ಯಾರೇನು ಮಾಡುವರು? ಎಂದು ಹೇಳುತ್ತಿದ್ದಂತೆಯೇ ದುಃಖವು ಒತ್ತರಿಸಿ ಕಣ್ಣೀರಿಡುತ್ತಾ ಮೋಹನನ ಕಾಲಿನ ಮೇಲೆ ಬಿದ್ದುಬಿಟ್ಟಳು!

ಒಡನೆ ಮೋಹನನು ಕೋಮಲೆಯನ್ನು ಎಬ್ಬಿಸಿ ತಬ್ಬಿಕೊಂಡು ಸಮಾಧಾನಪಡಿಸಿ ಹೀಗೆಂದನು: "ಇದೇನು ಕೋಮಲೆ! ಹಾಸ್ಯಕ್ಕಾಗಿ ಹೇಳಿದ ಮಾತನ್ನೇ ನಿಜವೆಂದು ಭಾವಿಸಿ ದುಃಖಿಸುವುದೇಕೆ?

ಕೋಮಲೆ—ಸಾಕು ನಿಮ್ಮ ಹಾಸ್ಯ! ಇದೇನು ಮಿತಿ ಇಲ್ಲದ ಹಾಸ್ಯ! ಇದು ಹಾಸ್ಯವೇ ಅಲ್ಲ. ಹಿಂದೆ ನಡೆದುದನ್ನೇ ಎಲ್ಲರೂ ಒಟ್ಟುಗೂಡಿ ಪ್ರಕಟಗೊಳಿಸಿದಿರಿ.

ಮೋಹನ—ಆಗಲಿ. ಇದು ಹಾಸ್ಯವಲ್ಲದಿದ್ದರೂ ನಾನು ನಿನ್ನನ್ನು ಪ್ರೀತಿಸಿದ ಮೇಲೆ ದೂರಪಡಿಸುವೆನೆಂದು ಭಾವಿಸಿದೆಯಾ?

ಕೋಮಲೆ—ನಿಮ್ಮನ್ನು ತಿಳಿಯಲು ಹೇಗೆ ಸಾಧ್ಯ? ಮೊದಲೊಂದು ಬಾರಿ ಹೀಗೆಯೇ ವಂಚಿಸಲಿಲ್ಲವೇನು? ಅದರಂತೆ ಈಗಲೂ ವಂಚಿಸಿದರೆ ಅದೂ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವೆಂದು ಭಾವಿಸುತ್ತಿದ್ದೆನು.

ಮೋಹನ—ಅದೇನು ಸುಟ್ಟ ನಿನ್ನ ಪಾಪ! ಪಾಪ, ಪಾಪವೆಂದು ಎಷ್ಟು ಬಾರಿ ಹೇಳಿಕೊಳ್ಳುವಿ. ನಿನ್ನ ಹೃದಯದ ತಳಮಳದಿಂದ ಅದೆಲ್ಲವೂ

ಸುಟ್ಟು ಭಸ್ಮಾವಶಿಷ್ಟವಾಯಿತು. ತಿರುಗಿ ಅದನ್ನು ಮನಸ್ಸಿಗೆ ತಂದುಕೊಳ್ಳ ಬೇಡ ಈ ದಿನದಿಂದ ನೀನು ನನ್ನ ಅರ್ಧಾಂಗಿ, ತಿಳಿಯಿತೇ! ಇನ್ನೇನೂ ಸಂಶಯವಿಲ್ಲವಷ್ಟೆ? ಈ ರೀತಿ ಸರಸ ಸಲ್ಲಾಪಗಳು ನಡೆಯುತ್ತಿರುವಾಗಲೇ ಬೆಳ್ಳಗೆ ಬೆಳಗಾಯಿತು.

---

## ನವಮ ಗುಚ್ಛ.



ಭರ್ಜರಿ ಪೋಷಾಕಿನಿಂದ ಮೆರೆಯುತ್ತಿದ್ದ ತರುಣನೊಬ್ಬನು ಸೈಕ ಲ್ಲೊಂದನ್ನು ನಿದಾನವಾಗಿ ಬಿಟ್ಟುಕೊಂಡು ಫ್ರೆಜರೀರೋಡಿನಲ್ಲಿ ಹೋಗುತ್ತಿ ದ್ದನು. ಆ ತರುಣನು ಎರಡು ದಿನಗಳಿಂದಲೂ ಫ್ರೆಜರೀರೋಡಿನಲ್ಲಿ ಒಂದು ಮನೆಯನ್ನು ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸುತಲಿದ್ದನು ಈಗಲೂ ಆ ಮನೆಯ ಹತ್ತಿರ ಬರುತ್ತಿರಲು, ಭಿಕ್ಷುಕನೊಬ್ಬನು ಆ ಮನೆಯಿಂದ ಹೊರಗೆ ಬಂದು ತರುಣನ ಎದುರಿನಲ್ಲಿಯೇ ಹೊರಟು ಹೋದನು. ತರಣನು ಎರಡು ದಿನ ಅಲ್ಲಿ ನಿಂತು ನೋಡಿದ್ದರಲ್ಲಿ ಆ ಮನೆಗೆ ನಾನಾ ತರಹದ ಜನರು ಬಂದು ಹೋಗುತ್ತಿದ್ದಂತೆ ಕಂಡಿದ್ದಿತು. ಈಗ ಭಿಕ್ಷುಕನನ್ನು ಸ್ಪಷ್ಟವಾಗಿ ನೋಡಿದೊಡನೆ ಸಂಶಯವು ದೂರಾಯಿತು. ತರುಣನು ಕಂಡು ಹಿಡಿದ ಮನೆಯು ಇನ್ನಾರದ್ದೂ ಆಗಿರದೆ ಮೋಹನನದಾಗಿತ್ತು. ತರುಣನು ಅಲ್ಲಿಂದ ಹೊರಟು, ವೇಗವಾಗಿ ಸೈಕಲ್ಲನ್ನು ನಡೆಸಿ ಪೋಲೀಸ್ ಸ್ಟೇಷನ್ನಿಗೆ ಹೋದನು. ಅಲ್ಲಿ ಇನ್‌ಸ್ಪೆಕ್ಟರರಿಗೆ ತನ್ನ ಗುರುತನ್ನು ತೋರಿಸಿ ಸಶಸ್ತ್ರರಾದ ಹದಿನೈದು ಜನ ಪೋಲೀಸರೊಂದಿಗೆ ಕೂಡಲೆ ತನ್ನ ಜೊತೆಯಲ್ಲಿ ಬರಲು ಹೇಳಿದನು.

ಒಟ್ಟಿಗೆ ಹೊರಟರೆ ಗುಟ್ಟು ರಟ್ಟಾದೀತೆಂಬ ಭಯದಿಂದ ತರುಣನು ತಾನು ಗುರುತಿಸಿದ ಮನೆಯ ಪರಿಚಯವನ್ನು ಹೇಳಿ, ಎಲ್ಲರೂ ಬೇರೆ ಬೇರೆ ಯಾಗಿ ಒಡನೆ ಅಲ್ಲಿಗೆ ಸೇರಲು ತಿಳಿಸಿ, ತಾನು ವೇಗವಾಗಿ ಮುಂದೆ ಹೊರಟು ಹೋದನು. ಸ್ವಲ್ಪ ಹೊತ್ತಿನೊಳಗೆ ಮೋಹನನ ಮನೆಯು ಪೋಲೀಸ ರಿಂದ ಸುತ್ತುವರಿಯಲ್ಪಟ್ಟಿತು. ಮನೆಯ ಬಾಗಿಲು ತೆರೆದಿತ್ತು. ಒಳಗೆ

ಮೊದಲು ಪ್ರವೇಶಿಸಲು ಯಾರಿಗೂ ಧೈರ್ಯವಿರಲಿಲ್ಲ. ತರುಣನು ಯಾವುದಕ್ಕೂ ಭಯಪಡದೆ ಮುಂದಾಳಾಗಿ ಒಳನುಗ್ಗಿದನು. ಕೈಯಲ್ಲಿ ಚಾರ್ ಮಾಡಿದ ಪಿಸ್ತೂಲನ್ನು ಹಿಡಿದಿದ್ದನು. ಆತನ ಹಿಂದಿನಿಂದ ಹತ್ತು ಜನ ಪೋಲೀಸರೂ, ಇನ್ಸಪೆಕ್ಟರರೂ ಹೋದರು. ಉಳಿದ ಪೋಲೀಸರು ಹೊರಗೆ ಕಾವಲಿಗೆ ನಿಂತರು.

ತರುಣನೂ ಪೋಲೀಸರೂ ಒಳಗೆ ದುಡುಕಿದರು. ಯಾರೂ ಕಾಣಲಿಲ್ಲ. ಕೆಳಗಿರುವ ಎಲ್ಲಾ ಸ್ಥಳಗಳನ್ನೂ ಹುಡುಕಿ ಮಹಡಿಯ ಮೇಲೆ ಹೋದರು. ಕೋಣೆಯೊಂದರಲ್ಲಿ ಕೋಮಲೆಯೂ ಸುಮತಿಯೂ ಮಾತನಾಡುತ್ತ ಕುಳಿತಿದ್ದರು. ಅಲ್ಲಲ್ಲಿ ಹುಡುಕಿ ಯಾರನ್ನೂ ಕಾಣದೆ ತರುಣನು ಪೋಲೀಸರೊಡನೆ ಕೋಮಲೆಯು ಸಂಭಾಷಿಸುತ್ತಿದ್ದ ಕೊಠಡಿಗೆ ಹೋದನು. ತರುಣನನ್ನೂ ಪೋಲೀಸರನ್ನೂ ನೋಡಿ ಕೋಮಲೆಯು ಏನನ್ನೂ ತಿಳಿಯದವಳಂತೆ ಗಾಬರಿಯನ್ನು ನಟಿಸುತ್ತಾ:—"ನೀವು ಯಾರು?" ಎಂದಳು. ತರುಣನು ಮುಂದೆ ಬಂದು ನುಡಿದನು: —ನಾನು ಸುಖಾನಂದ ಈ ಮನೆಯವರನ್ನೆಲ್ಲಾ ದಸ್ತಗಿರಿ ಮಾಡಲು ಪೋಲೀಸರೊಂದಿಗೆ ಬಂದಿರುವೆನು.' ಕೋಮಲೆಯು ಭೀತಿಪಟ್ಟಂತೆ ನಟಿಸಿ:—"ಏನು, ನಮ್ಮ ದಸ್ತಗಿರಿಯೇ? ನಾವು ಯಾರೆಂದು ಭಾವಿಸಿ ಹಿಡಿಯಲು ಬಂದಿರುವಿರಿ? ನಾವು ಯಾವ ತಪ್ಪನ್ನೂ ಮಾಡಿದವರಲ್ಲ."

ಸುಖಾನಂದ—ಎಲ್ಲವನ್ನೂ ತಿಳಿದೇ ಇಲ್ಲಿಗೆ ಬಂದಿರುವೆನು. ನಾನೆಂದಿಗೂ ಮೋಸ ಹೋಗಲಾರೆನು. ಗದ್ದಲ ಮಾಡದೆ ನಮ್ಮ ಆಧೀನರಾಗದೆ ಇದ್ದರೆ, ಬಲಾತ್ಕರಿಸಿ ನಾವೇ ಬೇಡಿಗಳನ್ನು ತೊಡಿಸಬೇಕಾದೀತು. ಹೂಂ, ಏಳಿರಿ.

ಕೋಮಲೆ—ಛೀ. ಇದೇನು! ಸ್ತ್ರೀಯರಲ್ಲಿಯೂ ನಿಮ್ಮಂತಹ ಪತ್ತೆದಾರಿಗಳ ಬಲಾತ್ಕಾರವೇ!

ಸುಖಾನಂದ—ನಾನಿದೆಲ್ಲವನ್ನೂ ಅರಿತಿರುವೆನು. ಹಿಂದೊಮ್ಮೆ ನಾನು ಇದೇ ಸ್ತ್ರೀವೇಷಕ್ಕೆ ಮರುಳಾಗಿ ಮೋಸಹೊಂದಿದ್ದೆನು. ಈಗ ಮಾತ್ರ ಮೋಸಹೊಂದಲಾರೆನು.

ಕೋಮಲೆ—ನಮ್ಮಿಬ್ಬರನ್ನು ಮಾತ್ರ ಹಿಡಿದರೆ ನಿಮ್ಮ ಕಾರ್ಯವು ನೆರವೇರುವುದೇ? ಮನೆಯ ಉಳಿದ ಜನರು ಬರುವವರಿಗೆ ಸ್ವಲ್ಪ ಕಾದು ನಿಂತಿರಿ.

ಕೋಮಲೆಯ ಮಾತಿನಿಂದ ಸುಖಾನಂದನಿಗೆ ಸ್ವಲ್ಪ ಸಂಶಯವುಂಟಾಯಿತು. ಹೆಚ್ಚುಹೊತ್ತು ಅಲ್ಲಿ ನಿಂತರೆ ಕೆಲಸವು ಕೆಡುವುದೆಂದು ಭಾವಿಸಿ "ನಿಮ್ಮನ್ನು ಜೈಲಿನಲ್ಲಿಟ್ಟು, ಅನಂತರ ನಿಮ್ಮಿಂದಲೇ ಉಳಿದವರನ್ನು ಹಿಡಿಯಲು ಯತ್ನಿಸುವೆನು" ಎಂದು ನುಡಿದು, ವಿಲಂಬಮಾಡದೆ ಇಬ್ಬರಿಗೂ ಬೇಡಿಗಳನ್ನು ಹಾಕಿ ಅವರನ್ನು ಮಹಡಿಯಿಂದ ಕೆಳಗೆ ಕರೆದುಕೊಂಡು ಹೋದನು. ಆ ಸಮಯಕ್ಕೆ ಸರಿಯಾಗಿ ಒಂದು ಸಣ್ಣ ಮೋಟಾರು ಆ ಮನೆಯ ಮುಂದೆ ಬಂದು ನಿಂತಿತು. ಹಿಂದೆ ಆ ಮನೆಯಿಂದ ಹೊರಟು ಹೋದ ಭಿಕ್ಷುಕನು ಮಾತ್ರ ಆ ಮೋಟಾರಿನಲ್ಲಿ ಬಂದಿರುವುದನ್ನು ನೋಡಿ ಸುಖಾನಂದನು ಆತನನ್ನು ಕೂಡಲೆ ಸೆರೆಹಿಡಿದನು. ಭಿಕ್ಷುಕನು ಪ್ರಿಯನಾಥನಾಗಿದ್ದನು. ಸುಖಾನಂದನು ಇನ್‌ಸ್ಪೆಕ್ಟರರನ್ನು ಕುರಿತು:-"ನೀವು ಈ ಮೂರು ಜನರನ್ನು ಇದೇ ಮೋಟಾರಿನಲ್ಲಿ ಕೂರಿಸಿಕೊಂಡು ಸ್ಟೇಷನ್ನಿಗೆ ನಡೆಯಿರಿ. ಜೊತೆಯಲ್ಲಿ ಒಬ್ಬ ಪೋಲೀಸನನ್ನು ಕರೆದುಕೊಳ್ಳಿರಿ. ಮೋಟಾರು ಚಿಕ್ಕದಾದುದರಿಂದ ಐದು ಜನರಿಗಿಂತ ಹೆಚ್ಚು ಜನರು ಕುಳಿತುಕೊಳ್ಳಲು ಸಾಧ್ಯವಿಲ್ಲ" ಎಂದು ಹೇಳಿ "ನಿಮಗೆ ಮೋಟಾರನ್ನು ನಡೆಸಲು ತಿಳಿದಿರುವುದಷ್ಟೆ?" ಎಂದು ಪ್ರಶ್ನೆಮಾಡಿದನು. ಇನ್‌ಸ್ಪೆಕ್ಟರರು 'ತಿಳಿದಿದೆ' ಎಂದು ನುಡಿದರು.

ಸುಖಾನಂದ—ನಾನು ಈ ಪೋಲೀಸರೊಂದಿಗೆ ಇಲ್ಲಿಯೇ ಇದ್ದು ಉಳಿದವರನ್ನು ಹಿಡಿಯಲು ಯತ್ನಿಸುವೆನು. ನೀವು ಹೋಗಿರಿ. ವಿಲಂಬ ಮಾಡಬೇಡಿ.

ಇನ್‌ಸ್ಪೆಕ್ಟರರು ಸುಖಾನಂದನ ಮಾತಿನಂತೆ ಕೈದಿಗಳನ್ನು ಮೋಟಾರಿನಲ್ಲಿ ಕೂರಿಸಿಕೊಂಡು ಒಬ್ಬ ಪೋಲೀಸನೊಂದಿಗೆ ತಾವೂ ಕುಳಿತು, ಮೋಟಾರನ್ನು ನಡೆಸಿಕೊಂಡು ಹೊರಟರು. ಮೋಟಾರು ಸ್ವಲ್ಪ ದೂರ ಹೋದೊಡನೆ 'ಢಣ್' ಎಂದು ದೊಡ್ಡ ಶಬ್ದವೊಂದು ಉಂಟಾಯಿತು. ಶಬ್ದವಾದ ಉತ್ತರ ಕ್ಷಣದಲ್ಲಿ ಇನ್‌ಸ್ಪೆಕ್ಟರರು ಕುಳಿತಿದ್ದಂತೆಯೇ ಅವರ ಎರಡೂ ಕಾಲುಗಳು

ಕಬ್ಬಿಣದ ಒಂದು ಯಂತ್ರದಿಂದ ಬಂಧಿಸಲ್ಪಟ್ಟವು. ಬಂಧನದಿಂದ ಬಲವಾದ ಯಾತನೆಯುಂಟಾಗಲಾರಂಭಿಸಿತು. ಮರ್ಯಾದೆಯು ಹೋಗುವುದೆಂಬ ಭಯ ದಿಂದ ಇನ್‌ಸ್ಪೆಕ್ಟರರು ಕೂಗಲು ಯತ್ನಿಸಲಿಲ್ಲ. ಕೂಗಲು ಪ್ರಯತ್ನಿಸಿದ್ದರೂ ಪ್ರಯೋಜನವಾಗುವಂತಿರಲಿಲ್ಲ. ಕೂಗಿದೊಡನೆ ಇನ್ನಾವುದಾದರೂ ಪ್ರಾಣಾ ಪಾಯಕರವಾದ ಯಂತ್ರವು ಎದ್ದು ಪೀಡಿಸಬಹುದೆಂದು ಇನ್‌ಸ್ಪೆಕ್ಟರರಿಗೆ ಇನ್ನೊಂದು ಭಯವಿದ್ದಿತ್ತು.

ಇನ್‌ಸ್ಪೆಕ್ಟರರ ಅವಸ್ಥೆಯನ್ನು ನೋಡಿ ಹತ್ತಿರದಲ್ಲಿದ್ದ ಪೋಲೀಸನು ಬೆದರಿ ಕೂಗುವುದರೊಳಗೆ ಪ್ರಿಯನಾಥನು ಹೇಳಿದನು: "ಲೇ! ಬಾಯಿ ಬಿಟ್ಟೆಯಾದರೆ ಇನ್‌ಸ್ಪೆಕ್ಟರರಂತೆ ನೀನೂ ಒಡನೆ ಪ್ರಾಣಾಪಾಯಕ್ಕೆ ಒಳಗಾ ಗುವಿ. ಈಗ ನಾನು ಹೇಳಿದಂತೆ ಕೇಳಿದರೆ ನಿನ್ನ ಪ್ರಾಣವು ಉಳಿದೀತು. ಮೊದಲು ಎದ್ದು ಬಂದು ನಮ್ಮ ಬೇಡಿಗಳನ್ನು ತೆಗೆದುಹಾಕು. ಬೀಗದ ಕೈ ಯನ್ನು ಇನ್‌ಸ್ಪೆಕ್ಟರರ ಜೇಬಿನಿಂದ ತೆಗೆದುಕೋ. ಇನ್‌ಸ್ಪೆಕ್ಟರರ ಭಯವು ನಿನಗಿಲ್ಲ. ಇನ್ನೊಂದು ಕ್ಷಣದೊಳಗೆ ಇನ್‌ಸ್ಪೆಕ್ಟರರ ಸ್ಥಿತಿಯು ಬದಲಾಯಿ ಸುವದು. ಹೂ! ಏಳು."

ಪೋಲೀಸನು ಪ್ರಾಣದ ಭಯದಿಂದ ಹೆದರಿ ಪ್ರಿಯನಾಥನು ಹೇಳಿ ದಂತೆ ಮಾಡಿದನು. ಪ್ರಿಯನಾಥನು ಮೋಟಾರನ್ನು ಒಂದೆಡೆಯಲ್ಲಿ ನಿಲ್ಲಿಸಿ ಇನ್‌ಸ್ಪೆಕ್ಟರರನ್ನು ಬಂಧನದಿಂದ ಬಿಡಿಸಿ, ಅವರನ್ನೂ, ಪೋಲೀಸನನ್ನೂ ಕೆಳ ಗಿಳಿಸಿ, ಮೋಟಾರನ್ನು ವೇಗವಾಗಿ ನಡಿಸಿಕೊಂಡು ಎತ್ತಲೋ ಹೊರಟು ಹೋದನು. ಇನ್‌ಸ್ಪೆಕ್ಟರರು ನಡೆದ ಸಮಾಚಾರವನ್ನು ಸುಖಾನಂದನಿಗೆ ತಿಳಿಸುವಂತೆ ಪೋಲೀಸನಿಂದ ಹೇಳಿ ಕಳುಹಿಸಿ, ತಾವು ಜೋಲುಮುಖದಿಂದ ಮನೆಯ ದಾರಿ ಹಿಡಿದು ಹೊರಟು ಹೋದರು.

ಇತ್ತ ಸುಖಾನಂದನು ಕೈದಿಗಳನ್ನು ಇನ್‌ಸ್ಪೆಕ್ಟರರ ಕಾವಲಿನಿಂದ ಕಳುಹಿಸಿ, ಆ ಮನೆಯೊಳಗೆ ಇನ್ನು ಯಾರೂ ಇರಲಾರರೆಂದು ನಿಶ್ಚೈಸಿ, ಪೋಲೀಸರನ್ನು ಬೀದಿಯ ಬಾಗಿಲಿನಲ್ಲಿ ಕಾವಲಿಟ್ಟು, ಮನೆಯೊಳಗೆ ಪ್ರವೇ ಶಿಸಲು ಯಾರಾದರೂ ಬಂದರೆ ಹಿಡಿಯಲು ಹೇಳಿ, ತನ್ನ ಜೊತೆಗೆ ಒಬ್ಬ ಪೋಲೀಸನನ್ನು ಕರೆದುಕೊಂಡು ಮನೆಯೊಳಗೆ ವಿಶೇಷವೇನಾದರೂ ಇರು

ವದೇ ಎಂಬುದನ್ನು ಪರೀಕ್ಷಿಸಲು ಒಳಹೊಕ್ಕನು. ವಿಶೇಷವಾದ ವಸ್ತುಗಳು ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ. ಒಂದೆಡೆಯಲ್ಲಿ ಸ್ವಲ್ಪ ಹಣ್ಣುಗಳಿದ್ದವು. ಅದನ್ನು ಕಂಡು ಪೋಲೀಸನ ಬಾಯಲ್ಲಿ ನೀರು ಬಂದಿತು. ಮುಂದೆ ಸುಖಾನಂದನನ್ನು ಹಿಂಬಾಲಿಸದೆ ಆತನು ಹಣ್ಣುಗಳಿದ್ದಲ್ಲಿಯೇ ನಿಂತು ಬಿಟ್ಟನು. ಸುಖಾನಂದನು ಒಂದು ಕೋಣೆಯಿಂದು ಮತ್ತೊಂದು ಕೋಣೆಗೆ, ಅಲ್ಲಿಂದ ಮತ್ತೊಂದಕ್ಕೆ, ಹೀಗೆ ಹುಡುಕುತ್ತಾ ಒಂದು ಕೋಣೆಗೆ ಬಂದನು. ಅದು ಬೇರೆ ಕಡೆಗಿಂತ ಚೆನ್ನಾಗಿ ತೋರುತಲಿತ್ತು. ಕೋಣೆಯ ಮಧ್ಯದಲ್ಲೊಂದು ದುಂಡಾದ ಮೇಜು ಇದ್ದು, ಅದರ ಸುತ್ತಲೂ ನಾಲ್ಕಾರು ಕುರ್ಚಿಗಳಿದ್ದವು. ಮೇಜಿನ ಮೇಲೆ ಕೆಲವು ಪುಸ್ತಕಗಳೂ, ಕೆಲವು ಕಾಗದದ ಕಟ್ಟುಗಳೂ ಇದ್ದವು. ಸುಖಾನಂದನು ಒಂದು ಕುರ್ಚಿಯ ಮೇಲೆ ಕುಳಿತು ಕಾಗದದ ಕಟ್ಟುಗಳನ್ನು ಬಿಡಿಸಿ ನೋಡಲಾರಂಭಿಸಿದನು. ಅವುಗಳಲ್ಲಿ ಕೆಲವು ಕಾಗದಗಳು ಗುಪ್ತ ಭಾಷೆಯಿಂದ ಬರೆಯಲ್ಪಟ್ಟಿದ್ದವು. ಅವು ಸುಖಾನಂದನಿಗೆ ಅರ್ಥವಾಗಲಿಲ್ಲ. ಸುಖಾನಂದನು ಆ ಕಾಗದಗಳನ್ನೆಲ್ಲಾ ಒಂದು ರಾಶಿಯಾಗಿ ಮಾಡಿ, ಬೆಂಕಿ ಕಡ್ಡಿಯನ್ನು ಕೀರಿ ಕಾಗದಗಳ ರಾಶಿಗೆ ಬೆಂಕಿಯಿಟ್ಟನು. ಕಾಗದಗಳು ಉರಿಯುವದನ್ನೇ ನೋಡುತಲಿದ್ದ ಸುಖಾನಂದನು ಹಿಂದಿನಿಂದ ಬಂದು ನಿಂತವರನ್ನು ನೋಡಲಿಲ್ಲ. ಮೋಹನನೂ, ಮದನನೂ ಸುಖಾನಂದನ ಪ್ರತಿಯೊಂದು ಕಾರ್ಯವನ್ನೂ ಗುಪ್ತವಾಗಿ ನಿಂತು ನೋಡುತ್ತಿದ್ದರು. ಕಾಗದಗಳು ಸುಟ್ಟು ಹೋದನಂತರ ಸುಖಾನಂದನು ಅಲ್ಲಿಂದ ಹೊರಡಲು ಉದ್ಯುಕ್ತನಾಗುತ್ತಿರುವದರೊಳಗೆ ಮೋಹನನೂ, ಮದನನೂ ಅವನನ್ನು ಹಿಂದಿನಿಂದಲೆ ಬಲವಾಗಿ ಹಿಡಿದರು. ಸುಖಾನಂದನು ಎಷ್ಟು ಬಲಶಾಲಿಯಾದರೂ ಅಕಸ್ಮಾತ್ತಾಗಿ ಹಿಂದಿನಿಂದ ಹಿಡಿದು ಬಿಟ್ಟಿದ್ದರಿಂದ ಏನು ಮಾಡಲೂ ಸಾಧ್ಯವಾಗದೆ ಕ್ಷಣಮಾತ್ರದಲ್ಲಿ ಬಂಧಿಸಲ್ಪಟ್ಟನು. ಸುಖಾನಂದನನ್ನು ಹಿಂಬಾಲಿಸಲು ಬಂದಿದ್ದ ಪೋಲೀಸನು ಈ ಮೊದಲೇ ಬಂಧಿತನಾಗಿದ್ದನು. ಇನ್ನು ಬೀದಿಯ ಬಾಗಿಲಿನಲ್ಲಿ ಕಾವಲು ನಿಂತಿದ್ದ ಪೋಲೀಸರನ್ನು ಮಾತ್ರ ಶಿಕ್ಷಿಸುವದು ಉಳಿದಿತ್ತು. ಅದಕ್ಕಾಗಿ ಮೋಹನನು ಒಂದು ಉಪಾಯವನ್ನು ಯೋಚಿಸಿ ಬಾಗಿಲಿನಿಂದ ಸ್ವಲ್ಪ ದೂರದಲ್ಲಿ ನಿಂತು "ಬನ್ನಿ, ಬನ್ನಿ, ಒಳಗೆ ಕಳ್ಳರು"

ಎಂದು ಕೂಗಿದನು. ಹೊರಗೆ ನಿಂತಿದ್ದ ಪೋಲೀಸರು ಒಳಗೆ ಓಡಿ ಬಂದರು. ಒಡನೆ ಮೂಲೆಯಲ್ಲಿ ಕಾದು ನಿಂತಿದ್ದ ಮೋಹನನೂ, ಮದನನೂ ದೊಡ್ಡ ದೊಣ್ಣೆಗಳಿಂದ ಸಿಕ್ಕಿದ ಸ್ಥಳದಲ್ಲಿ ಬಡಿಯಲಾರಂಭಿಸಿದರು. ಪ್ರಾಣವು ಉಳಿದರೆ ಸಾಕೆಂದು ಪೋಲೀಸರು ಹೊರಗೆ ಓಡಿದರು. ಹೊರಗೆ ಓಡಿದ ಪೋಲೀಸರ ಗದ್ದಲದಿಂದ ಆಚೆಯಿಂದ ಈಚೆಯಿಂದ ಜನರು ಅಲ್ಲಿ ಸೇರಿದರು. ನೂರಾರು ಜನರು ಗುಂಪುಕೂಡಿ ಮನೆಯೊಳಗೆ ಪ್ರವೇಶಿಸಿದರು. ಬಂಧಿತರಾದ ಸುಖಾನಂದ, ಮತ್ತೊಬ್ಬನಾದ ಪೋಲೀಸನಲ್ಲದೆ ಇನ್ನಾರೂ ಒಳಗೆ ಕಾಣಿಸಲಿಲ್ಲ. ಸುಖಾನಂದನು ಬಿಡಿಸಲ್ಪಟ್ಟು ಮನೆಯಿಂದ ಹೊರಗೆ ಹೋದನು. ಅಷ್ಟರಲ್ಲಿ ಇನ್‌ಸ್ಪೆಕ್ಟರರೊಡನೆ ಹೋಗಿದ್ದ ಪೋಲೀಸನು ಅಲ್ಲಿಗೆ ಬಂದು ಸುಖಾನಂದನ ಹತ್ತಿರ ಮೋಟಾರಿನಲ್ಲಿ ನಡೆದ ವಿಚಾರವನ್ನು ಹೇಳಿದನು. ಸುಖಾನಂದನು ತನ್ನ ಕಾರ್ಯವೆಲ್ಲವೂ ವಿಫಲವಾದುದಕ್ಕಾಗಿ ಮನದಲ್ಲಿ ನೊಂದು ಅಲ್ಲಿಂದ ಹೊರಟು ರಾಕಾಚಂದ್ರನಿರುವ ಸ್ಥಳಕ್ಕೆ ಹೋಗಿ ತನಗುಂಟಾದ ಸ್ಥಿತಿಯನ್ನು ವರ್ಣಿಸಿದನು.

ರಾಕಾಚಂದ್ರ—ತಿರುಗಿ ನಾವಿಲ್ಲಿಗೆ ಗುಟ್ಟಾಗಿ ಬಂದರೂ ಪ್ರಯೋಜನವಾಗಲಿಲ್ಲ. ನೀನು ಅಷ್ಟು ಬೇಗನೆ ಮುಂದರಿಯಬಾರದಾಗಿತ್ತು. ನನಗೂ ತಿಳಿಸಲಿಲ್ಲ.

ಸುಖಾನಂದ—ನನಗೆ ಆ ಮನೆಯ ಮೇಲೆ ಎರಡು ದಿನಗಳಿಂದ ಸಂಶಯವುಂಟಾಗಿತ್ತು. ಅದು ನಿಶ್ಚಯವಾಗದೆ ನಿನ್ನ ಹತ್ತಿರ ಹೇಳಬಾರದೆಂದು ಸುಮ್ಮನಿದ್ದೆನು. ಈ ದಿನ ಅಲ್ಲಿಗೆ ಹೋದಾಗ ಸಂದೇಹವು ಬಲವಾಯಿತು. ವಿಲಂಬವಾದರೆ ಕೆಲಸವು ಕೆಡಬಹುದೆಂದು ಇಲ್ಲಿಗೆ ಬಂದು ನಿನ್ನ ಹತ್ತಿರ ತಿಳಿಸಲಿಲ್ಲ. ಇತ್ತ ಇನ್‌ಸ್ಪೆಕ್ಟರರೂ ಮೋಸ ಹೊಂದಿದರು.

ರಾಕಾಚಂದ್ರ—ನೀನು ಆ ಮನೆಯ ಹತ್ತಿರ ಹೋದಾಗ ಭಿಕ್ಷುಕನೊಬ್ಬನು ಎದುರಿಗೆ ಹೋದನೆಂದು ಹೇಳಿದಿಯಲ್ಲವೇ? ಆತನು ಆಗ ನಿನ್ನನ್ನು ಗುರುತಿಸಿಯೇ ಮುಂದೆ ಹೊರಟು ಹೋಗಿ, ನಿನ್ನನ್ನು ವಂಚಿಸಲು ಸಿದ್ಧಪಡಿಸಿಕೊಂಡಿರಬಹುದು. ನಿನ್ನ ಪರಿಚಯವು ಅವರಿಗೆ ಇಲ್ಲದೇ ಇದ್ದಲ್ಲಿ ನೀನು ಥಟ್ಟನೆ ಅಲ್ಲಿಗೆ ಹೋದಾಗ ಮನೆಯವರೆಲ್ಲರೂ ಒಂದೇ ಕಾಲದಲ್ಲಿ

ಸಿಕ್ಕಿ ಬೀಳುತ್ತಿದ್ದರು. ನೀನು ಹಿಡಿದ ಮೂರು ಜನರಲ್ಲಿ ಯಾರದ್ದಾದರೂ ಗುರುತು ನಿನಗೆ ಲಭಿಸಿತೇ?

ಸುಖಾನಂದ—ಇಲ್ಲ. ಸರಿಯಾಗಿ ಪರೀಕ್ಷಿಸಲು ಅವಕಾಶವು ದೊರೆಯಲಿಲ್ಲ. ಸ್ತ್ರೀಯರಿಬ್ಬರ ವಿಷಯದಲ್ಲಿ ನನಗೆ ಸಂದೆಹವಿದೆ. ನನ್ನ ಹತ್ತಿರ ಮಾತನಾಡಿದವಳು ಮೋಹನನೇ ಇರಬಹುದೆಂದು ನನ್ನ ನಂಬಿಕೆಯಿದೆ.

ರಾಕಾಚಂದ್ರ—ಏನೋ ಹೇಳುವುದು ಕಷ್ಟ. ನಿನ್ನ ಪರಿಚಯವು ಸಿಕ್ಕಿರುವದರಿಂದ ನೀನಿಲ್ಲಿಗೆ ಬರುವಾಗ ಅವಡು ನಿನ್ನನ್ನು ಹಿಂಬಾಲಿಸಿ ಬಂದು ಈ ಮನೆಯನ್ನೂ ಗುರುತಿಸಿ ಹೋಗಿರಬಹುದು. ನಮ್ಮ ಗುಟ್ಟು ಬಹಿರಂಗವಾಯಿತು. ನಮ್ಮ ಯ:ತ್ನವು ಗುಟ್ಟು ಹೊರಪಡುವುದಕ್ಕಿಂತ ಮೊದಲೇ ಸಫಲವಾಗಬೇಕಾಗಿತ್ತು. ಇನ್ನು ಸಂದೇಹವೇ ಸರಿ. ಇನ್ನು ನಾವು ಜಾಗರೂಕರಾಗಿರಬೇಕು.

ಆ ಸ್ನೇಹಿತರಿಬ್ಬರು ಈ ರೀತಿ ಮಾತನಾಡುತ್ತಿರಲು ಹೊರಬಾಗಿಲಿನಲ್ಲಿ ಕುಳಿತ ಸೇವಕನು ಅಲ್ಲಿಗೆ ಬಂದು ಒಂದು ಲಕ್ಕೋಟೆಯನ್ನು ಕೊಟ್ಟು:—
"ಈಗ ತಾನೇ ಒಂದು ಮೋಟಾರು ಮನೆಯ ಬಾಗಿಲಿನಲ್ಲಿ ಬಂದು ನಿಂತು, ಡ್ರೈವರನು ಈ ಲಕ್ಕೋಟೆಯನ್ನು ನನ್ನ ಹತ್ತಿರಕ್ಕೆ ಎಸೆದೊಡನೆ ವೇಗವಾಗಿ ಹೊರಟು ಹೋಯಿತು" ಎಂದು ನುಡಿದನು. ರಾಕಾಚಂದ್ರನು ಲಕ್ಕೋಟೆಯೊಳಗಿದ್ದ ಕಾಗದವನ್ನು ಓದಿದನು

"ಪ್ರಿಯ ರಾಕಾಚಂದ್ರ ಮತ್ತು ಸುಖಾನಂದರಿಗೆ, ಸ್ವಲ್ಪ ಹೊತ್ತಿಗೆ ಮುಂಚೆ ನಡೆದ ಪತ್ತೇದಾರಿ ಚಾತುರ್ಯವು ಹೇಗಿದೆ? ಸುಖಾನಂದನ ಈ ಚಾತುರ್ಯಕ್ಕಾಗಿ ಸಂತೋಷಿಸುವೆನು. ನಮ್ಮನ್ನು ಹಿಡಿಯಲೇಬೇಕೆಂದಿದ್ದ ನಿಮ್ಮ ಛಲವು ಇನ್ನೂ ಹೋಗದೆ ಇದ್ದುದಕ್ಕಾಗಿ ನಿಮ್ಮಿಬ್ಬರನ್ನು ಶ್ಲಾಘಿಸುವೆನು. ಈ ನಿಮ್ಮ ಛಲವು ಇನ್ನೂ ವೃದ್ಧಿಹೊಂದಲಿ; ಆದರೆ ಇನ್ನು ಮಾತ್ರ ನೀವು ಎಷ್ಟು ಜಾಗರೂಕರಾದರೂ ಸಾಕಾಗಲಾರದು. ಪ್ರಾಣಾಪಾಯವು ಸಂಭವಿಸಲೂ ಬಹುದು. ಜಾಗ್ರತೆ. ಇತಿ ಮೋಹನ"

ರಾಕಾಚಂದ್ರ—ಪ್ರಾಣಾಪಾಯವು ಸಂಭವಿಸಬಹುದೆಂದು ಮೋಹನನು ಬೆದರಿಸಿರುವನು; ಆದರೆ ಅದು ಮಾತ್ರ ಮೋಹನನಿಂದ ನಡಿಯಲಾರ

ದೆಂದು ನನ್ನ ಮನವು ಬೋಧಿಸುತ್ತಿದೆ. ನಮ್ಮನ್ನು ದಂಗುಬಡಿಸಲು ಹಾಗೆ ಬೆದರಿಸಿರಬಹುದೆಂದು ನನಗೆ ತೋರುತ್ತಿದೆ; ಆದರೆ ಇನ್ನು ಮುಂದೆ ನಮ್ಮ ಯಾವ ಉಪಾಯವೂ ಸಫಲವಾಗಲು ಆತನು ಬಿಡಲಾರನು.

ಪುನಃ ಮಿತ್ರರಿಬ್ಬರೂ ವೇಷಧಾರಿಗಳಾಗಿ ಮೋಹನನ ವಸತಿಯನ್ನು ಹುಡುಕಲು ತೊಡಗಿದರು. ಆರೇಳು ದಿನಗಳವರಿಗೆ ಯಮುನಾಪುರಿಯ ಬೀದಿಗಳಲ್ಲಿ ಸಂದುಗೊಂದುಗಳಲ್ಲಿ ಅಲೆದಾಡಿದರೂ ಪ್ರಯೋಜನವಾಗಲಿಲ್ಲ ಎಂಟನೇದಿನ ಒಂದು ಲಕ್ಕೋಟೆಯು ರಾಕಾಚಂದ್ರನ ವಿಳಾಸಕ್ಕೆ ಪೋಷ್ಟ ದ್ವಾರಾ ಬಂದಿತು. ಆದರಲ್ಲಿ ಈ ಮೇರೆ ಬರೆಯಲ್ಪಟ್ಟಿತ್ತು:—

"ಹುಡುಕಿ ಹುಡುಕಿ ದಣಿದರೂ ನಿಮಗೆ ಪ್ರಯೋಜನವಾಗಲಿಲ್ಲ. ಮುಂದೆಯೂ ಪ್ರಯೋಜನವಾಗುವಂತಿಲ್ಲ. ನಾಳೆ ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ನೀವಿಬ್ಬರೂ ಇಷ್ಟವಿದ್ದರೆ ಇಲ್ಲಿಗೆ ಬನ್ನಿರಿ. ನಿಮ್ಮಿಬ್ಬರಿಗಿಂತ ಹೆಚ್ಚು ಜನರು ಇಲ್ಲಿಗೆ ಬರಲಾಗದು. ಸ್ಥಳ:—ರಾಮಚಂದ್ರ ದೇವಾಲಯದ ಹತ್ತಿರ ೩೨ನೇ ನಂಬರಿನ ಮನೆ. ಕೇಶವೇಶ್ವರ ಸ್ಟ್ರೀಟ್"

ರಾಕಾಚಂದ್ರ—ಕಾಗದದಲ್ಲಿ ಬರೆದವನ ಹೆಸರಿಲ್ಲದಿದ್ದರೂ ಮೋಹನನಲ್ಲದೆ ಇನ್ನಾರೂ ಇದನ್ನು ಬರೆದಿಲ್ಲ. ಕಾಗದದ ಒಳ ಅಭಿಪ್ರಾಯವೇನೆಂಬದು ತಿಳಿಯಲಿಲ್ಲ. ಅಲ್ಲಿಗೆ ಹೋಗಿ ಸಿಕ್ಕಿ ಬೀಳುವುದಾದರೆ ಪ್ರಯೋಜನವಿಲ್ಲ. ಕಾಗದದಲ್ಲಿ ಬರೆದಂತೆ ಆ ಸ್ಥಳಕ್ಕೆ ಹೊಗುವುದನ್ನು ಬಿಟ್ಟರೆ ಇನ್ನಾವ ಉಪಾಯವೂ ನನಗೆ ಹೊಳೆಯುವುದಿಲ್ಲ. ನಿನಗೆ ಹೇಗೆ ತೋರುವುದು?

ಸುಖಾನಂದ—ಈ ಕಾಗದದಿಂದ ಮೋಹನನು ಈಗ ವಾಸವಿರತಕ್ಕ ಸ್ಥಳವು ತಿಳಿದ ಮೇಲೆ ಕಾಗದದ ಮೇರೆಗೆ ನಾಳೆ ನಾವು ಅಲ್ಲಿಗೆ ಹೋಗುವದಕ್ಕಿಂತ ಈ ದಿನ ರಾತ್ರಿಯೇ ಪೋಲೀಸರೊಡನೆ ಅಲ್ಲಿಗೆ ಹೋಗಿ ಮನೆಯಲ್ಲಿ ಇರುವವರನ್ನು ಹಿಡಿಯುವದು ಅನುಕೂಲವಲ್ಲವೇ?

ರಾಕಾಚಂದ್ರ—ಹೌದು. ಇದೊಂದು ಯುಕ್ತಿಯೇ ಸರಿ.

ರಾಕಾಚಂದ್ರ ಮತ್ತು ಸುಖಾನಂದರು ಅದೇ ದಿನ ರಾತ್ರಿ ಒಂದು ಗಂಟೆಯ ಸಮಯದಲ್ಲಿ ಇಪ್ಪತ್ತೈದು ಜನ ಪೋಲೀಸರೊಂದಿಗೆ ಮೋಹನನು ಕಾಗದದಲ್ಲಿ ತಿಳಿಸಿದ ಮನೆಗೆ ಹೋದರು. ಮನೆಯ ಎಲ್ಲಾ ಕದಗಳೂ ಮುಚ್ಚ

ಲ್ಪಟ್ಟಿದ್ದವು ಬೇರೆ ಏನೂ ಉಪಾಯ ತೋರದೆ ಮನೆಯ ಸುತ್ತಲೂ ಪೋಲೀಸರನ್ನು ನಿಲ್ಲಿಸಿ ಒಂದು ಬಾಗಿಲನ್ನು ಒಡೆದರು. ಮನೆಯೊಳಗೆ ಕತ್ತಲೆಯಾಗಿತ್ತು. ರಾಕಾಚಂದ್ರನು ತನ್ನ ಎಲೆಕ್ಟ್ರಿಕ್ ದೀಪವನ್ನು ಹಚ್ಚಿದನು. ಆಯುಧಪಾಣಿಗಳಾಗಿ ಮಿತ್ರರಿಬ್ಬರು ನಾಲ್ಕು ಜನ ಪೋಲೀಸರೊಂದಿಗೆ ಒಳಹೊಕ್ಕರು. ಮುದುಕನಾದ ಸೇವಕನೊಬ್ಬನು ಮನೆಯ ಬಾಗಿಲನ್ನು ಒಡೆಯುವ ಗಲಭೆಯಿಂದ ಎಚ್ಚತ್ತು ಗಾಬರಿಯಾಗಿ ಬಾಯಿ ಬಿಡುತ್ತಾ ಒಂದು ಮೂಲೆಯಲ್ಲಿ ನಿಂತಿದ್ದನು. ಬಾಗಿಲು ಒಡೆಯಲ್ಪಟ್ಟು ನಾಲ್ಕಾರು ಜನರು ದೀಪದೊಂದಿಗೆ ಎಳಹೊಕ್ಕದ್ದನ್ನು ನೋಡಿ, ಅವರನ್ನು ಕಳ್ಳರೆಂದು ಭಾವಿಸಿ, ಆತನು ಭಯದಿಂದ ಗಟ್ಟಿಯಾಗಿ ಕೂಗಲಾರಂಭಿಸಿದನು. ರಾಕಾಚಂದ್ರನು ಸೇವಕನ ಸ್ಥಿತಿಯನ್ನು ನೋಡಿ ಸಂಶಯಪಟ್ಟು ಆತನನ್ನು ಸಮಾಧಾನಗೊಳಿಸಿ ಕೇಳಿದನು: " ಇದು ಯಾರ ಮನೆ! ಇದರಲ್ಲಿ ಯಾರು ವಾಸಿಸುವರು?"

ಸೇವಕ—ಸ್ವಾಮಿ! ಇದು ದಾದಾಜಿ ಮಾರ್ವಾಡಿಗಳ ಮನೆ. ನನ್ನ ಹೊರತು ಇದರಲ್ಲಿ ಈಗ ಇನ್ನಾರೂ ಇಲ್ಲ. ಇಲ್ಲಿ ಈಗ ಯಾರೂ ವಾಸ ಮಾಡದೇ ಇರುವದರಿಂದ ನಾನು ಇಲ್ಲಿ ಕಾವಲಿಗೆ ನಿಂತಿರುವೆನು. ಇದನ್ನು ಬಾಡಿಗೆಗಾಗಿ ಉಪಯೋಗಿಸುತ್ತಿರುವರು. ನಾಳೆ ಮಧ್ಯಾಹ್ನ ಹನ್ನೆರಡು ಗಂಟೆಗೆ ಇಲ್ಲಿಗೆ ಯಾರೋ ಶ್ರೀಮಂತರು ವಾಸ ಮಾಡಲು ಬರುವರೆಂದು ಮಾತ್ರ ಕೇಳಿದ್ದೆನು.

ರಾಕಾಚಂದ್ರನು ಸೇವಕನ ಮಾತಿನಲ್ಲಿ ಸಂಪೂರ್ಣವಾಗಿ ನಂಬಿಗೆಯನ್ನಿಡದೆ, ದಾದಾಜಿ ಮಾರ್ವಾಡಿಗಳ ಸ್ವಂತ ಮನೆಯಿರುವ ಸ್ಥಳವನ್ನು ಸೇವಕನಿಂದ ಕೇಳಿ ತಿಳಿದು ಅಲ್ಲಿಗೆ ಇಬ್ಬರು ಪೋಲೀಸರನ್ನು ಓಡಿಸಿದನು. ಪೋಲೀಸರು ಅಲ್ಲಿಗೆ ಹೋಗಿ ಹಿಂದಿರುಗಿ ಬಂದು "ಸೇವಕನು ನುಡಿದುದು ನಿಶ್ಚಯ"ವೆಂದು ಹೇಳಿದರು.

ಸುಖಾನಂದನ ಮಾತಿನಂತೆ ನಡೆದುದರಿಂದ ಕಾರ್ಯವು ವಿಫಲವಾಯಿತೆಂದು ರಾಕಾಚಂದ್ರನು ಯೋಚಿಸಿ ಅಲ್ಲಿಂದ ಹಿಂದಿರುಗಿದನು.

ಮಾರನೇ ದಿನವೂ ಮೋಹನನಿಂದ ಕಾಗದವೊಂದು ಬಂದಿತು. ಅದರಲ್ಲಿ ಈ ಮೇರೆ ಇತ್ತು:—

"ನಿಮ್ಮ ಅನ್ಯಾಯ ವರ್ತನೆಗೆ ತಕ್ಕ ಶಿಕ್ಷೆಯಾಯಿತು. ಅಹಾ! ಎಷ್ಟು ಚೆನ್ನಾಗಿ ಯುಕ್ತಿಯನ್ನು ಉಪಯೋಗಿದಿರಿ? ನಾನು ಬರೆದ ಸಮಯಕ್ಕಿಂತ ಮೊದಲೇ ನೀವಲ್ಲಿಗೆ ಯಾಕೆ ಹೋಗಬೇಕಾಗಿತ್ತು. ಇನ್ನಾದರೂ ಹೇಳಿದಂತೆ ಕೇಳುವಿರಾ? ಈ ದಿನ ರಾತ್ರಿ ಒಂದು ಗಂಟೆಯ ಹೊತ್ತಿಗೆ ಕಮೀಷನ್ ರೋಡಿನಲ್ಲಿ ನಾಲ್ಕನೇ ನಂಬರಿನ ಆನಂದಭವನಕ್ಕೆ ಬನ್ನಿರಿ. ಹಿಂದಿನ ನಿಯಮವನ್ನು ಮೀರಬಾರದು. ಮೀರಿದರೆ ವಿಫಲರಾಗುವಿರಿ. ಇತಿ-

ಮೋಹನ"

ಸುಖಾನಂದ—ಈ ದಿನವೂ ನಾನು ಪೋಲೀಸರೊಂದಿಗೆ ಹೋಗಿ ಅಲ್ಲಿಯೇ ಹತ್ತಿರದಲ್ಲಿ ಕಾದು ನಿಲ್ಲುವೆನು. ಸಮಯಕ್ಕೆ ಸರಿಯಾಗಿ ಮುಂದೊತ್ತುವೆನು. ಅಂತಹ ಸಮಯವನ್ನು ನೀನು ಸೂಚಿಸಬೇಕು.

ರಾಕಾಚಂದ್ರ—ನಾನು ಕಾಗದದಲ್ಲಿ ಬರೆದ ಕಾಲಕ್ಕೆ ಸರಿಯಾಗಿ ಅಲ್ಲಿಗೆ ಹೋಗಿ ಸರಿಯಾದ ಕಾಲದಲ್ಲಿ ಗುಂಡಿನ ಸದ್ದನ್ನು ಮಾಡುವೆನು. ಒಡನೆ ನೀನು ಮುಂದೆ ಬಂದು ಮನೆಯನ್ನು ಸುತ್ತುಗಟ್ಟಬೇಕು.

ಸುಖಾನಂದ—ಆಗಲಿ.

ರಾಕಾಚಂದ್ರನು ರಾತ್ರಿ ಒಂದು ಗಂಟೆಯ ಸಮಯದಲ್ಲ ಕಾಗದದಲ್ಲಿ ತಿಳಿಸಿದ ಸ್ಥಳಕ್ಕೆ ಹೋದನು. ಮನೆಯನ್ನು ಗುರುತಿಸಿ ರಾಕಾಚಂದ್ರನು ಹತ್ತಿರಕ್ಕೆ ಹೋದನು. ಬಾಗಿಲಿನಲ್ಲಿ ಮೋಹನನು ನಿಂತಿದ್ದನು ರಾಕಾ ಚಂದ್ರನನ್ನು ನೋಡಿ:—"ಇದೇನು! ಸುಖಾನಂದನು ಬರಲಿಲ್ಲವೆ?" ಎಂದು ಕೇಳಿದನು.

ರಾಕಾಚಂದ್ರ—ನಿನ್ನೆ ವ್ಯರ್ಥವಾದುದರಿಂದ ಈ ದಿನವೂ ಹಾಗೆಯೇ ಆಗುವುದೆಂಬ ಶಂಕೆಯಿಂದ ಬರಲಿಲ್ಲ.

ಮೋಹನ—ನಿಮ್ಮ ಯತ್ನವು ನಿನ್ನೆ ವಿಫಲವಾದುದು ಮಾತ್ರವಲ್ಲ, ಈ ದಿನವೂ ವಿಫಲವಾಗುವುದು. ನೀವು ನಿಯಮವನ್ನು ಮೀರಿ ಬಂದಿರುವಿರಿ

ರಾಕಾಚಂದ್ರ—ಹೇಗೆ?

ಮೋಹನ—ಸುಖಾನಂದನು ನಿನ್ನೊಡನೆ ಇಲ್ಲಿಗೆ ಬರದೆ ಪೋಲೀಸ ರೊಂದಿಗೆ ಹೊರಗೆ ಗುಪ್ತವಾಗಿ ನಿಂತಿರುವುದು ನಿಯಮವಿರೋಧವಲ್ಲವೆ?

ರಾಕಾಚಂದ್ರ—ಅದರಿಂದ ಹಾನಿ ಏನು?

ಮೋಹನ—ಅದರಿಂದ ಹಾನಿಯು ನಿನಗಿಲ್ಲದಿದ್ದರೂ ನನಗೆ ಇದೆ.

ರಾಕಾಚಂದ್ರ:—ನನ್ನನ್ನಿಲ್ಲಿಗೆ ಬರಲು ಹೇಳಿದುದು ಏಕೆ?

ಮೋಹನ—ನನ್ನ ಕಾಗದದಂತೆ ನೀನು ಬರದೇ ಇರುವದರಿಂದ ಈಗ ನೀನು ಸುಮ್ಮನೆ ಹಿಂದಿರುಗಿ ಹೋಗುವುದೇ ಸುಖಕರವಾದುದು.

ರಾಕಾಚಂದ್ರ—ಹಿಂದಿರುಗದೆ ಶಕ್ತಿಯನ್ನು ತೋರ್ಪಡಿಸಿದರೆ....

ಮೋಹನ—ಅದರಿಂದ ನಿನಗೇ ಕಷ್ಟವಾಗಬಹುದು.

ರಾಕಾಚಂದ್ರನು ಒಡನೆ ಪಿಸ್ತೂಲನ್ನು ಬಾರ್ ಮಾಡಿ ಮೋಹನನ ಮುಖಕ್ಕೆ ಹಿಡಿದು: "ಈಗೇನು ಹೇಳುವಿ? ಅತ್ತಿತ್ತ ಅಲುಗಾಡಿದರೆ ಸುಟ್ಟು ಬಿಡುವೆನು" ಎಂದು ನುಡಿದನು.

"ನಿನ್ನ ಗುರಿಯನ್ನು ನೋಡಲಿಚ್ಛಿಸುವೆನು" ಎಂದು ಮೋಹನನು ನುಡಿಯುವುದರೊಳಗಾಗಿ ಪಿಸ್ತೂಲನ್ನು ಹಿಡಿದಿದ್ದ ರಾಕಾಚಂದ್ರನ ಕೈ ಮೇಲೆ ಅಕಸ್ಮಾತ್ತಾಗಿ ಬಲವಾದ ದೊಣ್ಣೆಯು ಏಟೊಂದು ಬಿದ್ದು ಪಿಸ್ತೂಲು ದೂರಕ್ಕೆ ಹಾರಿ ಹೋಗಿ 'ಢಂ' ಎಂದು ಸದ್ದುಮಾತ್ರ ಆಯಿತು ಆ ರೀತಿ ದೊಣ್ಣೆಯನ್ನು ಉಪಯೋಗಿಸಿದ ವ್ಯಕ್ತಿಯು ಕ್ಷಣದೊಳಗೆ ಅಲ್ಲಿಗೆ ಬಂದು ಇನ್ನೊಂದು ಕ್ಷಣದೊಳಗೆ ಹೊರಟು ಹೋಗಿತ್ತು. ರಾಕಾಚಂದ್ರನು ಅತ್ತಿತ್ತ ನೋಡುವುದರೊಳಗೆ ಮೋಹನನು ಮನೆಯೊಳಗೆ ನುಗ್ಗಿ ಬಾಗಿಲನ್ನು ಮುಚ್ಚಿಬಿಟ್ಟನು. ಗುಂಡಿನ ಸದ್ದನ್ನು ಕೇಳಿ ಸುಖಾನಂದನು ಪೋಲೀಸರೊಡನೆ ಮುಂದೆ ಬಂದನು. ರಾಕಾಚಂದ್ರನು ಅಲ್ಲಿ ನಡೆದ ವಿಚಾರವನ್ನು ಸುಖಾನಂದನಿಗೆ ತಿಳಿಸಿ, "ಬಾಗಿಲನ್ನೊಡೆದು ಒಳಗೆ ಪ್ರವೇಶಿಸುವದೇ ಮುಖ್ಯ ಉಪಾಯವು" ಎಂದು ಹೇಳಿದನು. ಸ್ವಲ್ಪ ಹೊತ್ತಿನಲ್ಲಿಯೇ ಪೋಲೀಸರಿಂದ ಒಂದು ಬಾಗಿಲು ಒಡೆಯಲ್ಪಟ್ಟಿತು. ಕೂಡಲೆ ಒಳಗಿನಿಂದ ಭಯಪಡಿಸಲು ಒಂದು ಗುಂಡು ಬಂದು ರಾಕಾಚಂದ್ರನ ಹತ್ತಿರವೇ ಹೊರಟು ಹೋಯಿತು. ಪೋಲೀಸರು ಗುಂಡಿನ ಭಯದಿಂದ ಮನೆಯೊಳಗೆ ಕಾಲಿಡಲು ಹೆದರಿದರು. ರಾಕಾಚಂದ್ರನು ತಾನೇ ಮುಂದೆ ಹೋಗುತ್ತೇನೆಂದು ಹೇಳಿ ಪೋಲೀಸರನ್ನು ಉತ್ತೇಜನಗೊಳಿಸಿ ಮನೆಯೊಳಗೆ ಪ್ರವೇಶಿಸಿದನು. ಯಾರೂ ಪ್ರತಿಬಂಧಿಸ

ಲಿಲ್ಲ. ಎಲ್ಲರೂ ಒಳಹೊಕ್ಕು ಹುಡುಕಿದರು. ಯಾರೂ ಸಿಗಲಿಲ್ಲ. ಹಿಂದಿನ ದಿನ ಸುಖಾನಂದನಿಗೆ ಮೋಸ ಮಾಡಿದಂತೆ ಇಲ್ಲಿಯೂ ಎಲ್ಲಾದರೂ ಗುಪ್ತ ವಾಗಿ ನಿಂತಿರಬಹುದೆಂದು ರಾಕಾಚಂದ್ರನು ಊಹಿಸಿ ಸುಖಾನಂದನೊಡನೆ ಪ್ರತಿಯೊಂದು ಸ್ಥಳವನ್ನೂ ಸೂಕ್ಷ್ಮದೃಷ್ಟಿಯಿಂದ ಜಾಗರೂಕತೆಯಿಂದ ಪರೀಕ್ಷಿಸಿದರು.

ಪೋಲೀಸರ ಸಹಾಯವು ಅಧಿಕವಾಗಿ ಇದ್ದುದರಿಂದ ಪ್ರಾತಃಕಾಲದ ವರೆಗೂ ಅಲ್ಲಿ ಹುಡುಕಿದರು. ಪ್ರಯೋಜನವೇನೂ ಆಗಲಿಲ್ಲ. ಬೆಳಗಾದ ಬಳಿಕ ಮನೆಯಿಂದ ಹೊರಗೆ ಬಂದು ನಿಂತು ನೋಡಲು ವಿಷಯವು ತಿಳಿಯಿತು. ಮನೆಯು ಹೊರಗಿನ ಅಳತೆಗಿಂತ ಒಳಗಿನ ಅಳತೆಯು ಹೆಚ್ಚಾಗಿದ್ದಿತು. ಅದೇನು ಕಾರಣವೆಂದು ನೋಡಲು ಅದೂ ತಿಳಿಯಿತು. ಒಳಗೆ ವಿಸ್ತಾರ ವಾಗ ಒಂದೇ ಮನೆಯಾಗಿದ್ದು ಹೊರಗೆ ಎರಡು ಮನೆಗಳಾಗಿ ತೋರುತ್ತಿದ್ದವು. ಯಾವ ದ್ವಾರದಿಂದ ರಾಕಾಚಂದ್ರನೇ ಮೊದಲಾದವರು ಪ್ರವೇಶಿಸಿದ್ದರೋ ಆ ಬಾಗಿಲಿನಲ್ಲಿ ಮಾತ್ರ ಪೋಲೀಸರು ಕಾದಿದ್ದರು. ರಾತ್ರಿ ಕಾಲ ದಲ್ಲಿ ಹುಡುತ್ತಿದ್ದುದರಿಂದ ಮನೆಯ ಒಳ ಭಾಗವು ಅಷ್ಟೇಕೆ ವಿಸ್ತಾರವಾಗಿದೆ? ಎಂಬುದನ್ನು ತಿಳಿಯಲು ಯಾರೂ ಹವಣಿಸಲಿಲ್ಲ. ಪೋಲೀಸರ ಕಾವಲು ಇಲ್ಲದೇ ಇರುವ ಇನ್ನೊಂದು ಮನೆಯಂತೆ ತೋರುತಲಿದ್ದ ಸ್ಥಳದ ಬಾಗಿಲಿನಿಂದ ಮೋಹನನು ತಪ್ಪಿಸಿಕೊಂಡು ಹೋಗಿದ್ದನು.

ಈ ರೀತಿ ಕಾರ್ಯವು ನಿಷ್ಫಲವಾದುದರಿಂದ ರಾಕಾಚಂದ್ರನೂ ಸುಖಾ ನಂದನೂ ನಿರಾಶರಾಗಿ ಹಿಂದಿರುಗಿದರು. ಬೇರೆ ಏನಾದರೂ ಕಾಗದವು ಮೋಹನನಿಂದ ಬರಬಹುದೆಂದು ಎಂಟು ದಿನಗಳ ವರೆಗೆ ನಿರೀಕ್ಷಿಸಿದರು ಕಾಗದವು ಬರಲಿಲ್ಲ. ಮೋಹನನನ್ನು ಹಿಡಿಯಲು ನೂರಾರು ಬಾರಿ ಪ್ರಯತ್ನಿಸಿ ಅದೊಂದೂ ಸಫಲವಾಗದೆ ಇದ್ದುದಕ್ಕಾಗಿ ಬೇಸತ್ತು ಪತ್ತೇ ದಾರಿಗಳಿಬ್ಬರೂ: "ನಮ್ಮಿಂದೀಕಾರ್ಯವು ಸಾಧ್ಯವಿಲ್ಲ"ವೆಂದು ಸರ್ಕಾರಕ್ಕೆ ತಿಳಿಸಿಬಿಟ್ಟರು.

ರಾತ್ರಿ ಒಂಬತ್ತು ಗಂಟೆಯ ರೈಲಿನಲ್ಲಿ ಸುವರ್ಣ ನಗರಕ್ಕೆ ಹೊರಡಲು ಸಿದ್ಧಪಡಿಸಿಕೊಂಡರು. ರಾತ್ರಿ ಏಳೂವರೆ ಗಂಟೆಯ ಸಮಯದಲ್ಲಿ ರಾಕಾ

ಚಂದ್ರನ ಮನೆಯ ಹತ್ತಿರ ಒಂದು ಮೋಟಾರು ಬಂದು ನಿಂತಿತು. ಮೋಟಾರಿನಿಂದ ಮೋಹನನೂ ಪ್ರಿಯನಾಥನೂ ಇಳಿದರು. ಅಷ್ಟರಲ್ಲಿ ಮೋಟಾರು ಯಾರದೆಂಬುದನ್ನು ತಿಳಿಯಲು ರಾಕಾಚಂದ್ರ ಮತ್ತು ಸುಖಾನಂದರು ಹೊರಗೆ ಬಂದಿದ್ದರು. ತಾನಾಗಿಯೇ ಬಂದಿರುವ ಮೋಹನನನ್ನು ನೋಡಿ ಇನ್ನೇನು ತೊಂದರೆಯನ್ನು ಕೊಡಲು ಬಂದಿರುವನೋ ಎಂದು ಮಿತ್ರರಿಬ್ಬರೂ ತಿಳಿದುಕೊಂಡರು. ಮೋಹನನು ರಾಕಾಚಂದ್ರನ ಹತ್ತಿರ ಬಂದು "ಪತ್ತೇದಾರಿಗಳಿಗೆ ನಮಸ್ಕಾರ"ವೆಂದು ನುಡಿದನು. ಮಿತ್ರರಿಬ್ಬರೂ ಮೌನದಿಂದಲೇ ನಿಂತಿದ್ದರು. ಮೋಹನನು ಪತ್ತೇದಾರಿಗಳಿಬ್ಬರ ಮುಖಭಾವವನ್ನು ತಿಳಿದು ನುಡಿದನು:—"ಇದೇನು ಸೋಜಿಗ! ಮನೆಯ ಬಾಗಿಲಿಗೆ ಬಂದಿರುವ ಅತಿಥಿಗಳನ್ನು ತಾವಾಗಿಯೇ ಸತ್ಕರಿಸಬೇಕು. ಅದಿಲ್ಲ. ಹೋಗಲಿ ಮಾತನಾಡಿಸಿದರೆ ಉತ್ತರವನ್ನಾದರೂ ಕೊಡಬೇಡವೇ?"

ರಾಕಾಚಂದ್ರ--ಸಾಕು ನಿನ್ನ ಹಾಸ್ಯ! ಇಷ್ಟರವರೆಗೆ ನಿನ್ನಿಂದ ತೊಂದರೆಯೊದಗಿದ್ದೇ ಸಾಕಾಗಿದೆ.

ಮೋಹನ—ನಿಮ್ಮ ಸ್ನೇಹವನ್ನು ಸಂಪಾದಿಸಲು ಬಂದಿರುವ ನನಗೆ ಮನೆಯೊಳಗೂ ಕರೆಯದೆ ಹೊರಗಿನಿಂದಲೇ 'ಹೋಗಿ ಬಾ' ಎಂದು ಹೇಳುವಿರಾ? ಚೆನ್ನಾಗಿದೆ.

ಸುಖಾನಂದ--ನಾವಾಗಿಯೇ ನಿನ್ನನ್ನು ಮನೆಯೊಳಗೆ ಪ್ರವೇಶಗೊಳಿಸಿ ಇನ್ನಾವ ಕಷ್ಟಕ್ಕೆ ಗುರಿಯಾಗಬೇಕೋ?

ಮೋಹನ—ಇದೇನು? ನನ್ನಲ್ಲಿ ಇಷ್ಟು ಅಸಮಾಧಾನ!

ರಾಕಾಚಂದ್ರ—ಇಲ್ಲ. ಇಷ್ಟವಿದ್ದರೆ ಒಳಗೆ ಬರಬಹುದು, ಎಂದು ನುಡಿದು ಮನೆಯೊಳಗೆ ಹೊರಟನು. ಎಲ್ಲರೂ ಒಳಗೆ ಹೋಗಿ ಕುಳಿತುಕೊಂಡರು. ಮೋಹನನು ನಗುತ್ತಾ ಹೇಳಿದನು: "ಕಡೆಗೂ 'ಇಷ್ಟವಿದ್ದರೆ' ಎಂಬ ಮಾತನ್ನು ಹೇಳಿಯೇ ಒಳಗೆ ಬರಮಾಡಿಕೊಂಡಿರುವಿ."

ರಾಕಾಚಂದ್ರ—ಆ ಮಾತನ್ನು ಹೇಳಲು ನೀನೇ ಕಾರಣನು.

ಮೋಹನ—ಅದು ಹೇಗೆ?

ರಾಕಾಚಂದ್ರ— ಇದುವರೆಗೆ ನಮ್ಮ ಪ್ರಯತ್ನಗಳಲ್ಲಿ ಒಂದನ್ನಾದರೂ

ಸಫಲವಾಗುವಂತೆ ಬಿಟ್ಟಿರುವಿಯಾ? ಏನಾದರೂ ಆಗಲಿ. ಚೆನ್ನಾಗಿ ಕೈ ತೋರಿಸಿರುವಿ ನಾವಿನ್ನುಮುಂದೆ ಈ ಪತ್ತೇದಾರಿ ಉದ್ಯೋಗವನ್ನು ಮಾಡಬಾರದೆಂಬುದು ನಿನ್ನ ಇಚ್ಛೆಯಷ್ಟೆ?

ಮೋಹನ:—ಅಷ್ಟೊಂದು ಅಸಮಾಧಾನವು ನಿಮಗುಂಟಾಗಲು ನಾನೇನು ಮಾಡಿರುವೆನು? ಲೋಕಪ್ರಸಿದ್ಧರಾದ ನಿಮ್ಮಿಬ್ಬರಿಗೆ ಇದೊಂದು ಕಷ್ಟವಾಗಿ ತೋರಿತೇ? ಸುಖಾನಂದ! ನೀನೇ ಹೇಳು. ನನ್ನ ಮೋಸವು ಯಾವುದು! ನಿನಗೆ ಗೊತ್ತಿರುವುದಷ್ಟೇ?

ಸುಖಾನಂದ—ಕೊಡುವಷ್ಟು ಕಷ್ಟವನ್ನು ಕೊಟ್ಟು ಇನ್ನೂ ಹಾಸ್ಯ ವನ್ನೇ ಮಾಡುವಿಯಾ? ಸಾಕು.

ಮೋಹನ—"ಅಷ್ಟೊಂದು ಮನಸ್ಸಿಗೆ ತಂದುಕೊಳ್ಳಬೇಡ. ವಿಶೇಷ ವಾದ ತಪ್ಪು ಯಾವುದಾದರೂ ಇದ್ದರೆ ಅದನ್ನು ಮರೆತು ಕ್ಷಮಿಸಿಬಿಡು." ಎಂದು ಹಿಂದೆ ಸ್ತ್ರೀವೇಷಧಾರಿಯಾಗಿ ಮೋಸಪಡಿಸಿದ ರೀತಿಯನ್ನು ಮಾರ್ಮಿಕವಾಗಿ ಸೂಚಿಸಿದನು.

ಸುಖಾನಂದ—ಮೋಹನ' ಅದನ್ನೆಲ್ಲಾ ತಿರುಗಿ ಹೇಳಿ ನನ್ನನ್ನು ಮುಖವೆತ್ತದಂತೆ ಮಾಡಬೇಡ.

ಮೋಹನ—ಹಿಂದೆ ನಡೆದುದನ್ನೆಲ್ಲಾ ನೀವಿಬ್ಬರೂ ಮರೆತುಬಿಡಿರಿ. ಈಗ ಏನನ್ನು ಯೋಚಿಸಿರುವಿರಿ! ಸುವರ್ಣನಗರಕ್ಕೆ ಹಿಂದಿರುಗುವಿರಾ?

ರಾಕಾಚಂದ್ರ—ಹಿಂದಿರುಗದೆ ಇಲ್ಲಿದ್ದು ಮಾಡುವುದೇನು? ಇದುವರೆಗೆ ಇಲ್ಲಿ ಇದ್ದುದರಿಂದ ನಮ್ಮ ಕಾರ್ಯವು ಯಾವದು ತಾನೆ ನೆರವೇರಿದೆ? ಇನ್ನು ನಾವು ನಿನ್ನ ಗೋಜಿಗೆ ಬರುವುದಿಲ್ಲ.

ಮೋಹನ—ನಿಮ್ಮ ಸ್ನೇಹವನ್ನು ಸಂಪಾದಿಸಲು ಬಂದಿರುವ ನಾವು ಈಗ ವ್ಯರ್ಥವಾಗಿ ಹಿಂದಿರುಗಬೇಕಲ್ಲವೇ?

ರಾಕಾಚಂದ್ರ—ಯಾರಿಗೂ ಲಭಿಸದೆ ಇರುವ ನಿನ್ನ ಸ್ನೇಹವು ತಾನಾ ಗಿಯೇ ದೊರೆತಿರಲು ಅದನ್ನು ಯಾರು ತಾನೆ ಬಿಡುವರು?

ಮೋಹನ—ಕುಟಿಲರಾದ ಕಳ್ಳರ ಪ್ರೀತಿಯಿಂದ ನಿಮ್ಮ ಉದ್ಯೋಗ ಕ್ಕೂ, ಗೌರವಕ್ಕೂ ಕಲಂಕವುಂಟಾಗುವದಿಲ್ಲವೇ?

ರಾಕಾಚಂದ್ರ--ನಿನ್ನ ವರ್ತನೆಯನ್ನು ನಾನು ಬಹು ದಿನಗಳಿಂದ ಪರಿಶೀಲಿಸಿ, ನಿನ್ನ ನಿಷ್ಕಲಂಕವಾದ ಈ ಸ್ಥಿತಿಯನ್ನು ನಾನು ಯಾವಾಗಲೂ ಶ್ಲಾಘಿಸುತ್ತಿರುವೆನು.

ಮೋಹನ—ನೀನೊಬ್ಬನು ಒಪ್ಪಿದರೂ ಸುಖಾನಂದನು ಇದಕ್ಕೆ ಅಂಗೀಕಾರವನ್ನೀಯಲು. ಅವನಿಗೆ ನನ್ನಲ್ಲೂ, ನನ್ನ ಮಿತ್ರರಲ್ಲೂ ತುಂಬಾ ಕೋಪವಿರುವದು.

ಸುಖಾನಂದ—ಇದೊಂದು ದೋಷವನ್ನು ನನ್ನಲ್ಲಿ ಆರೋಪಿಸಿ ನನ್ನನ್ನು ದೂರಪಡಿಸಲು ಇಚ್ಛಿಸುವಿಯಾ?

ಮೋಹನ—ಇಲ್ಲ. ಈ ದಿನದಿಂದ ನೀವಿಬ್ಬರು ನನಗೂ, ನನ್ನ ಎಲ್ಲಾ ಮಿತ್ರರಿಗೂ ಪರಮಮಿತ್ರರು. (ಪ್ರಿಯನಾಥನನ್ನು ತೋರಿಸಿ) ಈತನು ಪ್ರಿಯನಾಥನು. ನನ್ನ ಬಲಗೈಯಂತಿರುವನು.

ರಾಕಾಚಂದ್ರ—ಉಳಿದವರ ಪರಿಚಯವೆಲ್ಲಿ ಸಿಗುವದು?

ಮೋಹನ—ಇಷ್ಟರಲ್ಲಿಯೇ ಅವರು ಇಲ್ಲಿಗೆ ಬರಲು ಹೊರಟಿರುವರು. ಈಗ ಬರಬಹುದು.

ಸ್ವಲ್ಪ ಹೊತ್ತಿನೊಳಗೆ ಇನ್ನೊಂದು ಮೋಟಾರು ಬಂದು ನಿಂತು ಅದರಿಂದ ಮೋಹನನ ಲಲನೆ ಕೋಮಲೆಯೂ, ಮದನನೂ, ಲಕ್ಷ್ಮೀಶನೂ, ಗುಣಾನಂದನೂ, ಬೇರೆ ಕೆಲವರೂ ಇಳಿದು ಬಂದರು. ರಾಕಾಚಂದ್ರನು ಬಂದಿರುವವರಿಗೆ ಸುಖಾಗಮನವನ್ನು ಬಯಸಿದನು. ಮೋಹನನು ಕೋಮಲೆಯೊಬ್ಬಳನ್ನು ಬಿಟ್ಟು ಉಳಿದವರ ಪರಿಚಯವನ್ನು ಹೇಳಿದನು. ರಾಕಾಚಂದ್ರನು ಕೋಮಲೆಯನ್ನು ತೋರಿಸಿ "ಇವರ ಪರಿಚಯವು ಸಿಗಲಿಲ್ಲ. ಇದೇನು! ಇನ್ನೂ ಮೋಸಪಡಿಸುವ ಇಚ್ಛೆಯಿಂದ ಸ್ತ್ರೀ ವೇಷದಿಂದ ಬರಲು ಹೇಳಿರುವಿಯಾ?" ಎಂದು ಮೋಹನನನ್ನು ಪ್ರಶ್ನಿಸಿದನು. ಮೋಹನನು ನಗುತ್ತಾ "ಇದು ವೇಷವಲ್ಲ; ಬ್ರಹ್ಮಸೃಷ್ಟಿಯೇ ಹಾಗೆ" ಎಂದನು.

ರಾಕಾಚಂದ್ರ—ನಿನ್ನ ಮಾತು ನನಗೆ ತಿಳಿಯಲಿಲ್ಲ.

ಪ್ರಿಯನಾಥ--ಇದು ಸ್ತ್ರೀ ವೇಷವಲ್ಲ; ಸ್ತ್ರೀಯೇ ಅಹುದು. ಈಕೆಯು

ಮೋಹನನ ಪ್ರಿಯಲಲನೆಯು. ನಮ್ಮ ಸೇನೆಗೆ ಅಧಿನಾಯಕಿಯು. ಈಕೆಯ ಕಥೆಯು ತುಂಬಾ ಸ್ವಾರಸ್ಯವಾಗಿದೆ. (ಕೋಮಲೆಯ ಕಡೆಗೆ ತಿರುಗಿ)ಅಕ್ಕಾ! ಇವರು ನಮ್ಮ ಸ್ನೇಹಿತರು. ನಿನ್ನ ಕಥೆಯನ್ನು ಹೇಳಲಾ?

ಕೋಮಲೆ—ಸಾಕು ನಿನ್ನ ಹರಟೆ. ಸುಮ್ಮನಿರು.

ಮೋಹನ—ಪ್ರಿಯನಾಥ, ನೀನು ಹೇಳಿದರೆ ಆಕೆಗೆ ಕೋಪವಿಲ್ಲ. ಹೇಳು.

ರಾಕಾಚಂದ್ರ—ನಮಗೂ ಕೇಳಲು ತುಂಬಾ ಕುತೂಹಲವಿದೆ.

ಕೃತಕ ಸಿಟ್ಟಿನಿಂದ ಕೋಮಲೆಯು ಮುಖವನ್ನು ತಿರುಗಿಸಿದಳು. ಪ್ರಿಯನಾಥನು "ಅಕ್ಕಾ, ತಮ್ಮನ ಮೇಲೆ ಕೋಪ ಮಾಡಬೇಡ" ಎಂದು ನಗುತ್ತಾ ಹೇಳಿ ಕೋಮಲೆಯ ಕಥೆಯನ್ನು ಹೇಳಿದನು.

ಪತ್ತೆದಾರಿಗಳಿಬ್ಬರೂ ಕೋಮಲೆಯ ಕಥೆಯನ್ನು ಕೇಳಿ ತಲೆದೂಗಿ: "ಮೋಹನ, ಸರಿಯಾಗಿ ಸಂಪಾದಿಸಿರುವಿ" ಎಂದು ಹೇಳಿದರು.

ಮೋಹನನು ಹೇಳಿದನು:—"ನಾವಿದುವರೆಗೆ ಕಳ್ಳರ ವೇಷವನ್ನು ತಾಳಿದ್ದೆವು ದುಷ್ಟರಾದ ಧನಿಕರನ್ನು ಸದೆಬಡೆದು ಬಡಜನರಿಗೆ ಅನುಕೂಲತೆಯನ್ನು ಕಲ್ಪಿಸುವದೇ ನಮ್ಮ ಸಂಕಲ್ಪವಾಗಿತ್ತು. ಅದು ನೆರವೇರಿತು. ಇನ್ನು ನಾವೆಲ್ಲರೂ ನಮ್ಮ ಪೂರ್ವದ ಸ್ಥಿತಿಗೆ ಇಳಿಯುವೆವು".

ರಾಕಾಚಂದ್ರ—ನನಗೊಂದು ಆಶೆಯಿದೆ. ನೀನೂ ನಿನ್ನ ಮಿತ್ರರೂ ಪತ್ತೆದಾರಿಯ ಉದ್ಯೋಗಕ್ಕೆ ಸೇರಿದರೆ ಲೋಕಕ್ಕೆ ಇನ್ನೂ ಹೆಚ್ಚಿನ ಉಪಕಾರವನ್ನು ಮಾಡಬಹುದಲ್ಲವೇ?

ಮೋಹನ—ಉಪಕಾರವನ್ನೇನೊ ಮಾಡಬಹುದು; ಆದರೆ ಸಂಬಳಕ್ಕೆ ಕೈಯೊಡ್ಡಿ ಮದೋನ್ಮತ್ತರಾದ ಮೇಲಧಿಕಾರಿಗಳ ಮನವನ್ನೊಲಿಸುವ ಉದ್ಯೋಗದಲ್ಲಿರಲು ನನ್ನಿಂದ ಸಾಧ್ಯವೇ ಇಲ್ಲ.

ರಾಕಾಚಂದ್ರ:-ನೀನೊಬ್ಬನು ಮಾತ್ರ ಸಂಬಳವನ್ನಪೇಕ್ಷಿಸದೆ ಜೀವಿಸಬಹುದು. ಎಲ್ಲರೂ ಹಾಗೆಯೇ ಇರಲು ಸಾಧ್ಯವಿರುವದೆ? ನ್ಯಾಯಕ್ಕೆ ತಪ್ಪದೆ ಕಾರ್ಯವನ್ನು ನಡೆಸಿದರೆ ಉದ್ಯೋಗದಿಂದ ತೊಂದರೆಯೇನು?

ಮೋಹನ—ಪ್ರಾಣಹೋಗುವುದಾದರೂ ನ್ಯಾಯವೃತ್ತಿಯನ್ನು ಬಿಡ

ಲಾರೆನೆಂಬ ದೃಢನಿಶ್ಚಯವಿದ್ದರೆ ಅದರಿಂದ ಬಾಧಕವೇನೂ ಇಲ್ಲ; ಆದರೂ ಉದ್ಯೋಗ ಪಾರತಂತ್ರ್ಯದಲ್ಲಿ ನನಗೆ ಸೇರಲು ಇಚ್ಛೆಯಿಲ್ಲ. ಪ್ರಿಯನಾಥ ನಿಗೆ ಮೊದಲೇ ಇಷ್ಟವಿಲ್ಲ. ಉಳಿದವರು ಸೇರಬಹುದು; ಆದರೆ ಅವರೂ ಕೂಡ "ಅನ್ಯಾಯ ಕರ್ಮದಲ್ಲಿ ಎಂದೂ ಪ್ರವೇಶಿಸಲಾರೆವು" ಎಂದು ಮನಃ ಪೂರ್ವಕವಾಗಿ ಪ್ರಮಾಣವನ್ನು ಮಾಡಿದರೆ ಮಾತ್ರ ನಾನು ಅವರಿಗೆ ಅಂಗೀ ಕಾರವನ್ನೀಯುವೆನು.

ಮೋಹನನ ನಿಯಮಕ್ಕೆ ಮದನನೇ ಮೊದಲಾದವರು ಒಪ್ಪಿದರು. ಅನಂತರ ರಾಕಾಚಂದ್ರನು ಅದುವರೆಗೆ ಮೋಹನನೂ, ಮತ್ತವನ ಮಿತ್ರರೂ ಮಾಡಿದ ಪ್ರತಿಯೊಂದು ಕಾರ್ಯವನ್ನೂ ವಿವರವಾಗಿ ವರ್ಣಿಸಿ ಸರಕಾರಕ್ಕೆ ತಿಳಿಯಪಡಿಸಿದನು. ಎಲ್ಲಾ ಪತ್ರಿಕೆಗಳಲ್ಲಿಯೂ ಪ್ರಕಟಿಸಿದನು. ಸರ ಕಾರಕ್ಕೆ ಮೋಹನನ ಮೇಲೆ ಇದ್ದ ಕೆಟ್ಟ ಅಭಿಪ್ರಾಯವನ್ನು ಹೋಗಲಾಡಿ ಸಿದನು. ಮದನನೇ ಮೊದಲಾದ ಮೋಹನನ ಮಿತ್ರರು ಪತ್ತೆದಾರಿ ಉದ್ಯೋಗಕ್ಕೆ ಸೇರಿದರು.

ಮೋಹನನು ಕೋಮಲೆ ಮತ್ತು ಪ್ರಿಯನಾಥನೊಂದಿಗೆ ಸ್ವಸ್ಥಳಕ್ಕೆ ಹೊರಟು ಹೋದನು. ಮೋಹನ ಮತ್ತು ಪ್ರಿಯನಾಥರು ಉದ್ಯೋಗಕ್ಕೆ ಸೇರದೆ ಇದ್ದರೂ ಪತ್ತೆದಾರಿಗಳು ಮಾಡುವ ಕಾರ್ಯಕ್ಕಿಂತ ಹೆಚ್ಚಾಗಿ ಕಾರ್ಯ ಗಳನ್ನು ಮಾಡಿ ಲೋಕಕ್ಕೆ ಉಪಕಾರಗಳನ್ನು ಮಾಡುತ್ತಿದ್ದರು.

---

## ದಶಮ ಗುಚ್ಛ.



ಜ್ಯೋತಿಪುರವೆಂಬುದು ಹಿಂದೆ ವಾಚಕರಿಗೆ ಪರಿಚಿತವಾಗಿದೆ. ಪ್ರತಿ ವರ್ಷದಂತೆ ಜ್ಯೋತಿಪುರದಲ್ಲಿ ಈ ವರ್ಷವೂ ವಾರ್ಷಿಕ ಉತ್ಸವಕ್ಕಾಗಿ ನಾನಾ ದೇಶಗಳಿಂದ ಜನರು ಬಂದು ತುಂಬುತ್ತಿದ್ದರು. ಈ ಉತ್ಸವಕ್ಕೆ ಹತ್ತಿರದ ಊರುಗಳಿಂದಂತೂ ಬಡವರಾಗಲಿ, ಧನಿಕರಾಗಲಿ ಯಾರೂ ಬಾರದೆ ಇರು ತ್ತಿರಲಿಲ್ಲ. ಈ ವಾರ್ಷಿಕ ಉತ್ಸವವನ್ನು ನೋಡಲು ಮೋಹನನು ತನ್ನವ ರೊಂದಿಗೆ ಜ್ಯೋತಿಪುರಕ್ಕೆ ಬಂದಿದ್ದನು. ಉತ್ಸವವು ಎರಡು ದಿನಗಳಲ್ಲಿ

ವಿಜೃಂಭಣೆಯಿಂದ ನೆರವೇರಿತು. ಮೂರನೇ ದಿನವೂ ನಡೆಯಿತು. ಈ ಉತ್ಸವಕಾಲದಲ್ಲಿ ಜನರ ಸಂದಣಿಯು ಹೆಚ್ಚಾಗಿರುವದರಿಂದ ಪ್ರತಿವರ್ಷವೂ ನೂರಾರು ಕಲಹಗಳೂ, ಕಳವುಗಳೂ, ಕೊಲೆಗಳೂ ನಡೆದು ಹೋಗುತ್ತಿದ್ದವು. ಇವುಗಳನ್ನು ಆದಷ್ಟು ತಪ್ಪಿಸಲು ಪೋಲೀಸರನ್ನು ಹೆಚ್ಚಾಗಿ ಸರ್ಕಾರದವರು ಈ ಉತ್ಸವಕಾಲದಲ್ಲಿ ನೇಮಿಸುತಲಿದ್ದರು. ರಾತ್ರಿ-ಹಗಲೆನ್ನದೆ ಪೋಲೀಸರು ಗಸ್ತುತಿರಗುತಲಿದ್ದರು. ಹೀಗೆ ಇದ್ದರೂ ಮೂರನೇದಿನ ರಾತ್ರಿ ಗಸ್ತು ತಿರಗುತಲಿದ್ದ ಪೋಲೀಸನೊಬ್ಬನು ಪೋಲೀಸ್ ಇನ್‌ಸ್ಪೆಕ್ಟರರ ಮನೆಗಿಂತ ಸ್ವಲ್ಪ ಹಿಂದೆ ಬರುತ್ತಿರಲು ಕಾಲಿಗೆ ಏನೋ ತಾಗಿದಂತಾಗಿ, ಫಕ್ಕನೆ ಅಲ್ಲಿಯೇ ನಿಂತು ಎಡವಿದ ಪದಾರ್ಥವೇನೆಂಬದನ್ನು ತಿಳಿಯಲು ಬಗ್ಗಿ ನೋಡಿದನು.

ಆಗ ಬೆಳಗಿನ ನಾಲ್ಕು ಗಂಟೆಯು ಸಮವಾಗಿತ್ತು. ಅದೊಂದು ಮನುಷ್ಯನ ಹೆಣವಾಗಿ ಪೋಲೀಸನಿಗೆ ತೋರಿತು. ಪೋಲೀಸನು ಬೆಚ್ಚಿಬಿದ್ದು ಒಡನೆ ಇನ್‌ಸ್ಪೆಕ್ಟರರ ಮನೆಗೆ ಓಡಿದನು. ಇನ್ಸಪೆಕ್ಟರರನ್ನು ಕೂಗಿದನು. ಮನೆಯೊಳಗೆ ಇದ್ದ ಸೇವಕನು "ಅವರಿಲ್ಲ"ವೆಂದು ಹೇಳಿದನು. ಪೋಲೀಸನು ಅಲ್ಲಿ ವಿಲಂಬ ಮಾಡದೆ ಪೋಲೀಸ್ ಸ್ಟೇಷನ್ನಿಗೆ ಓಡಿದನು. ಇನ್ಸಪೆಕ್ಟರರು ಅಲ್ಲಿಯೂ ಇರಲಿಲ್ಲ. ಪೋಲೀಸನು ಅಲ್ಲಿ ಇದ್ದ ನಾಲ್ಕು ಜನ ಪೋಲೀಸರನ್ನು ಕರೆದುಕೊಂಡು ಶವವಿದ್ದ ಪ್ರದೇಶಕ್ಕೆ ಹೋದನು. ಬೆಳಗಾಯಿತು. ಕೊಲೆಯು ನಡೆದಿದೆ ಎಂದು ಊರೆಲ್ಲವೂ ಹಬ್ಬಿತು. ಮೋಹನನಿಗೂ ಸಮಾಚಾರವು ತಿಳಿದು ವೇಷಾಂತರದಿಂದ ಶವವಿರುವ ಸ್ಥಳಕ್ಕೆ ಹೋದನು. ಆಗಲೆ ಜನರು ಅಲ್ಲಿ ನೆರೆದಿದ್ದರು. ಸ್ವಲ್ಪ ಹೊತ್ತಿನ ಮೇಲೆ ಇನ್ಸಪೆಕ್ಟರರು ಅಲ್ಲಿಗೆ ಬಂದು ವಿಚಾರಿಸಿ ತನ್ನ ಕರ್ತವ್ಯವನ್ನು ನೆರವೇರಿಸಲು ಪತ್ತೆದಾರಿಯಾದ ಮದನನು ಉತ್ಸವಕ್ಕೆ ಬಂದಿರುವುದನ್ನು ತಿಳಿದು ಆತನಿರುವ ಸ್ಥಳಕ್ಕೆ ಒಬ್ಬ ಪೋಲೀಸನನ್ನು ಓಡಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಮದನನು ಅಲ್ಲಿಗೆ ಬಂದು ಶವವನ್ನು ಪರೀಕ್ಷಿಸಿದನು. ವಿಷದಿಂದ ಮರಣವುಂಟಾಗಿದೆ. ಎಂದು ಮದನನು ನಿಶ್ಚಯಿಸಿ, ಹೆಣವನ್ನು ಮೊದಲು ನೋಡಿದ ಪೋಲೀಸನನ್ನು ಕರೆದು ಕೇಳಿದನು. ಪೋಲೀಸನು ತಾನು ಹೆಣವನ್ನು ಎಡವಿ, ಇನ್ಸಪೆಕ್ಟರರ ಮನೆಗೆ ಹೋಗಿ ನಾಲ್ಕು ಜನ

ಪೋಲೀಸರನ್ನು ಕರೆದುಕೊಂಡು ಬಂದೆನೆಂದು ತಿಳಿಸಿದನು. ಮದನನು ಇನ್ಸಪೆಕ್ಟರರನ್ನು ಕೇಳಿದನು:—'ರಾತ್ರಿಯಲ್ಲಿ ಈ ಉತ್ಸವ ಮುಗಿಯುವ ವರೆಗೆ ನೀವು ಸ್ಟೇಶನ್ನಿನಲ್ಲಿಯೇ ಇರಬೇಕೆಂದು ನಿಮಗೊಂದು ನಿಯಮವಿಲ್ಲವೆ?'

ಇನ್ಸಪೆಕ್ಟರ—ಇದ್ದದ್ದು ನಿಜ. ನನಗೆ ಸ್ವಲ್ಪ ಬೇರೆ ಕೆಲಸವಿದ್ದಿತ್ತು.

ಮದನ—ಹಾಗೆ ಕೆಲಸವಿದ್ದರೆ ಮನೆಯಲ್ಲಾದರೂ ಇರಬಾರದಾಗಿತ್ತೇ? ಇರಲಿ. ಈ ಮರಣ ಹೊಂದಿದವನ ಪರಿಚಯವಿರುವುದೇ?

ಇನ್ಸಪೆಕ್ಟರ ಪರಿಚಯವಿಲ್ಲ.

ಮದನ (ಹತ್ತಿರ ನಿಂತವರನ್ನು ಕುರಿತು)--ಯಾರಿಗಾದರೂ ಈ ಮೃತನಾದವನ ಪರಿಚಯವಿದ್ದರೆ ಭಯಪಡದೆ ಮುಂದೆ ಬಂದು ತಿಳಿಸಿರಿ.

ನೆರೆದ ಜನರ ಮಧ್ಯದಲ್ಲಿದ್ದ ಒಬ್ಬ ಸೇವಕನು ಮದನನ ಮಾತಿನಿಂದ ಧೈರ್ಯವನ್ನು ತಾಳಿ ಮದನನ ಹತ್ತಿರ ಬಂದು:-"ನಾನು ಇವರ ಸೇವಕನಾಗಿದ್ದೆನು" ಎಂದು ದುಃಖದಿಂದ ಹೇಳಿದನು.

ಮದನ—ಇವರಿಗೆ ಯಾವ ಊರು! ಏನು ಕೆಲಸ?

ಸೇವಕ—ಈ ಊರಿಗೆ ಸ್ವಲ್ಪ ದೂರದಲ್ಲಿ ಶಿವನಾರಿ ಎಂಬುದೊಂದು ಊರಿದೆ. ಅಲ್ಲಿನ ಜಮೀನ್ದಾರರು ಇವರು. ಉತ್ಸವವನ್ನೋಡಲು ಇಲ್ಲಿಗೆ ಬಂದರು. ನಾನು ಯಾವಾಗಲೂ ಅವರನ್ನು ಬಿಟ್ಟು ಇರತಕ್ಕವನಲ್ಲ. ಕಳೆದ ಸಾಯಂಕಾಲದ ಹೊತ್ತಿನಲ್ಲಿ ಜನರ ಸಂದಣಿಯಲ್ಲಿ ಅವರು ಸ್ವಲ್ಪ ಮುಂದಾಗಿ ಬಿಟ್ಟರು. ಮನೆಯಲ್ಲಿ ಇವರಿಗೆ ತಾಯಿ ಮಾತ್ರ ಇರುವರು.

ಮದನ—ಇಲ್ಲಿ ಇವರಿಗೆ ಶತ್ರುಗಳಾರಾದರೂ ಇರುವರೇ?

ಸೇವಕ—ಇಲ್ಲವೆನ್ನಬಹುದು. ಇವರೀ ಊರಿಗೆ ಬರುವದೇ ವರ್ಷಕ್ಕೊಂದು ಬಾರಿ.

ಮದನ—ಇವರು ಈ ಊರಿಗೆ ಬಂದು ವಾಸವಿದ್ದುದೆಲ್ಲಿ?

ಸೇವಕ—ನಿನ್ನೆ ಮಧ್ಯಾಹ್ನವೇ ಇಲ್ಲಿಗೆ ಬಂದಿದ್ದರಿಂದ ಎಲ್ಲಿಯೂ ನಿಂತಿರಲಿಲ್ಲ.

ಮದನ—ಹಿಂದೆ ಇಲ್ಲಿಗೆ ಬಂದಾಗ ಎಲ್ಲಿ ವಾಸವಿರುತ್ತಿದ್ದರು?

ಸೇವಕ—ಯಾವುದಾದರೂ ಒಂದು ಹೋಟಲಿನಲ್ಲಿ ಇಲ್ಲಿ ಬಂದು

ಹೆಚ್ಚು ದಿನವೂ ನಿಲ್ಲುತ್ತಿರಲಿಲ್ಲ.

ಮದನ—ಇಲ್ಲಿನ ಖರ್ಚಿಗಾಗಿ ಎಷ್ಟು ರೂಪಾಯಿಗಳನ್ನು ತಂದಿದ್ದರು? ನಿನಗೆ ಗೊತ್ತಿರುವದೇ?

ಸೇವಕ—ಇನ್ನೂರು ರೂಪಾಯಿಗಳ ಮೇಲೆ ಇರಬಹುದು. ಅದನ್ನು ಇಲ್ಲಿ ಖರ್ಚು ಮಾಡಲು ತಂದದ್ದಲ್ಲ. ಯಾರೋ ಒಬ್ಬರಿಗೆ ಕೊಡಬೇಕಾಗಿತ್ತು. ಅವರಲ್ಲಿಗೆ ಈ ದಿನ ಬರುವೆನೆಂದು ಹೇಳಿದ್ದರಂತೆ. ಅವರಿನ್ನೂ ಬಂದಿಲ್ಲ.

ಮದನನು ರೂಪಾಯಿಗಳು ಇವೆಯೋ ಇಲ್ಲವೋ ಎಂಬದನ್ನು ತಿಳಿಯಲು ಶವದ ಮೈಮೇಲಿದ್ದ ಕೋಟಿನ ಜೇಬುಗಳನ್ನು ಹುಡುಕಿದನು. ಒಂದು ಇಸ್ಪೀಟ್ ಎಲೆಯ ಕಟ್ಟಲ್ಲದೆ ಇನ್ನಾವುದೂ ದೊರೆಯಲಿಲ್ಲ. ಮದನನು ಇಸ್ಪೀಟಿನ ಕಟ್ಟನ್ನು ಸೇವಕನಿಗೆ ತೋರಿಸಿ, "ಈ ಆಟವು ಇವರಿಗೆ ತಿಳಿಯುವದೇ?" ಎಂದು ಕೇಳಿದನು.

ಸೇವಕನು ಹೇಳಿದನು:—"ಹೌದು."

ಮದನ—ಮೈಮೇಲೆ ಏನಾದರೂ ಆಭರಣಗಳು ಇದ್ದವೇನು?

ಸೇವಕ—ಹೌದು. ಸುಮಾರು ಐನೂರು ರೂಪಾಯಿ ಬೆಲೆಬಾಳುವ ಒಂಟಿಗಳು ಕಿವಿಗಳಲ್ಲಿದ್ದವು. ಅದೂ ಈಗ ಕಾಣುವದಿಲ್ಲ.

ಮದನನು ಇನ್‌ಸ್ಪೆಕ್ಟರರ ಹತ್ತಿರ: "ಉಳಿದ ವಿಚಾರವು ಹಿಂದಿನಿಂದ ನಡೆಯಲಿ. ಶವವನ್ನು ಡಾಕ್ಟರರಿಂದ ಪರೀಕ್ಷೆಯನ್ನು ನಡೆಸಿರಿ. ಮೃತರಾದವರ ಮನೆಗೆ ಸಮಾಚಾರವನ್ನು ತಿಳಿಸಿರಿ" ಎಂದು ನುಡಿದು ಅಲ್ಲಿಂದ ಹೊರಟು ಹೋದನು.

‡ ‡ ‡ ‡ ‡

ಅದೇ ದಿನ ಸಾಯಂಕಾಲ ಐದು ಗಂಟೆಯ ಸಮಯದಲ್ಲಿ ಶ್ರೀಮಂತ ತರುಣನೊಬ್ಬನು ಅಲ್ಲಲ್ಲಿ ಉತ್ಸವಕ್ಕಾಗಿ ಬಂದಿರುವ ತಮಾಷೆಗಳನ್ನು ನೋಡುತ್ತಾ ಕೋಮಲೆಯು ನಡೆದ ಬೀದಿಗೆ ಹೋದನು. ಪೋಲೀಸ್ ಇನ್‌ಸ್ಪೆಕ್ಟರರ ಮನೆಯ ಹತ್ತಿರದಲ್ಲಿ ದೊಡ್ಡ ಅಂಗಡಿಯೊಂದು ಇದ್ದಿತು. ಅದರಲ್ಲಿ ಸಕಲ ವಸ್ತುಗಳೂ ದೊರೆಯುತ್ತಿದ್ದವು. ಅಂಗಡಿಯ ಸೊಬಗು

ಅತ್ಯಂತ ಮನಮೋಹಕವಾಗಿದ್ದಿತು. ಅಂಗಡಿಯನ್ನು ನೋಡಿದೊಡನೆ ಅದನ್ನು ಪ್ರವೇಶಿಸಿ ಸ್ವಲ್ಪ ಹೊತ್ತು ನೋಡದೆ ಹೋಗಲು ಯಾರಿಗೂ ಕಾಲು ಬರುತ್ತಿದ್ದಿಲ್ಲ ಶ್ರೀಮಂತ ತರುಣನು ಆ ಅಂಗಡಿಯ ಅಂದವನ್ನು ನೋಡಿ ಮರುಳಾಗಿ ಅದರ ಹತ್ತಿರ ಹೋದನು. ತರುಣನು ಅಂಗಡಿಯ ಹತ್ತಿರ ಹೋದೊಡನೆಯೇ ಅದರ ಯಜಮಾನನು ಎದ್ದು ಬಂದು ಸಂಭ್ರಮದಿಂದ: 'ಬನ್ನಿ ಸ್ವಾಮಿ' ಎಂದು ನುಡಿದು, ಹತ್ತಿರದ ಕುರ್ಚಿಯೊಂದರಲ್ಲಿ ಕೂರಿಸಿ ಉಪಚರಿಸಿದನು. ತರುಣನನ್ನು ಆ ಯಜಮಾನನು ಪ್ರಶ್ನೆಮಾಡಿದನು: "ಉತ್ಸವನೋಡಲು ಬಂದಿರುವಿರಾ?"

ತರುಣ—ಹೌದು.

ಯಜಮಾನ—ಪ್ರತಿವರ್ಷಕ್ಕಿಂತಲೂ ಈ ವರ್ಷದಲ್ಲಿ ಬಲು ಚೆನ್ನಾಗಿ ಉತ್ಸವವು ನಡೆಯುತ್ತಿದೆ. ನಾಳೆಯಂತೂ ಈ ಉತ್ಸವವನ್ನು ನೋಡಲು ಕಣ್ಣುಗಳೆರಡೂ ಸಾಕಾಗಲಿಕ್ಕಿಲ್ಲ. ಹೇಗೆ? ನಿಮ್ಮ ಮನಸ್ಸಿಗೆ ಉತ್ಸವವು ಒಪ್ಪಿತೇ?

ತರುಣ—ಹೌದು. ಚೆನ್ನಾಗಿದೆ ನಾನೂ ಕೂಡ ಬಹು ಸ್ಥಳಗಳಲ್ಲಿ ಉತ್ಸವಗಳನ್ನು ನೋಡಿರುವೆನು; ಆದರೆ ಇದು ಎಲ್ಲಕ್ಕಿಂತಲೂ ಚನ್ನಾಗಿದೆ.

ಯಜಮಾನ—ಹೌದು. ಇದರಂತೆ ಇನ್ನೆಲ್ಲಿಯೂ ಇಲ್ಲ. ತಮ್ಮ ಊರು ಯಾವದು?

ತರುಣ—ನನಗೆ ಕಜಗಿ ತಾಲೋಕು.

ಯಜಮಾನ—ಓಹೋ! ಆ ತಾಲೋಕು ಇಲ್ಲಿಗೆ ಬಹು ದೂರವಿದೆ. ಅಲ್ಲಿ ತಮ್ಮ ಉದ್ಯೋಗವೇನು?

ತರುಣ—ಬೇರೆ ಉದ್ಯೋಗವೇನೂ ಇಲ್ಲ. ನಾನೊಬ್ಬ ಜಮೀನ್ದಾರ.

ಯಜಮಾನ—ಸರಿ. ಸರಿ. ಸಂತೋಷ, ತಾವು ಇಲ್ಲಿಗೆ ಯಾವಾಗ ಬರೋಣಾಯಿತು?

ತರುಣ—ಈ ದಿನ ಬೆಳಿಗ್ಗೆ ಬಂದೆನು; ಆದರೆ ಈ ಊರಿನಲ್ಲಿ ಉಳಿದು ಕೊಳ್ಳಲು ಸ್ಥಳವೇ ಸರಿಯಾಗಿಲ್ಲ. ಇದೇ ಒಂದು ಈ ಉತ್ಸವಕ್ಕೆ ಕೊರತೆ ಯೆನ್ನಬಹುದು.

ಯಜಮಾನ—ಹೌದು ಸ್ವಾಮಿ! ಸಾಮಾನ್ಯರಾದ ಜನರಿಗೆ ಎಲ್ಲಾದರೂ ಸ್ಥಳವು ಸಿಗುವದು. ತಮ್ಮಂತಹ ಶ್ರೀಮಂತರಿಗೆ ವಾಸವಿರಲು ಸ್ಥಳವು ಅತ್ಯಂತ ಅಪರೂಪವಾಗಿದೆ. ತಮ್ಮಂತಹ ಅತಿಥಿಗಳ ಸತ್ಕಾರಕ್ಕಾಗಿಯೇ ಈ ಬಡವನ ಮನೆಯು ಯಾವಾಗಲೂ ಸಿದ್ಧವಿರುವದು. ತಮಗೆ ಇಲ್ಲಿ ಯಾವದಕ್ಕೂ ಕೊರತೆಯಿಲ್ಲ ಉತ್ಸವಕ್ಕೆ ಬಂದ ಶ್ರೀಮಂತ ಜನರೆಲ್ಲರೂ ಇಲ್ಲಿಗೇ ವಾಸವಿರಲು ಬರುತ್ತಾರೆ. ಈಗಲೂ ಇರುತ್ತಾರೆ. ಅವರ ಪರಿಚಯು ಲಾಭವೂ ಆಗುವದು. ತಾವು ಬೇರೆ ಏನನ್ನೂ ಯೋಚಿಸಬೇಕಾಗಿಲ್ಲ

ತರುಣ—ತಮ್ಮ ಈ ಉಪಕಾರಕ್ಕೆ ನಾನೆಷ್ಟು ಕೃತಜ್ಞತೆಯನ್ನು ತೋರಿಸಿದರೂ ಅದು ಅಲ್ಪವೇ ಸರಿ. ಇದಕ್ಕಾಗಿ ತಮಗೆ ಚಿರಕಾಲ ಋಣಿಯಾಗಿರುವೆನು.

ಕೂಡಲೆ ಆ ಯಜಮಾನನು "ರಘೂ" ಎಂದು ಕರೆದನು. ಒಳಗಿನಿಂದ ಸುಂದರ ವೇಷವನ್ನು ಧರಿಸಿದ್ದ ಪುರುಷನೊಬ್ಬನು ಬಂದು ನಿಂತನು. ಯಜಮಾನನು ಆ ಪುರುಷನ ಹತ್ತಿರ:—"ರಘು, ಇವರು ದೊಡ್ಡ ಜಮೀನದಾರರು. ಇಲ್ಲಿ ವಾಸವಿರಲು ದಯವಿಟ್ಟು ಒಪ್ಪಿರುವರು. ಇವರಿಗೆ ಸರಿಯಾದ ಸ್ಥಳವನ್ನು ತೋರಿಸಿ, ಯಾವ ವಿಷಯದಲ್ಲಿಯೂ ಕೊರತೆಯು ಬಾರದೇ ಇರುವಂತೆ ಉಪಚರಿಸು" ಎಂದು ಹೇಳಿ ತರುಣನನ್ನು ಕುರಿತು:

"ಸ್ವಾಮಿ, ಈತನು ನನ್ನ ಪುತ್ರನು. ನಿಮ್ಮ ಇಚ್ಛಾನುಸಾರವಾಗಿ ಈತನು ನಡೆದುಕೊಳ್ಳುವನು" ಎಂದು ನುಡಿದನು.

ತರುಣನು ಯಜಮಾನನಿಗೆ ಅಭಿವಂದಿಸಿ ರಘುವಿನ ಜೊತೆಗೆ ಹೊರಟನು. ರಘುವು ಆ ತರುಣನನ್ನು ಮಹಡಿಯ ಮೇಲೆ ಕರೆದುಕೊಂಡು ಹೋಗಿ ಅಲ್ಲಿ ಒಂದು ಕೊಠಡಿಯನ್ನು ತೋರಿಸಿ:—"ಇದು ನಿಮಗೆ ಶಯನ ಗೃಹವು ಮನೆಯೆಲ್ಲವೂ ನಿಮ್ಮದೇ ಆಗಿದೆ. ಎಲ್ಲಿ ಹೋಗುವುದಕ್ಕೂ ನಿಮಗಿಲ್ಲಿ ತಡೆಯಿಲ್ಲ. ನಿಮಗೆ ಯಾವುದರಲ್ಲಿ ಅಪೇಕ್ಷೆಯಿದ್ದರೂ ಈ ಸೇವಕನ ಹತ್ತಿರ ತಿಳಿಸಿದೊಡನೆ ಅದನ್ನು ಸಿದ್ಧಪಡಿಸಿ ಕೊಡುವೆನು. ಸ್ವಲ್ಪವೂ ಸಂಕೋಚಪಡದೆ ತಿಳಿಸಬೇಕು" ಎಂದು ಹೇಳಿದನು.

ತರುಣನು ರಾಜರ ಮನೆಯಂತಿದ್ದ ಆ ಮನೆಯನ್ನು ನೋಡಿ

ಮೊದಲೇ ಸಂತುಷ್ಟನಾಗಿದ್ದನು. ತನಗಿರಲು ತೋರಿಸಿದ ಕೊಠಡಿಯಂತೂ ಇನ್ನೂ ಮನೋಹರವಾಗಿತ್ತು. ರಘುವಿನ ಉಪಚಾರವು ಇನ್ನೂ ಅತಿಶಯವಾಗಿತ್ತು. ಆನಂದಿತನಾದ ತರುಣನು ಹೇಳಿದನು:—"ನಾನು ನಿನ್ನ ಈ ಉಪಚಾರದಿಂದ ತುಂಬಾ ಹರ್ಷಿತನಾದೆನು. ಶ್ರೀಮಂತರಲ್ಲಿ ಇಲ್ಲಿ ಯಾರ್ಯಾರು ಇರುವರು? ಅವರ ಪರಿಚಯವು ಈಗ ಆಗಬಹುದೆ?

ರಘು—"ಓಹೋ! ಆಗಬಹುದು. ಈಗಲೇ ಹೋಗೋಣ" ಎಂದು ನುಡಿದು ಉಪ್ಪರಿಗೆಯ ಮಧ್ಯದಲ್ಲಿರುವ ಒಂದು ದೊಡ್ಡ ಮಹಾಲಿಗೆ ಹೊರಟನು. ತರುಣನೂ ರಘುವನ್ನು ಹಿಂಬಾಲಿಸಿದನು.

ಅಲ್ಲಿ ನಾಲ್ಕಾರು ಜನರು ಸರಸವಾಗಿ ಇಸ್ಪೀಟು ಆಟವನ್ನಾಡುತ್ತಿದ್ದರು. ರಘುವು ತರುಣನಿಗೆ ಅವರನ್ನು ತೋರಿಸಿದನು. ಅಲ್ಲಿ ಕುಳಿತುಕೊಂಡಿರುವ ಗೃಹಸ್ಥರು ತರುಣನನ್ನು ಕಂಡು ಹರ್ಷಿತರಾಗಿ: "ಬನ್ನಿ ಸ್ವಾಮಿ, ಆಟವು ಬಲು ಚನ್ನಾಗಿದೆ. ಹೇಗಿದೆ ನೋಡಿ! ಕುಳಿತುಕೊಳ್ಳಿ" ಎಂದು ಹೇಳಿದರು. ಕುಳಿತಿರುವವರಲ್ಲಿ ತರುಣನ ಪರಿಚಯವು ಯಾರಿಗೂ ಇರದಿದ್ದರೂ ತರುಣನಿಗೆ ಮಾತ್ರ ಅವರ ಮಧ್ಯದಲ್ಲಿ ಕುಳಿತಿದ್ದ ಪೋಲೀಸ್ ಇನ್‌ಸ್ಪೆಕ್ಟರರ ಗುರತಿದ್ದಿತು. ಅದನ್ನು ತರುಣನು ಹೊರಪಡಿಸದೆ ರಘುವಿನೊಡನೆ ಅವರ ಹತ್ತಿರ ಹೋಗಿ ಕುಳಿತು ತಾನೂ ಆಟವಾಡಲು ಆರಂಭಿಸಿದನು. ಸ್ವಲ್ಪ ಹೊತ್ತು ಆಟವಾಡಿದ ಮೇಲೆ ಕುಳಿತ ಜನರಲ್ಲಿ ಒಬ್ಬನು "ಇದೇನು ಹಾಳು ಆಟ! ನನಗಿದು ಸೇರುವದಿಲ್ಲ" ಎಂದನು. ಇನ್ನೊಬ್ಬನು: "ಹಣವಿಟ್ಟು ಆಡುವದೇ ಹೊರತು ಇದು ನನಗೂ ರುಚಿಸುವದಿಲ್ಲ" ಎಂದು ನುಡಿದನು. ಅದನ್ನು ಆಲಿಸಿ ತರುಣನು ರಘುವನ್ನು ಕುರಿತು: "ಹೌದು ರಘು, ಇವರು ಹೇಳಿದುದಕ್ಕೆ ನಿನ್ನ ಒಪ್ಪಿಗೆ ಇರುವುದಷ್ಟೆ?" ಎಂದು ಹೇಳಿದನು. ರಘುವು ಸಂತೋಷದಿಂದ: 'ಅದು ನಿಜ'ವೆಂದು ಹೇಳಿದನು. ಮೆಂಬರರ ಬಹುಮತದಿಂದ ಪ್ಯಾಸಾಗಿ ರೂಪಾಯಿಗಳನ್ನಿಟ್ಟು ಆಡಲು ಆರಂಭವಾಯಿತು. ತರುಣನು ನೂರಾರು ರೂಪಾಯಿಗಳನ್ನು ಆಟದಲ್ಲಿ ತೆತ್ತರೂ ಸ್ವಲ್ಪವೂ ಯೋಚಿಸದೆ ಅತ್ಯುತ್ಸಾಹದಿಂದ ಜೇಬುಗಳಿಂದ ನೋಟುಗಳನ್ನು ತೆಗೆದು ಇಟ್ಟು ಆಡುತ್ತಿದ್ದುದನ್ನು ನೋಡಿ ಉಳಿದವರು ಆಶ್ಚರ್ಯಪಡುತ್ತಿದ್ದರು. ಆಟದಲ್ಲಿ

ತರುಣನ ಹೆಚ್ಚು-ಕಡಿಮೆ ಐನೂರು ರೂಪಾಯಿಗಳು ಕ್ಷಣಮಾತ್ರದಲ್ಲಿ ಮಾಯವಾದವು. ಆದರೂ ಜೇಬಿನಿಂದ ನೋಟುಗಳು ಹೊರಬೀಳುತ್ತಿದ್ದವು. ಆಗ ರಾತ್ರಿ ೮ ಗಂಟೆಯ ಸಮಯವಾಗಿತ್ತು. ರಘುವು ಆಟವನ್ನು ನಿಲ್ಲಿಸಿ ತರುಣನನ್ನು ಕರೆದುಕೊಂಡು ಹಿಂದೆ ತೋರಿಸಿದ ಕೊಠಡಿಗೆ ಹೋಗಿ "ಉಪಾಹಾರಕ್ಕೆ ಈಗ ಬರುವದು. ತಾವು ಇಲ್ಲಿಯೇ ವಿಶ್ರಮಿಸಿರಿ. ನಾನೀಗ ಬರುವೆನು"ಎಂದು ಹೇಳಿ ಹೊರಟು ಹೋದನು. ತರುಣನು ಮುಂದೆ ಆಗುವುದನ್ನು ನೋಡಲು ಸಿದ್ಧನಾಗಿ ನಿಂತಿದ್ದನು. ನವತರುಣಿಯೊಬ್ಬಳು ಕೈಯಲ್ಲಿ ಚಿನ್ನದ ತಾಟನಲ್ಲಿ ಹಣ್ಣು ಹಂಪಲ ಮೊದಲಾದುದನ್ನು ಇಟ್ಟುಕೊಂಡು ಒಯ್ಯಾರದಿಂದ ತನ್ನ ಕೋಣೆಯ ಕಡೆಗೆ ಬರುತ್ತಿದ್ದುದನ್ನು ತರುಣನು ನೋಡಿ, ತಾನು ಆಕೆಯನ್ನು ನೋಡದೆ ಇರುವವನಂತೆ ನಟಿಸಲು ಅಲ್ಲಿದ್ದ ಒಂದು ಪತ್ರಿಕೆಯನ್ನು ಓದುತ್ತಾ ಕುಳಿತನು. ಮಂದಗಮನದಿಂದ ಆ ಹೆಂಗಸು ಕೋಣೆಯೊಳಗೆ ಪ್ರವೇಶಿಸಿ, ಕದವನ್ನು ಮುಚ್ಚಿ, ಕೈಯಲ್ಲಿ ಹಿಡಿದಿದ್ದ ಚಿನ್ನದ ತಾಟನ್ನು ತರುಣನ ಎದುರಿಗಿದ್ದ ಮೇಜಿನ ಮೇಲೆ ಇಟ್ಟಳು. ಆಗಲೂ ತರುಣನು ಕತ್ತೆತ್ತಿ ನೋಡಲಿಲ್ಲ; ಆದರೆ ಆ ಹೆಂಗಸು ಸುಮ್ಮನಿರಲಿಲ್ಲ. ಮೆಲ್ಲ ಮೆಲ್ಲನೆ ತರುಣನ ಕೈಯಲ್ಲಿದ್ದ ಪತ್ರಿಕೆಯನ್ನು ಎಳೆದುಕೊಂಡಳು. ತರುಣನು ಪತ್ರಿಕೆಯನ್ನು ಬಿಟ್ಟು ಸುಮ್ಮನೆ ನೋಡುತಲಿದ್ದನು. ಹೆಂಗಸು ಮುಗುಳು ನಗೆಯನ್ನು ಸೂಚಿಸುತ್ತಾ ಹೇಳಿದಳು: "ನಾನು ಬರಲು ವಿಲಂಬವಾಯಿತೆಂದು ಪ್ರಿಯರಿಗೆ ಸ್ವಲ್ಪ ಕೋಪಬಂದಿತೇ?"

ತರುಣ—ಹೌದು. ಉಪಾಹಾರವನ್ನು ತಂದು ಇಟ್ಟಾಯಿತಷ್ಟೇ? ನೀನಿನ್ನು ಹೋಗು. ನಿನಗಿಲ್ಲಿ ಕೆಲಸವಿಲ್ಲ.

ಹೆಂಗಸು—ಕ್ಷಮಿಸಿರಿ. ಇಷ್ಟು ಕೋಪವನ್ನು ಈ ಅಬಲೆಯಲ್ಲಿ ತೋರಿಸಬೇಡಿ, ಎಂದು ನುಡಿದು, ತರುಣನ ಕೈಯನ್ನು ಹಿಡಿದು ಸಮಾಧಾನವನ್ನು ಹೇಳಲು ಮುಂದಾದಳು.

ತರುಣ—ಛೀ! ನಿಮ್ಮಲ್ಲಿ ಅತಿಥಿ ಸತ್ಕಾರವು ಹೀಗೆಯೇ ಏನು?

ಹೆಂಗಸು—ಬೇಡ. ನೀವೀ ಅಬಲೆಯಲ್ಲಿ ಈ ರೀತಿ ನಿರ್ದಯರಾಗಬೇಡಿರಿ. ಬೇಡಿಕೊಳ್ಳುವೆನು. ಕೃಪೆ ಮಾಡಿರಿ.

ತರುಣ—ಸಾಕು. ನಿನ್ನ ವ್ಯವಹಾರವು ನನಗೆ ಬೇಕಾಗಿಲ್ಲ. ನಾನು ಇಂತಹ ವ್ಯವಹಾರವನ್ನು ಇಚ್ಛಿಸುವದಿಲ್ಲ. ನೀನು ಸುಮ್ಮನೆ ಹಿಂದಿರುಗು, ಎಂದು ನುಡಿದು ತರುಣನು ಎದ್ದು ನಿಂತನು. ತರುಣನು ತನ್ನನ್ನು ತಿರಸ್ಕರಿಸಿ ಎದ್ದು ನಿಂತಿರುವದನ್ನು ನೋಡಿ ಆ ಹೆಂಗಸು ಥಟ್ಟನೆ ಮುಂದುವರಿದು ತರುಣನನ್ನು ಬಿಗಿಯಾಗಿ ತಬ್ಬಿ ಆಲಂಗಿಸಿದಳು. ಹೆಂಗಸಿನ ಈ ಬಲಾತ್ಕಾರದ ವರ್ತನೆಯಿಂದ ತರುಣನ ಕ್ರೋಧವು ನೆತ್ತಿಗೇರಿತು. ಹೆಂಗಸಿನ ಹಿಡಿತವು ಬಲವಾಗಿ ಇದ್ದುದನ್ನು ನೋಡಿ ಹೆಂಗಸಿನ ಬೆನ್ನಿನ ಮೇಲೆ ಎರಡೂ ಕೈಗಳಿಂದ ಬಲವಾಗಿ ಗುದ್ದಿದನು. ತರುಣನ ಪೆಟ್ಟು ಬಲವಾದುದರಿಂದ ಹೆಂಗಸು ತನ್ನ ಹಿಡಿತವನ್ನು ಬಿಟ್ಟು ನಿಂತಳು. ಒಡನೆ ತರುಣನು: "ಛೀ ಕತ್ತೆ! ದೂರ ಹೋಗು" ಎಂದು ನುಡಿಯುತ್ತಾ ಒಂದು ಬಾರಿ ಬಲವಾಗಿ ಒದ್ದುಬಿಟ್ಟನು. ಹೆಂಗಸು ಒದೆಯನ್ನು ತಾಳಲಾರದೆ ನೆಲಕ್ಕೆ ಉರುಳಿದಳು. ಹೆಂಗಸು ಮೇಲಕ್ಕೆ ಏಳದಂತೆ ತರುಣನು ಮುಂದೆ ಬಂದು ಪಿಸ್ತೂಲನ್ನು ತೆಗೆದು ಆಕೆಯ ಮುಖಕ್ಕೆ ಹಿಡಿದು, ಗರ್ಜಿಸಿ ಹೇಳಿದನು:

"ಹೆಮ್ಮಾರಿ! ಲಜ್ಜೆಯಿಲ್ಲದ ಮೂಳಿ! ಅತ್ತಿತ್ತ ಅಲುಗಾಡಿದರೆ ಇದರಿಂದ ಸುಟ್ಟು ಬಿಡುವೆನು. ಸತ್ಯವನ್ನು ಹೇಳು. ಸುಳ್ಳನ್ನು ನುಡಿದರೆ ನಿನ್ನ ಪ್ರಾಣದ ಆಶೆಯು ತೀರಿತೆಂದು ತಿಳಿ. ನಿಮ್ಮೆಲ್ಲರ ಅನ್ಯಾಯವು ಹೊರಬಿದ್ದಿದೆ. ನಾನು ಯಾರೆಂದು ತಿಳಿದಿರುವಿ? ಮೋಹನನೆಂಬುವದನ್ನು ಕೇಳಿ ಬಲ್ಲೆಯಾ? ಅವನೇ ನಾನು. ನನ್ನ ಹತ್ತಿರ ಮರೆಮಾಜದೆ ಎಲ್ಲವನ್ನೂ ನಿಜವಾಗಿ ಹೇಳು. ಸತ್ಯವನ್ನು ನಿಜವಾಗಿ ಹೇಳು. ಸತ್ಯವನ್ನು ನುಡಿದಿಯಾದರೆ ನಿನ್ನ ಶಿಕ್ಷೆಯು ಅಲ್ಪವಾದೀತು. ಇಲ್ಲದೆ ಹೋದರೆ ನಿಮ್ಮೆಲ್ಲರಿಗೂ ಯಮಯಾತನೆಯಾಗಿ ಮರಣಶಿಕ್ಷೆಯುಂಟಾದೀತು. ಜಾಗ್ರತೆ. ನೀನು ಇಲ್ಲಿಗೆ ಯಾರ ಆಜ್ಞೆಯಿಂದ ಬಂದಿರುವಿ?

ಹೆಂಗಸು—ರಘುವಿನ ಆಜ್ಞೆಯಿಂದ.

ಮೋಹನ—ನನ್ನ ಒಪ್ಪಿಗೆಯಿಲ್ಲದೆ ಅವನೇಕೆ ಇಷ್ಟು ಮುಂದುವರಿದು ಕೆಲಸವನ್ನು ಮಾಡಿದನು?

ಹೆಂಗಸು—ಇದು ನಿತ್ಯದ ಸಂಕೇತ. ಶ್ರೀಮಂತರಲ್ಲಿ ಯಾರು ಬಂದ

ರೂ ಇದೇ ಸತ್ಕಾರ.

ಮೋಹನ— ನಾನು ನಿನ್ನೊಡನೆ ಸೇರಿದರೆ ಏನಾಗುತ್ತಿತ್ತು?

ಹೆಂಗಸು—ವಿಷಭರಿತವಾದ ಈ ಹಣ್ಣುಗಳಿಂದಲಾಗಲಿ, ವೀಳ್ಯದ ವಿಷ ದಿಂದಾಗಲಿ ಮರಣವು ಉಂಟಾಗುತ್ತಿತು.

ಮೋಹನ— ರಘುವೂ, ಅವನ ತಂದೆಯೂ ನಿನಗೇನಾಗಬೇಕು?

ಹೆಂಗಸು—ಸಂಬಂಧವೇನೂ ಇಲ್ಲ.

ಮೋಹನ—ಯಾವ ವಿಧವಾದ ಸಂಬಂಧವೂ ಇಲ್ಲವೇ?

ಹೆಂಗಸು—ಸರಿಯಾದ ಸಂಬಂಧವಿಲ್ಲದಿದ್ದರೂ ಬೇರೆ ವಿಧದ ಸಂಬಂಧ ವಿದೆ! ಕುಳಿತುಕೊಂಡು ಹೇಳಲು ಒಪ್ಪಿಗೆಯು ದೊರೆತರೆ ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು.

ಮೋಹನ—ಆಗಲಿ. ಕುಳಿತುಕೊಂಡು ಹೇಳು.

ಆ ಹೆಂಗಸು ಮೋಹನನ ಆಜ್ಞೆಯಿಂದ ಕುಳಿತು ತನ್ನ ಪೂರ್ವವೃತ್ತ ವನ್ನು ಹೇಳತೊಡಗಿದಳು: "ನಾನೊಬ್ಬ ಶ್ರೀಮಂತರ ಹೆಂಡತಿಯಾಗಿದ್ದು ಈಗ ಈ ಗತಿಯಲ್ಲಿ ಇರುತ್ತಿರುವೆನು. ನಮ್ಮ ಗ್ರಾಮದಲ್ಲಿಯೇ ರಘುವೂ ಆತನ ತಂದೆಯೂ ಇದ್ದರು. ಅವರಿಬ್ಬರೂ ನನ್ನನ್ನು ಉಬ್ಬಿಸಿ ಮೋಸದಿಂದ ನನ್ನ ಪತಿಯನ್ನು ಕೊಂದು ನಮ್ಮ ಸರ್ವಸ್ವವನ್ನೂ ತಮ್ಮ ವಶಮಾಡಿಕೊಂಡು ಇಲ್ಲಿಗೆ ಬಂದು ನಿಂತರು. ಇಲ್ಲಿ ರಘುವು ನನ್ನನ್ನು ವೇಶ್ಯಾಸ್ತ್ರೀಯಂತೆ ಇಟ್ಟು ಕೊಂಡಿದ್ದನು. ಅವನ ಈಗಿನ ಅನ್ಯಾಯಕ್ಕೆ ಸಹಾಯಕರಾದ ನಾಲ್ಕಾರು ಜನರಿಗೂ ನಾನೇ ಭೋಗಿನಿಯಾಗಿದ್ದೆನು ಪ್ರತಿವರ್ಷವೂ ನಡೆಯತಕ್ಕ ಈ ಉತ್ಸವದಲ್ಲಿ ಶ್ರೀಮಂತ ಜನರನ್ನು ನೂರಾರು ಉಪಾಯಗಳಿಂದ ಇವರು ಕರೆತಂದು ನನ್ನ ಬಲೆಯೊಳಗೆ ಸಿಕ್ಕಿಸಿ ಕೊಲ್ಲಿಸುತ್ತಿದ್ದರು. ನಿನ್ನೆ ಮರಣ ಹೊಂದಿದ ಶ್ರೀಮಂತನೂ ನನ್ನ ಬಲೆಯೊಳಗೆ ಬಿದ್ದಿದ್ದವನೇ. ಇಲ್ಲಿನ ಪೋಲೀಸ ಇನ್ಸಪೆಕ್ಟರರು ಇವರಿಬ್ಬರಿಗೆ ತುಂಬಾ ಸಹಾಯಕರು.

ಮೋಹನ—ಸಾಕು. ನಿನ್ನ ಕಥೆಯು ನಿಲ್ಲಲಿ. ಇಷ್ಟು ಅನ್ಯಾಯ ಗಳಿಗೂ ನೀನೊಬ್ಬಳೇ ಕಾರಣಳಿರುವಿ. ನಿನ್ನಿಂದಲೇ ನೂರಾರು ಜನರು ಮರಣಹೊಂದಿರುವರು. ನೀನು ಪಾಪದ ತವರುಮನೆಯಾಗಿರುವಿ. ನಿನ್ನನ್ನು

ಕತ್ತಿಯಿಂದ ಕಡಿದು ತುಂಡು-ತುಂಡು ಮಾಡಿ ನಾಯಿ-ನರಿಗಳಿಂದ ತಿನ್ನಿಸಿದರೂ ಅದು ಸ್ವಲ್ಪವೇ ಸರಿ. ನಿನ್ನ ಜನ್ಮಕ್ಕೆ ಧಿಕ್ಕಾರವಿರಲಿ. ನಿನ್ನೊಬ್ಬಳ ಜನ್ಮದಿಂದ ಈ ಭೂಮಿಯಲ್ಲಿ ಎಷ್ಟು ಜನರು ಮೃತ್ಯುವಿನ ತುತ್ತಾದರು? ಇನ್ನೂ ನಿನ್ನ ಪಾಪಕರ್ಮಕ್ಕಾಗಿ ಪಶ್ಚಾತ್ತಾಪವಾಗಲಿಲ್ಲವೇ? ನಿನ್ನ ಜನ್ಮವನ್ನು ಸುಡು ನಿನ್ನ ಈ ಪಾಪಕ್ಕೆ ನೈಯೆಲ್ಲಾ ಹುಳುವಾಗಿ ಮರಣ ಹೊಂದುವಿ. ಪಾಪಿನಿಯಾದ ನಿನ್ನನ್ನು "ಯಾವಾಗ ಭಯಂಕರ ನರಕಗಳಲ್ಲಿ ಕೆಡವಿ ಭಲ್ಲೆಗಳಿಂದ ತಿವಿದೇವೊ?" ಎಂಬ ಆಶೆಯಿಂದ ಯಮಕಿಂಕರರು ನಿನ್ನ ತಲೆಯ ಮೇಲೆ ನಿಂತು ಕಾದಿರುವರು ಛೀ! ನಿನ್ನ ಈ ಹಾಳು ಜನ್ಮಕ್ಕೆ ಶತಶಃ ಧಿಕ್ಕಾರವಿರಲಿ.

ಮೋಹನನ ಈ ಹೃದಯಭೇದಕವಾದ ವಾಗ್ಬಾಣಗಳು ಆ ಹೆಂಗಸಿನ ಹೃದಯದಲ್ಲಿ ನಟ್ಟು ಹಿಂದಿನ ಪಾಪಕರ್ಮಗಳ ಸ್ಮರಣೆಯುಂಟಾಗಿ ಅವಳು ಗಡಗಡನೆ ನಡುಗಿದಳು. ಹಿಂದೆ ತನ್ನಿಂದ ಮರಣಹೊಂದಿದ ಮನುಷ್ಯರು ಎದುರಿನಲ್ಲಿ ನಿಂತು ತಮ್ಮ ಭಯಂಕರವಾದ ಆಕಾರದಿಂದ ಹೆದರಿಸುತ್ತಿದ್ದಂತೆ ಭಾಸವಾಗಿ ಭಯದಿಂದ ಕಣ್ಣು ಮುಚ್ಚಿದಳು. ಮೋಹನನು ಆಕೆಯ ಸ್ಥಿತಿಯನ್ನು ನೋಡಿ ತಲೆಯ ಮೇಲೆ ಸ್ವಲ್ಪ ನೀರು ಪ್ರೋಕ್ಷಿಸಿದನು. ಹೆಂಗಸು ಕಣ್ಣುಗಳನ್ನು ಬಿಟ್ಟು ಮೋಹನನ ಕಾಲ ಮೇಲೆ ಬಿದ್ದು ಕಣ್ಣೀರಿನ ಧಾರೆಯಿಂದ ಆತನ ಪಾದವನ್ನು ತೊಳೆದಳು. ಮೋಹನನು ಹೇಳಿದನು:

ಆಗ 'ಏಳು. ಸ್ವಲ್ಪ ಸ್ಥೈರಿಸಿಕೋ.'

ಹೆಂಗಸು—ನನ್ನ ಪಾಪಕ್ಕೆ ಪ್ರಾಯಶ್ಚಿತ್ತವಿರುವದಾದರೆ ಏಳುವೆನು. ಅದಿಲ್ಲದಿದ್ದರೆ ಕೈಯಲಿದ್ದ ಪಿಸ್ತೂಲಿನಿಂದ ನನ್ನನ್ನು ಸುಟ್ಟು ನೀನು ಹೊರಟು ಹೋಗು ನಿನಗದು ಸಾಧ್ಯವಿಲ್ಲದೆ ಇದ್ದಲ್ಲಿ ನಿನ್ನ ಪಿಸ್ತೂಲನ್ನಾದರೂ ಕೊಡು. ನಾನೇ ಹೊಡೆದುಕೊಂಡು ಸಾಯುವೆನು. ನನಗೆ ಇನ್ನು ಈ ಭೂಮಿಯ ಮೇಲೆ ಇರಲು ಇಷ್ಟವಿಲ್ಲ.

ಮೋಹನ—ಏಳು. ಪ್ರಾಯಶ್ಚಿತ್ತವಿದೆ?

ಹೆಂಗಸು ಎದ್ದು ನಿಂತು 'ಏನು ಪ್ರಾಯಶ್ಚಿತ್ತ'ವೆಂದು ಕೇಳಿದಳು.

ಮೋಹನ—ಅದನ್ನು ಈಗ ತಿಳಿಸಲು ಅವಕಾಶವಿಲ್ಲ.

ಹೆಂಗಸು—ಹಾಗಾದರೆ ನನ್ನ ಗತಿ ಏನು?

ಮೋಹನ—ಮೊದಲು ಈ ದುಷ್ಟರನ್ನು ಹಿಡಿದು ಶಿಕ್ಷಿಸಿ, ಅನಂತರ ತಿಳಿಸುವೆನು. ನಾನು ಈಗ ಇಲ್ಲಿಂದ ಹೊರಟು ಹೋಗಿ ಸ್ವಲ್ಪ ಹೊತ್ತಿನೊಳಗೆ ತಿರುಗಿ ಬರುವೆನು. ನಿನ್ನನ್ನು ಯಾರುದರೂ ಕೇಳಿದರೆ "ನನ್ನ ಸೌಂದರ್ಯಕ್ಕೆ ಮರುಳಾಗಿ ಇನ್ನೂ ಮಿತ್ರನೊಬ್ಬನಿಂದ ಸ್ವಲ್ಪ ಹಣವನ್ನು ತರುವುದಕ್ಕೆ ಹೋಗಿರುವನು" ಎಂದು ಸಮಾಧಾನವನ್ನು ಹೇಳು. ಈಗ ಇಲ್ಲಿ ಇರುವವರನ್ನು ಹೊರಗೆ ಹೋಗದಂತೆ ನೋಡುತ್ತಿರು, ಎಂದು ಹೇಳಿ ಆ ಹೆಂಗಸಿನೊಡನೆ ಮಹಡಿಯಿಂದ ಕೆಳಗಿಳಿದು ಆಕೆಯನ್ನು ಅಲ್ಲಿ ನಿಲ್ಲಲು ಹೇಳಿ ವೇಗವಾಗಿ ಪೋಲೀಸ್ ಸ್ಟೇಷನ್ನಿಗೆ ಓಡಿದನು. ಆಗ ರಾತ್ರಿ ಒಂಬತ್ತೂವರೆ ಗಂಟೆಯಾಗಿತ್ತು. ಮೋಹನನು ಪೋಲೀಸ ಸ್ಟೇಷನ್ನಿನ ಬಾಗಿಲಿಗೆ ಹೋಗುವ ಕಾಲಕ್ಕೆ ಸರಿಯಾಗಿ ಪೋಲೀಸ್ ಕಮಿಷನ್ನರೂ ಸುಪರಿಂಟೆಂಡೆಂಟರೂ ಮೋಟಾರಿನಲ್ಲಿ ಅಲ್ಲಿಗೆ ಬಂದು ಮೋಟಾರಿನಿಂದ ಕೆಳಗಿಳಿಯುತ್ತಿದ್ದರು. ಮೋಹನನು ಕಮಿಷನರ ಎದುರಿಗೆ ಬಂದು ವ್ಹಿಜಿಟಿಂಗ ಕಾರ್ಡೊಂದನ್ನು ಅವರ ಕೈಗಿತ್ತನು. ಕಮಿಷನರು ಕಾರ್ಡನ್ನು ನೋಡಿ ಆನಂದದಿಂದ: "ಹಾ, ಮೋಹನ" ಎಂದು ನುಡಿದು ಮೋಹನನ ಕೈ ಕುಲಿಕಿಸಿ ಹೇಳಿದರು:—"ನೀವೂ ಇಲ್ಲಿಗೆ ಬಂದಿರುವಿರಾ! ಮದನನು ಮಾತ್ರ ಇಲ್ಲಿಗೆ ಬಂದಿದ್ದನೆಂದು ನನಗೆ ವರ್ತಮಾನವಿತ್ತು. ದೊಡ್ಡ ಶ್ರೀಮಂತನ ಕೊಲೆಯಾದ ಮೇಲೆ ನಾವಿಲ್ಲಿಗೆ ಬರದೆ ಇರುವುದು ಯೋಗ್ಯವಲ್ಲವೆಂದು ತಿಳಿದು ಇವರೊಡನೆ ಈಗ ತಾನೇ ಬಂದು ಮೋಟಾರಿನಿಂದ ಇಳಿಯುತ್ತಿದ್ದೆವು. ಕೊಲೆಯ ವಿಚಾರವು ಏನಾಗಿದೆ?"

ಮೋಹನ—ಕೆಲಸವೆಲ್ಲವೂ ನೆರವೇರಿದೆ. ಸ್ವಲ್ಪ ಮಾತ್ರ ಬಾಕಿ ಇದೆ. ಸಮಯಕ್ಕೆ ಸರಿಯಾಗಿ ನೀವಿಬ್ಬರೂ ಬಂದಿರುವುದು ಅನುಕೂಲವಾಯಿತು. ಉಳಿದ ಸಂಗತಿಯನ್ನು ಹಿಂದಿನಿಂದ ಹೇಳುವೆನು. ಇಪ್ಪತ್ತು ಜನ ಪೋಲೀಸರೊಂದಿಗೆ ಒಡನೆ ಇಲ್ಲಿಂದ ಹೊರಡಬೇಕು. ನೀವೂ ಬರಬೇಕು.

ಕಮಿಷನ್ನರು ಮೋಹನನ ಸಕಲ ವಿಚಾರವನ್ನೂ ಅರಿತವರಾದುದರಿಂದ ಮುಂದೆ ಯಾವುದನ್ನೂ ವಿಚಾರಿಸದೆ ಪೋಲೀಸನೊಬ್ಬನನ್ನು ಕರೆದು,

"ಎಲ್ಲಿ ನಿಮ್ಮ ಇನ್ಸಪೆಕ್ಟರರು?" ಎಂದು ಗರ್ಜಿಸಿದರು. ಅಕಸ್ಮಾತ್ತಾಗಿ ಹೀಗೆ ಕಮಿಶನರು ಬಂದಿದ್ದರಿಂದ ಪೋಲೀಸರೆಲ್ಲರೂ ಗಾಬರಿಯಾಗಿದ್ದರು. ಕಮಿಶನರು ಪ್ರಶ್ನೆಮಾಡಿದ ಪೋಲೀಸನು ಭೀತನಾಗಿ, "ಇನ್ಸಪೆಕ್ಟರರು ಈಗ ಇಲ್ಲಿ ಇಲ್ಲ" ಎಂದು ನುಡಿದನು. ಕಮಿಶನರು ಕ್ರೋಧದಿಂದ ಸಂತಪ್ತರಾಗಿ, "ಛೀ. ಏನು ಬೊಗಳುತ್ತಿರುವಿ. ರಾತ್ರಿಕಾಲದಲ್ಲಿ ಅವರಿಲ್ಲಿ ಇರಲು ರೂಲು ಇಲ್ಲವೇ? ಇರಲಿ. ನಿಮ್ಮೆಲ್ಲರನ್ನೂ ಅರಿಯುವೆನು. ಈ ಕ್ಷಣ ಇಪ್ಪತ್ತು ಜನ ಪೋಲೀಸರು ಸಶಸ್ತ್ರರಾಗಿ ಬೇಡಿಗಳೊಂದಿಗೆ ಸಿದ್ಧರಾಗಿ ಬನ್ನಿರಿ" ಎಂದು ಗರ್ಜಿಸಿ ಮಾತನಾಡಿದರು. ಗಡಗಡನೆ ನಡುಗುತಲಿದ್ದ ಪೋಲೀಸರು ವಿಲಂಬಮಾಡದೆ ಒಡನೆ ಸಿದ್ಧರಾದರು. ಎಲ್ಲರೂ ಮೋಹನನನ್ನು ಅನುಸರಿಸಿ ರಘುವಿನ ಮನೆಗೆ ಹೋದರು. ಸ್ವಲ್ಪವೂ ಗದ್ದಲವಿಲ್ಲದೆ ರಘುವೊಬ್ಬನನ್ನು ಬಿಟ್ಟು ಉಳಿದ ಮನೆಯ ಜನರೆಲ್ಲರನ್ನೂ ಹಿಡಿದರು. ರಘುವೊಬ್ಬನು ಮಾತ್ರ ಆತನ ಒಳ್ಳೇ ಅದೃಷ್ಟದಿಂದಲೋ, ಅಥವಾ ಕೆಟ್ಟ ಅದೃಷ್ಟದಿಂದಲೋ ಮೋಹನನು ಪೋಲೀಸರೊಡನೆ ಬರುವದಕ್ಕಿಂತ ಮುಂಚೆ ಯಾವುದೋ ಒಂದು ಕಾರ್ಯದಿಂದ ಮನೆಯಿಂದ ಹೊರಗೆ ಹೋಗಿದ್ದನು. ತಿರುಗಿ ಬರುವಾಗ ಮನೆಯ ಜನರೆಲ್ಲರೂ ಹಿಡಿಯಲ್ಪಟ್ಟು ಮನೆಯ ಹತ್ತಿರ ಜನರ ಗಲಭೆಯು ವಿಶೇಷವಾಗಿದ್ದುದನ್ನು ನೋಡಿ, ಎದುರಿಗೆ ಬರದೆ ಹಿಂದಿನಿಂದ ನಡೆದ ವಿಷಯವನ್ನು ತಿಳಿದು ಪರಾರಿಯಾದನು.

ಇತ್ತ ಹಿಡಿಯಲ್ಪಟ್ಟ ಜನರು ಜೈಲಿಗೆ ಒಯ್ಯಲ್ಪಟ್ಟರು. ಹಿಂದೆ ಪರಿಚಿತಳಾದ ಹೆಂಗಸು ಮಾತ್ರ ಮೋಹನನ ಇಷ್ಟದಂತೆ ಬಿಡಲ್ಪಟ್ಟು ಆಕೆಯು ರಘುವಿನ ಸರ್ವಸ್ವವನ್ನು ಸ್ವಾಧೀನಪಡಿಸಿಕೊಂಡಳು.

ಆಕೆಯ ಮುಂದಿನ ಸಮಾಚಾರವು ಮುಂದಿನ ಗುಚ್ಛದಲ್ಲಿ ಅಡಗಿದೆ.



## ಏಕಾದಶ ಗುಚ್ಛ.

ಮೋಹನನು ಕೆಲವು ದಿನಗಳಲ್ಲಿಯೇ ಕುಬ್ಜಾನದಿಯ ತೀರದಲ್ಲಿ ನಿರ್ಜನವಾದ ಒಂದು ಪ್ರದೇಶವನ್ನು ಹುಡುಕಿ, ಅದನ್ನು ಸರಿಗೊಳಿಸಿ, ಅಲ್ಲಿ ಮಾಧವ ದೇವಾಲಯವೊಂದನ್ನು ನಿರ್ಮಿಸಿದನು. ದೇವಾಲಯದ ರಕ್ಷಣೆಗೂ, ಕೆಲಸಕ್ಕೂ, ದಕ್ಷರಾಗಿಯೂ, ವಿಶ್ವಾಸಾರ್ಹರಾಗಿಯೂ ಇರುವ ಜನರು ನೇಮಿಸಲ್ಪಟ್ಟರು. ರಘುವಿನ ನಿರ್ಬಂಧದಲ್ಲಿದ್ದ ಹೆಂಗಸೇ ಈ ದೇವಾಲಯದ ಪ್ರಧಾನ ಕಾರ್ಯದರ್ಶಿನಿಯಾಗಿದ್ದಳು. ಆಕೆಯ ಈಗಿನ ಹೆಸರು ವಿರಕ್ತೆಯೆಂದಿತ್ತು. ವಿರಕ್ತೆಯ ಅಪಾರವಾದ ಧನಸಂಪತ್ತಿಯಿಂದಲೇ ಆ ಮಾದವನ ಮಂದಿರವು ನಿರ್ಮಿತವಾಗಿತ್ತು. ವಿರಕ್ತೆಯು ಈಗ ಅರ್ಥದಿಂದಲೂ ವಿರಕ್ತಿಯಾಗಿ ತನು, ಮನ, ಧನವೆಲ್ಲವನ್ನೂ ಮಾಧವನ ಅಡಿದಾವರೆಯಲ್ಲಿ ಸಮರ್ಪಿಸಿದ್ದಳು. ಮೋಹನನೂ ಆತನ ಮಿತ್ರರೂ ಆಗಾಗ ಬಂದು ದೇವಾಲಯದ ಕಾರ್ಯಗಳನ್ನು ನಿರೀಕ್ಷಿಸಿ ಹೋಗುತ್ತಿದ್ದರು. ದೇವಾಲಯದ ಹತ್ತಿರ ದೇವಾಲಯಕ್ಕೆ ಸಂಬಂಧಪಟ್ಟವರ ಮನೆಗಳಲ್ಲದೆ, ಬೇರೆ ಯಾರ ಮನೆಗಳೂ ಅಲ್ಲಿ ಇಲ್ಲದೆ ಆ ಪ್ರದೇಶವು ನಿರ್ಜನವಾಗಿ ಶೋಭಿಸುತಲಿತ್ತು. ವಿರಕ್ತೆಯ ಇಚ್ಛೆಯಿಂದಲೇ ಇಂತಹ ಸ್ಥಳವು ಹುಡುಕಲ್ಪಟ್ಟಿತ್ತು. ಅಲ್ಲಿ ಬಡಜನರಿಗೂ ಅತಿಥಿ ಜನಗಳಿಗೂ ಭೋಜನಶಾಲೆಯೊಂದಿತ್ತು. ದಿನವೂ ಮಾಧವನ ಪೂಜೆಯಾದೊಡನೆ ಅಲ್ಲಿ ಭೋಜನವು ವ್ಯವಸ್ಥೆಯಿಂದ ನಡೆಯುತಲಿತ್ತು. ಇದಲ್ಲದೆ ಅನಾಥಾಶ್ರಮವೊಂದಿತ್ತು. ಅದರಲ್ಲಿ ಭೇಧವಿಲ್ಲದೆ, ತಕ್ಕ ವ್ಯವಸ್ಥೆಯಿಂದ ಅನಾಥರು ಕಾಪಾಡಲ್ಪಡುತ್ತಿದ್ದರು. ಇದೆಲ್ಲಕ್ಕೂ ಒಟ್ಟು ಸೇರಿ ಮಾಧವ ಕುಟೀರವೆಂದು ನಾಮಕರಣವಾಗಿತ್ತು. ವಿರಕ್ತೆಯು ಸಕಲ ಕಾರ್ಯಗಳಲ್ಲಿಯೂ ಮುಂದಾಳಾಗಿ ನಿಂತು ಅತ್ಯಂತ ದಕ್ಷತೆಯಿಂದ ಕಾರ್ಯವನ್ನು ನೆರವೇರಿಸುತ್ತಿದ್ದಳು.

× × × × ×

ಒಂದು ದಿನ ಸಾಯಂಕಾಲ ಐದು ಗಂಟೆಯ ಸಮಯವು. ಏನೋ ಒಂದು ಕಾರ್ಯಕ್ಕಾಗಿ ಮೋಹನನ ಮಿತ್ರರೆಲ್ಲರೂ ಈ ದಿನ ಮೋಹನನ ಬಂಗ್ಲೆ

ಯಲ್ಲಿ ನೆರೆದಿದ್ದು, ರಾಕಾಚಂದ್ರ ಮತ್ತು ಸುಖಾನಂದರ ಆಗಮನವನ್ನು ಪ್ರತೀಕ್ಷಿಸುತ್ತಾ ಕುಳಿತಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಅವರಿಬ್ಬರೂ ಅಲ್ಲಿಗೆ ಬಂದರು. ಕುಶಲಪ್ರಶ್ನೆಯಾದ ಬಳಿಕ ಮೋಹನನು ರಾಕಾಚಂದ್ರನನ್ನು ಪ್ರಶ್ನಿಸಿದನು:—"ನನ್ನ ಕಾಗವು ತಲ್ಪಿಯೇ ನೀವಿಬ್ಬರು ಬಂದಿರಷ್ಟೆ?"

ರಾಕಾಚಂದ್ರ—ಹೌದು. ಇಲ್ಲಿ ಕಳ್ಳತನವು ಹೇಗಿದೆ?

ಮೋಹನ—ಇಲ್ಲಿಯೂ ಭರದಿಂದ ಸಾಗುತ್ತಲಿದೆ. ಮೊನ್ನೆ ರಾತ್ರಿ ದಿನಕರರಾಯರ ಮನೆಯು ಸೂರೆಯಾಯಿತು. ಪಾಪ. ಕಳ್ಳರು ಬಂದಿರುವುದನ್ನು ನೋಡಿ ಕೂಗಲು ಆರಂಭಿಸಿದ ಸೇವಕನೊಬ್ಬನು ಕಳ್ಳರ ಕತ್ತಿಯ ಹೊಡತದಿಂದ ಆಸ್ಪತ್ರೆಯಲ್ಲೀಗ ನರಳುತ್ತಿರುವನು.

ರಾಕಾಚಂದ್ರ—ನೀನು ಕಳವು ನಡೆದ ದಿನ ಇದೇ ಊರಿನಲ್ಲಿ ಇರಲಿಲ್ಲವೇ?

ಮೋಹನ—ಇದ್ದರೂ ಪ್ರಯೋಜನವೇನು? ನಾನು ಇಲ್ಲಿ ಇರುವದು ಅವರಿಗೆ ತಿಳಿಯದೆ ಇದ್ದರೂ ಇರಬಹುದು.

ಸುಖಾನಂದ—ನಾವು ಊರಿನಲ್ಲಿ ಇದ್ದಾಗ ಯಾವ ಸುಲಿಗೆಗಳೂ ನಡೆಯದೆ ಬೇರೆ ಕಡೆಗಳಲ್ಲಿ ನಡೆದವು. ನಾವು ಊರಲ್ಲಿ ಇಲ್ಲದೆ ಇರುವ ಸಮಯವನ್ನು ನೋಡಿ ಊರಿನಲ್ಲಿ ಸುಲಿಯುವರು.

ಗುಣಾನಂದ—ಈ ಸ್ಥಿತಿಯನ್ನು ನಾನೂ ಅನುಭವಿಸಿದೆನು. ಕಳೆದ ಶುಕ್ರವಾರದಲ್ಲಿ ಪೋಲೀಸ ಕಮಿಷನರ ಇಚ್ಛೆಯಂತೆ ನೀಲಾದ್ರಿಗೆ ಹೋಗಿದ್ದೆನು. ತಿರುಗಿ ಬರುವಷ್ಟರಲ್ಲಿ ಸದ್ರಿಥದಲ್ಲಿ ನಾಲ್ಕಾರು ಕಳವುಗಳು ನಡೆದವು.

ರಾಕಾಚಂದ್ರ— ನಾವೆಲ್ಲರೂ ಹೀಗೆಯೇ ಮೋಸಹೊಂದಿರುವದನ್ನು ನೋಡಿದರೆ ಕಳ್ಳರು ಪತ್ತೇದಾರಿಗಳಿಗೆ ಸ್ವಲ್ಪ ಭಯಪಡುತ್ತಿರುವಂತೆ ತೋರುತ್ತಿದೆ.

ಮದನ—ಒಂದೇ ದಿನದಲ್ಲಿಯೇ ಎರಡು-ಮೂರು ಕಡೆಗಳಲ್ಲಿ ಸುಲಿಗೆಗಳು ನಡೆಯುತ್ತಿರುವದನ್ನು ನೋಡಿದರೆ ಕಳ್ಳರ ಪಂಗಡಗಳು ಹೆಚ್ಚಾಗಿವೆ ಎಂದು ತೋರುತ್ತದೆ.

ಮೋಹನ—ಪಂಗಡಗಳು ತೋರಿಕೆಗೆ ಎಷ್ಟಿದ್ದರೂ ಅವುಗಳಿಗೆಲ್ಲಾ

ನಾಯಕನು ಒಬ್ಬನೇ ಇರುವನು. ಹಾಗಿಲ್ಲದಿದ್ದರೆ ಈ ರೀತಿ ಯುಕ್ತಿಯಿಂದ ಚೌರ್ಯಗಳು ನಡೆಯುತ್ತಿದ್ದಿಲ್ಲ.

ಸುಖಾನಂದ—ಕಳ್ಳರಿಗೆ ಪತ್ತೇದಾರಿಗಳ ಭೀತಿಯೇನೋ ಇರಬಹುದು; ಆದರೆ ಅದರಿಂದ ಅವರು ಸುಮ್ಮನೆ ನಿಲ್ಲುವದಿಲ್ಲ. ನಮ್ಮ ಪ್ರಯತ್ನಗಳೂ ಸಾಗುವಂತಿಲ್ಲ.

ಮೋಹನ—ಇದುವರೆಗೆ ನಡೆದುದದರಲ್ಲಿ ಯಾರ ಮೇಲೆಯಾದರೂ ಸಂಶಯವು ಬಂದಿರುವದೇ?

ರಾಕಾಚಂದ್ರ—ಕಳವು ಒಂದೇ ಊರಿನಲ್ಲಿ ನಡೆಯುತ್ತಿದ್ದರೆ ಯಾರ ಮೇಲೆಯಾದರೂ ಸಂಶಯಪಡಬಹುದಾಗಿತ್ತು. ಹೀಗೆ ನಡೆಯುತ್ತಿದ್ದರೆ ಯಾರಲ್ಲಿ ತಾನೆ ಸಂಶಯಪಡಲಿ?

ಮೋಹನ—ಪತ್ತೇದಾರಿ ರಮೇಶನನ್ನು ನೋಡಿ ಬರಲು ನೀವಿಬ್ಬರು ಅವನಿರುವಲ್ಲಿಗೆ ಹೋಗಿರುವಿರಿ ಎಂದು ಕೇಳಿದೆನು. ಅವನು ಏನಂದನು?

ಸುಖಾನಂದ—ರಾಕಾಚಂದ್ರನು ಅಲ್ಲಿಗೆ ಬರಲಿಲ್ಲ. ನಾನೊಬ್ಬನೇ ಹೋದೆನು. ಹೋದೊಡನೆ ಆತನ ಭೇಟಿಯನ್ನು ಮಾಡುವದೇ ಮೊದಲು ಕಷ್ಟವಾಯಿತು. ಎರಡು ದಿನಗಳ ವರೆಗೆ ಅಲ್ಲಿಯೇ ಇದ್ದು ಕಾದು ನಿಂತು ಆತನನ್ನು ನೋಡಿ ಕೇಳಿದೆನು: "ನಿಮ್ಮಿಂದ ಹಿಡಿಯಲ್ಪಟ್ಟ ಕಳ್ಳರಿಂದ ಪ್ರಯೋಜನವೇನಾದರೂ ಉಂಟಾಯಿತೇ? ಬಾಯ್ಬಿಟ್ಟು ಏನನ್ನಾದರೂ ಕಳ್ಳರು ತಿಳಿಸಿದರೆ? ಉಳಿದವರನ್ನು ಹಿಡಿಯಲು ಯಾವುದಾದರೂ ಉಪಾಯವು ಹೊರಪಟ್ಟಿತೇ?"

ನಾನು ಕೇಳಿದ ಪ್ರಶ್ನೆಗಳಿಗೆ ರಮೇಶನು ತಿರಸ್ಕಾರದಿಂದ ನಗುತ್ತಾ ನುಡಿದನು: "ಓಹೋ! ಲೋಕಪ್ರಸಿದ್ಧರೆನಿಸಿ ನಿಮಗೂ ನನ್ನ ಸಹಾಯವನ್ನಪೇಕ್ಷಿಸಲು ಇಚ್ಛೆಯುಂಟಾಯಿತೇ? ರಾಕಾಚಂದ್ರ, ಮೋಹನ, ಮೊದಲಾದವರು ಸಹಾಯಕರಾಗಿ ಇರಲು ಇಲ್ಲಿಗೆ ಯಾಕೆ ಬಂದಿರಿ. ನಿಮ್ಮ ಆಗಮನವು ವ್ಯರ್ಥವಾಯಿತು"

ರಮೇಶನ ಆ ಉದ್ಧಟತನದ ಮಾತನ್ನು ಕೇಳಿ ನನಗೆ ಸಹಿಸಲಾರದ ಕೋಪವು ಬಂದಿತು. ಮೌನದಿಂದ ಹಿಂದಿರುಗಿದೆನು.

ರಾಕಾಚಂದ್ರ—ಆತನು ಉದ್ಧಟನೆಂಬುದನ್ನು ಮೊದಲೊಂದು ಬಾರಿ ನಾನು ನೋಡಿದ್ದೆನು. ಆದುದರಿಂದಲೇ ನಾನಲ್ಲಿಗೆ ಹೋಗಲು ಇಷ್ಟಪಡಲಿಲ್ಲ.

ಮದನ—ರಮೇಶನಿಗೆ ಮೊದಲಿನಿಂದಲೂ ನಮ್ಮಲ್ಲಿ ಅಸೂಯೆಯಿದೆ

ಮೋಹನ—ಮುಂದೆ ಯಾವ ಉಪಾಯವು?

ರಾಕಾಚಂದ್ರ:—ಅದನ್ನು ತಿಳಿಯುವುದಕ್ಕಾಗಿಯೇ ನಾವು ಇಲ್ಲಿಗೆ ಬಂದಿರುವೆವು. ನೀನೇ ಏನನ್ನಾದರೂ ಹೇಳು.

ಮೋಹನ—ನನಗೇನೂ ಹೊಳೆಯುವದಿಲ್ಲ.

ರಾಕಾಚಂದ್ರ—ಹೌದು. ನಿನಗೆ ಹೊಳೆಯುವದಾದರೂ ಹೇಗೆ? ನಿನ್ನ ಕೈಗಳಂತಿರುವ ಈ ಇಬ್ಬರೂ (ಕೋಮಲೆ, ಪ್ರಿಯನಾಥರನ್ನು ತೋ-ರಿಸಿ) ಏನೊಂದನ್ನೂ ಉಸುರದೆ ನಿಶ್ಶಬ್ದವಾಗಿ ಕುಳಿತ ಮೇಲೆ ನಿನಗಾದರೂ ಏನು ಹೊಳೆದೀತು! ಅಲ್ಲವೇ? ಎಂದು ಮಂದಹಾಸದಿಂದ ರಾಕಾಚಂದ್ರನು ನುಡಿದನು.

ಮದನ—ಅದು ನಿಜ.

ಪ್ರಿಯನಾಥ—ಹೂ. ಅದು ನಿಜವೇನು? ರಾಕಾಚಂದ್ರನ ಮಾತನ್ನು ತಾವು ಅನುವಾದಿಸುವಿರಾ?

ರಾಕಾಚಂದ್ರ—ಅದು ನಿಜವಲ್ಲದೆ ಸುಳ್ಳೇನು?

ಪ್ರಿಯನಾಥ—ನಿಜವೋ, ಸತ್ಯವೊ ನಿಮಗೆ ಗೊತ್ತಿದೆ. ಯಾವುದನ್ನೂ ಹೆಚ್ಚಾಗಿ ಹಚ್ಚಿಕೊಳ್ಳದೆ ಸುಮ್ಮನೆ ಕುಳಿತ ನಾನು ಈ ದೊಡ್ಡ ಸಭೆಯ ಮುಂದೆ ಯಾವುದನ್ನು ಚರ್ಚಿಸಲಿ? ಅಕ್ಕನಾದರೂ ಏನನ್ನು ಹೇಳುವಳು? ಆಕೆಯು ಮೊದಲೇ ಅಬಲೆಯು. ಈಗಂತೂ ಗೃಹಿಣಿಯಾಗಿರುವಳು.

ಮೋಹನನು ಕೋಮಲೆಗೆ ಸ್ವಲ್ಪ ಕೋಪವನ್ನುಂಟುಮಾಡಲು ನಸು ನಗುತ್ತಾ ಹೇಳಿದನು: "ಗೃಹಿಣಿಯಾದ ಮೇಲೆ ಈ ದೊಡ್ಡ-ದೊಡ್ಡ ಪತ್ರೇದಾರಿಗಳ ಸಮ್ಮುಖದಲ್ಲಿ ಬಂದು ಕುಳಿತುಕೊಳ್ಳುವದಾದರೂ ಯಾಕೆ? ಗೃಹಿಣಿಗೆ ಅಡಿಗೆಯ ಮನೆಯಲ್ಲಿ ಸ್ಥಳವಿರಲಿಲ್ಲವೇ?"

ಕೋಮಲೆಯು ಕೋಪಗೊಂಡು: "ಅಡಿಗೆಯ ಮನೆಯಲ್ಲಿ ಸ್ಥಳವಿಲ್ಲದೆ ಏನು? ಬೇಕಾದಷ್ಟಿದೆ. ಗೃಹಿಣಿಯಾದರೆ ಅಣ್ಣ-ತಮ್ಮಂದಿರ ಮುಂದೆ ಬರ

ಬಾರದೇನು? ಹಾಗೆ ಇಷ್ಟವಿಲ್ಲದೆ ಇದ್ದಲ್ಲಿ ನೀವೇ ಇಲ್ಲಿ ಇರ್ರಿ. ನಾನು ಹೋಗುತ್ತೇನೆ" ಎಂದು ನುಡಿದು ಎದ್ದು ನಿಂತು ಅಲ್ಲಿಂದ ಹೊರಟು ಬಿಟ್ಟಳು.

ಮೋಹನನು ನಗುತ್ತಾ:-"ಗೃಹಿಣಿಗೆ ಕೋಪ ಬಂದಿತೇನು? ಸ್ವಲ್ಪ ನಿಲ್ಲು. ನೀನು ಹೊರಟು ಹೋದರೆ ನನ್ನ ಬಾಯಿಂದ ಮಾತು ಹೊರಡುವದಿಲ್ಲವೆಂದು ರಾಕಾಚಂದ್ರನು ಹೇಳಲಿಲ್ಲವೆ? ನೀನು ಹೊರಟು ಹೋದರೆ ನಾನೂ ಬಂದು ಬಿಡುವೆನು" ಎಂದು ನುಡಿದು ಕೋಮಲೆಯ ಕೈಹಿಡಿದು ಕುಳ್ಳಿರಿಸಿದನು.

ರಾಕಾಚಂದ್ರ—"ಇದೇನು! ನಮ್ಮನ್ನು ಅಣ್ಣ-ತಮ್ಮಂದಿರೆಂದು ಬಾಯಿಂದ ಮಾತ್ರ ಹೇಳಿಕೊಂಡು ಕಾರ್ಯದಿಂದ ನಮ್ಮನ್ನು ದೂರಪಡಿಸಿಯಾಯಿತು" ಎಂದು ಕೋಮಲೆಗೆ ಮಾರ್ಮಿಕವಾಗಿ ನುಡಿದನು.

ಮೋಹನ—ಕೋಮಲೆ, ಈಗಲಾದರೂ ಹೇಳು. ಮುಂದಿನ ಉಪಾಯವೇನು?

ಕೋಮಲೆ—ಹಾಸ್ಯವನ್ನು ಮಾತ್ರ ಮಾಡಬಾರದು. (ಸುಖಾನಂದನನ್ನು ಕುರಿತು) ನೀವು ರಮೇಶನನ್ನು ನೋಡುಲು ಹೋಗಿದ್ದಾಗ ಸೆರೆ ಸಿಕ್ಕಿದ್ದ ಕಳ್ಳರನ್ನು ನೋಡಲು ಹೋಗಿದ್ದೀರಾ?

ಸುಖಾನಂದ—ಇಲ್ಲ. ರಮೇಶನ ಔದ್ಧತ್ಯದಿಂದ ಕುಪಿತನಾದ ನನಗೆ ಆ ಸಮಯದಲ್ಲಿ ಅದು ಹೊಳೆಯಲಿಲ್ಲ.

ಕೋಮಲೆ—ಅದು ನಿಮ್ಮಿಂದ ನೆರವೇರಿದೆ.

ಮೋಹನ—ಹೇಗೆ?

ಕೋಮಲೆ—ನಾವು ಅಲ್ಲಿಗೆ ಹೋಗಿದ್ದೆವು

ಮೋಹನ—ಅದು ಯಾವಾಗ?

ಕೋಮಲೆ—ದಶಮೀ ದಿನ.

ಮೋಹನ—ನವಮೀ ದಿನ ನೀನೂ ಪ್ರಿಯನಾಥನು ಮಾಧವಕುಟೀರಕ್ಕೆ ಹೋಗುತ್ತೇವೆಂದು ಹೇಳಿ ಅಲ್ಲಿಗೆ ಹೋಗಲಿಲ್ಲವೇನು?

ಕೋಮಲೆ—ಹೋಗಿದ್ದೆವು. ರಮೇಶನು ಕಳ್ಳರಿಬ್ಬರನ್ನು ಸೆರೆ ಹಿಡಿದಿರುವನೆಂಬ ವರ್ತಮಾನವು ಮಾಧವಕುಟೀರಕ್ಕೆ ಆ ದಿನವೇ ಬಂದಿದ್ದ ಲಕ್ಷ್ಮೀಶನಿಂದ ತಿಳಿಯಿತು. ತಿಳಿದೊಡನೆ ನಾವೆಲ್ಲರೂ ಮಾಧವಕುಟೀರದ

ಕಾರ್ಯವನ್ನು ಲಕ್ಷಿಸದೆ ರಮೇಶನು ಇರುತ್ತಿರುವ ರಜತವೆಂಬಲ್ಲಿಗೆ ಹೋದೆವು. (ರಜತವು ಒಂದು ಸಣ್ಣಪಟ್ಟಣ )

ರಾಕಾಚಂದ್ರ—ಮಾಧವಕುಟೀರದ ಕಾರ್ಯವೇನು?

ಮೋಹನ—ಬೇರೆ ಏನೂ ವಿಶೇಷವಾದ ಕಾರ್ಯವಲ್ಲ. ಪ್ರತಿ ಏಕಾದಶಿಯಲ್ಲಿಯೂ ಪ್ರಾಯಶಃ ನಾವೆಲ್ಲರೂ ಅಲ್ಲಿ ಮಾಧವದರ್ಶನಕ್ಕಾಗಿ ಸೇರುವೆವು.

ಕೋಮಲೆ—ಲಕ್ಷ್ಮೀಶನು ಮಾಧವಕುಟೀರಕ್ಕೆ ಬರುವದಕ್ಕಿಂತ ಮೊದಲೇ ರಮೇಶನನ್ನು ನೋಡಲು ಹೋಗಿ ತಿರಸ್ಕೃತನಾಗಿದ್ದನು. ತಿರುಗಿ ರಮೇಶನನ್ನು ನೋಡುವ ಆವಶ್ಯಕತೆಯು ನಮಗೆ ಇರಲಿಲ್ಲ; ಆದರೆ "ರಮೇಶನು ಈ ಮೇರೆ ಕ್ರೌರ್ಯವನ್ನೇಕೆ ತೋರಿಸುತ್ತಿರುವನು? ಬೇರೆಯವರಂತೆ ಇವನೂ ಒಬ್ಬ ಪತ್ನೀಪಾರಿಯಲ್ಲವೇನು?" ಎಂದು ನಾವು ಯೋಚಿಸಿ ರಮೇಶನ ಸ್ಥಿತಿಯನ್ನು ಪರೀಕ್ಷಿಸಲು ಉದ್ಯುಕ್ತರಾದೆವು. ರಮೇಶನ ಮನೆಗೆ ಹೋಗಿ ಹಿಂದಿರುಗಿ ಹೋಗುತ್ತಿದ್ದ ಒಬ್ಬ ಪೋಲೀಸನನ್ನು ನೋಡಿದೆವು. ಪ್ರಿಯನಾಥ, ಲಕ್ಷ್ಮೀಶರನ್ನು ನನ್ನನ್ನು ದೂರದಿಂದ ಹಿಂಬಾಲಿಸುತ್ತಿರುವಂತೆ ನುಡಿದು ಆ ಪೋಲೀಸನನ್ನು ಅನುಸರಿಸಿ ಹೋದೆನು. ಪೋಲೀಸನು ಅಲ್ಲಲ್ಲಿ ಸುತ್ತಿ ಒಂದು ಸಣ್ಣ ಬೀದಿಯಲ್ಲಿದ್ದ ಸಾಧಾರಣವಾದ ಮನೆಯನ್ನು ಹೊಕ್ಕನು. ಮನೆಯು ಆತನದೇ ಇರಬಹುದೆಂದು ನಿಶ್ಚಯ ಮಾಡಿ ನಾನು ಆ ಮನೆಯ ಹತ್ತಿರ ಹೋದೆನು. ಆಗ ಪೋಲೀಸನು ಒಳಭಾಗದಲ್ಲಿ ಸುಮ್ಮನೆ ನಿಂತಿದ್ದನು. ನಾನೂ ಒಳಹೊಕ್ಕೆನು.

ಮೋಹನ—ಆಗ ನೀನು ಹೀಗೆಯೇ ಇದ್ದೆಯಾ?

ಕೋಮಲೆ—ಹೀಗಲ್ಲದೆ ಹೇಗೆ ಇರಬೇಕಾಗಿತ್ತು?

ಮೋಹನ—ಹಾಗಲ್ಲ. ವೇಷವನ್ನುದ್ದೇಶಿಸಿ ಕೇಳಿದೆನು.

ಕೋಮಲೆ—ವೇಷವೇನು? ಬ್ರಹ್ಮಸೃಷ್ಟಿಯನ್ನು ಬೇರೆ ಮಾಡುವದು ಹೇಗೆ? ಈಗಿದ್ದ ವೇಷವೇ ಯಾವಾಗಲೂ ಇರುವದು.

ಮೋಹನ—ಸರಿ. ಸರಿ. ಎಲ್ಲದರಲ್ಲಿಯೂ ನಿನ್ನ ಹಾಸ್ಯ. ನೀನು ಹೇಗಾದರೂ ಹೋಗಿರು. ನನಗೇನು! ಮುಂದೆ ಹೇಳು.

ಕೋಮಲೆ—ಸರಿ ಇಷ್ಟರಲ್ಲಿಯೇ ಕೋಪಕ್ಕೆ ಆರಂಭವಾಯಿತು.

ಹಾಸ್ಯಕ್ಕೆ ಆರಂಭ ಮಾಡಿರುವದು ನೀನೇಯೇ. ಪುರುಷವೇಷದಿಂದಲೇ ಅಲ್ಲಿಗೆ ಹೋಗಿದ್ದೆನು. ಇನ್ನೇನು!

ಮೋಹನ—ಅಯ್ಯೋ! ನಿನ್ನ ಪುರುಷವೇಷವನ್ನು ನೋಡಿದೊಡನೆ ನನಗೆ ನಗೆ ಬರುತ್ತದೆ. ಅದೆಂತಹ ವೇಷವೋ?

ಕೋಮಲೆ—ನೀವೀ ಸುಖಾನಂದರನ್ನು ವಂಚಿಸಲು ಧರಿಸಿದ್ದ ಸ್ತ್ರೀ ವೇಷವನ್ನು ನಾನು ನೋಡಿದ್ದರೆ ನಕ್ಕು ನಕ್ಕು ಹಾಸ್ಯಮಾಡಿ ಬಿಡುತ್ತಿದ್ದೆನು.

ರಾಕಾಚಂದ್ರ—ಸರಿ. ನಿಮ್ಮ ಈ ಪ್ರೇಮ ಕಲಹದಲ್ಲಿ ಪ್ರಕೃತಕಥೆಯು ಮರೆತೇ ಹೋಯಿತು.

ಕೋಮಲೆ—ಹೌದು. ಪೋಲೀಸನು ನನ್ನನ್ನು ಯಾರೆಂದು ಕೇಳಿದೊಡನೆ ಆತನ ಕೈಯಲ್ಲಿ ಹತ್ತುರೂಪಾಯಿ ನೋಟೊಂದನ್ನು ಇಟ್ಟೆನು ಅದರಿಂದ ಆತನ ಮುಖವು ಪ್ರಫುಲ್ಲಿತವಾಗಿ ಆತನು ನುಡಿದನು: "ತಮಗೆ ನನ್ನಿಂದೇನಾಗಬೇಕು ಹೇಳಿರಿ." ನಾನು ನುಡಿದೆನು. "ಬಹುಮಾನವು ಇಷ್ಟೇ ಸರಿ ಎಂದು ತಿಳಿಯಬೇಡ. ನಿನಗೆ ತಿಳಿದಿರುವ ವಿಷಯವನ್ನು ಸರಿಯಾಗಿ ಹೇಳಿದರೆ ಇನ್ನೂ ಹೆಚ್ಚಿಗೆ ಕೊಡುವೆನು." ಪೋಲೀಸನು ನನ್ನ ಮಾತಿಗೆ ಒಪ್ಪಿದನು. ನಾನು ಕೇಳಿದೆನು: "ಕಳ್ಳರ ತಂಡದ ಇಬ್ಬರು ಇಲ್ಲಿ ಸೆರೆ ಸಿಕ್ಕಿರುವರೆಂಬುದನ್ನು ಕೇಳಿದೆನು. ಅದು ನಿಜವಷ್ಟೆ? ಅದು ಯಾವಾಗ?"

ಪೋಲೀಸ್—ಮೂರು ದಿನಗಳಾದವು.

ನಾನು—ಹಿಡಿದವರು ಯಾರು?

ಪೋಲೀಸ್—ಪತ್ತೆದಾರಿ ರಮೇಶನವರು.

ನಾನು—ಹೇಗೆ?

ಪೋಲೀಸ್—ಅದು ನನಗೆ ತಿಳಿಯದು. ಪೋಲೀಸರಲ್ಲಿ ಒಬ್ಬಿಬ್ಬರ ಹೊರತು ಅದು ಬೇರೆ ಯಾರಿಗೂ ತಿಳಿದಿಲ್ಲ.

ನಾನು—ತಿಳಿದವರು ಯಾರೆಂಬುದನ್ನು ಹೇಳುವಿಯಾ?

ಪೋಲೀಸ್-ಸಬ್‌ಇನ್‌ಸ್ಪೆಕ್ಟರರು, ಹೆಡ್‌ಕಾನ್‌ಸ್ಟೇಬಲ್, ಇನ್ನೊಬ್ಬ ಪೋಲೀಸನು. ಉಳಿದವರಾರಿಗೂ ತಿಳಿದಂತೆ ಕಾಣಲಿಲ್ಲ. ತಿಳಿಯುವದಕ್ಕೆ ಯತ್ನಿಸಿದ ಒಬ್ಬಿಬ್ಬ ಪೋಲೀಸರನ್ನು ಇನ್‌ಸ್ಪೇಕ್ಟರರು ಬೆದರಿಸಿ ಬಿಟ್ಟರು.

ನಾನು—ತಿಳಿದವರಲ್ಲಿ ಪೋಲೀಸನೂ ಒಬ್ಬನಿರುವನೆಂದು ಹೇಳಿದೆ ಯಷ್ಟೆ? ಆತನನ್ನೀಗ ಇಲ್ಲಿಗೆ ಕರೆತರಲು ನಿನಗೆ ಸಾಧ್ಯವಿರುವದೇ?

ಪೋಲೀಸನು ಆತನನ್ನು ಕರೆತರಲು ಒಪ್ಪಿ ಅಲ್ಲಿಂದ ಹೊರಟು ಹೋದನು ಸ್ವಲ್ಪ ಹೊತ್ತಿನೊಳಗೆ ಇನ್ನೊಬ್ಬನನ್ನು ಕರೆದುಕೊಂಡು ಬಂದನು. ಆತನು ಬಂದೊಡನೆ ನಾನು ಮೊದಲನೆಯವನನ್ನು ಒಳಗೆ ಕಳುಹಿಸಿ ಎರಡನೆಯ ಪೋಲೀಸನ ಕೈಯಲ್ಲಿ ಇಪ್ಪತ್ತೈದು ರೂಪಾಯಿಗಳ ನ್ನಿಟ್ಟು: "ಈಗ ರಮೇಶನು ಹಿಡಿದಿರುವ ಕೈದಿಗಳ ವಿಷಯವನ್ನು ನಿನ್ನಿಂದ ತಿಳಿಯಲು ಬಂದಿರುವೆನು. ತಿಳಿದುದನ್ನು ನಿಜವಾಗಿ ಹೇಳು" ಎಂದೆನು.

ಪೋಲೀಸ—ನಿಮ್ಮ ಈ ಬಹುಮಾನಕ್ಕೆ ನಾನು ಮರುಳಾಗಿ ರಹಸ್ಯ ವನ್ನು ಹೊರಗೆಡವಿ ಅದು ಬಹಿರಂಗವಾಗಿ ಬಿಟ್ಟರೆ ಆಗ ನನ್ನ ಮುಂದಿನ ಗತಿ ಏನು?

ನಾನು—ನೀನು ಆ ವಿಷಯದಲ್ಲಿ ಭಯಪಡಬೇಡ. ನಿನಗೆ ಇದರಿಂದ ಯಾವ ತೊಂದರೆಯೂ ಬರದಂತೆ ನಾನು ತಕ್ಕ ವ್ಯವಸ್ಥೆಯನ್ನು ಮಾಡು ವೆನು. ನಿನ್ನ ಮೇಲೆ ಯಾವ ಅಪರಾಧವೂ ಬರಲಾರದು. ನಿಜಸ್ಥಿತಿಯನ್ನು ತಿಳಿಸಿದರೆ ನಿನಗೆ ಯಾವ ಕಷ್ಟವೂ ಸಂಭವಿಸದಂತೆ ನಾನು ಕಾಯುವೆನು. ಇಗೋ! ನಂಬಿಕೆಗಾಗಿ ಈಗ ತೆಗೆದುಕೊ ಎಂದು ನುಡಿದು ತಿರುಗಿ ಇಪ್ಪ ತ್ತೈದು ರೂಪಾಯಿಗಳನ್ನು ಕೊಟ್ಟೆನು. ಆತನು ಅದರಿಂದ ಹಸನ್ಮುಖನಾಗಿ ಹೇಳಿದನು: "ನಿಮ್ಮ ಮಾತಿನಲ್ಲಿ ನಂಬಿಕೆಯನ್ನಿಟ್ಟಿರುವೆನು. ಇನ್ನು ನನಗೆ ಭೀತಿಯಿಲ್ಲ. ಈಗ ಸಿಕ್ಕಿದ್ದ ಇಬ್ಬರು ನಿಜವಾದ ಕಳ್ಳರೆಂಬುದು ನಿಶ್ಚಯವಿಲ್ಲ. ಅಥವಾ ಆ ಇಬ್ಬರು ಕಳ್ಳರಾದರೂ ಅವರನ್ನು ಹಿಡಿದಿರುವುದರಿಂದ ಪ್ರಯೋ ಜನವೇನೂ ಸಿಗುವಂತಿಲ್ಲ. ರಮೇಶನೂ ಇನ್‌ಸ್ಪೆಕ್ಟರರೂ ಕಳ್ಳರೊಡನೆ ಸೇರಿದಂತಿದೆ ತಮ್ಮ ಗುಪ್ತಕಾರ್ಯವನ್ನು ಸಾಧಿಸುವದಕ್ಕಾಗಿಯೇ ಆ ಇಬ್ಬರನ್ನು ಸೆರೆ ಹಿಡಿದಂತೆ ಮಾಡಿರುವರು.

ನಾನು—ರಮೇಶನ, ಅಥವಾ ಇನ್ಸಪೆಕ್ಟರರ ಮನೆಗೆ ಯಾರಾದರೂ ಹೊಸಬರು ಬರುತ್ತಿರುವದನ್ನು ನೋಡಿರುವಿಯಾ?

ಪೋಲೀಸ—ಯಾರೋ ಒಬ್ಬರು ಇನ್ಸಪೆಕ್ಟರರ ಮನೆಗೆ ಬಂದು

ಹೋಗುತ್ತಿರುವದನ್ನು ಮಾತ್ರ ಕೆಲವು ಸಾರಿ ನೋಡಿದ್ದೆನು. ಪರಿಚಯವು ಸಿಗಲಿಲ್ಲ.

ನಾನು—ಅವರ ಆಕಾರ ಮೊದಲಾದುದು ಹೇಗಿದೆ? ಎಂಬುದನ್ನು ವಿಚಾರಿಸಿದೆನು. ಪೋಲೀಸನು ಅವರ ಆಕಾರವೇ ಮೊದಲಾದುದನ್ನು ವಿವರಿಸಿದನು. ಆದರಿಂದ ನನಗೆ ಒಬ್ಬರಲ್ಲಿ ಸಂದೇಹವು ಏರ್ಪಟ್ಟಿತು.

ಮೋಹನ—ಯಾರಲ್ಲಿ?

ಕೋಮಲೆ--ಹಿಂದೆ ಜ್ಯೋತಿಪುರದಲ್ಲಿ ರಘುವಿನ ಜೊತೆಗೆ ಸೇರಿ ಒಬ್ಬ ಇನ್ಸಪೆಕ್ಟರಿರಲಿಲ್ಲವೇ?

ಮೋಹನ—ಹೌದು. ಅವರು ಆ ತಪ್ಪಿಗೆ ಕೆಲಸದಿಂದ ಬಿಡಿಸಲ್ಪಟ್ಟು ಐನೂರು ರೂಪಾಯಿ ಜುಲ್ಮಾನೆಯನ್ನೂ ತೆತ್ತು ಎತ್ತೋ ಹೊರಟು ಹೋದರು.

ಕೋಮಲೆ--ಪೋಲೀಸನು ಹೇಳಿದ ಆಕಾರವನ್ನು ನೋಡಿದರೆ ಅವರೇ ಇರಬಹುದೆಂದು ಸಂದೇಹಪಟ್ಟೆನು. ಇದಿಷ್ಟನ್ನು ತಿಳಿದುಕೊಂಡು ಪ್ರಿಯನಾಥ, ಲಕ್ಷ್ಮೀಶರೊಂದಿಗೆ ಅಲ್ಲಿಂದ ಹೊರಟು ಮಾಧವಕುಟೀರಕ್ಕೆ ಹೋದೆವು. ಅಷ್ಟರಲ್ಲಿ ನಾವೆಲ್ಲರೂ ಇಲ್ಲಿಗೆ ಬಂದು ಸೇರುವಂತೆ ಆಜ್ಞಾಪತ್ರವು ಬಂದಿತ್ತು. ಒಡನೆ ಇಲ್ಲಿಗೆ ಹೊರಟು ಬಂದೆವು.

ರಾಕಾಚಂದ್ರ (ಮೋಹನನನ್ನು ಕುರಿತು)--ನಿನಗಿದು ಮೊದಲೇ ತಿಳಿದಿರಲಿಲ್ಲವೇ?

ಮೋಹನ— ಅದೆಲ್ಲ ಇಷ್ಟು ಹೊತ್ತಿನವರೆಗೆ ಗುಪ್ತವಾಗಿಯೇ ಇದ್ದಿತ್ತು. ನನಗೂ ಈಗಲೇ ತಿಳಿಯಿತು.

ಪ್ರಿಯನಾಥ—ನಾವು ಇಲ್ಲಿಗೆ ಬಂದು ಅರ್ಧ ಗಂಟೆಯು ಮಾತ್ರ ಆಯಿತು. ಅಷ್ಟರಲ್ಲಿ ಹೇಳಲು ಅವಕಾಶವಾಗಲಿಲ್ಲ. ಈ ದೊಡ್ಡ ಸಭೆಯಲ್ಲಿ ಎಷ್ಟೋ ಪ್ರಮುಖ ವಿಚಾರಗಳು ಹೊರಪಡುವವು. ಹಾಗಿರಲು ಈ ಅಲ್ಪ ವಿಷಯವನ್ನು ಮೊದಲೇ ತಿಳಿಸುವದು ಅಯುಕ್ತವೆಂತಲೂ ಭಾವಿಸಿ ಏನನ್ನೂ ತಿಳಯದವರಂತೆ ಸುಮ್ಮನಿದ್ದೆವು.

ಮೋಹನ —ಪ್ರಿಯನಾಥ! ನಾನು ಹಿಂದೆಯೊಮ್ಮೆ: "ಇನ್ನು ನಮ್ಮ

ಭಾರವು ಅರ್ಧಾಂಶಕ್ಕೆ ಇಳಿಯಿತು" ಎಂದು ಹೇಳಿರಲಿಲ್ಲವೆ? ಆಗ ಆ ಮಾತು ಹಾಸ್ಯವಾಗಿ ಕೆಲವರಿಗೆ ತೋರಿತು. ಈಗ ಹೇಗೆ? ಅದು ನಿಜವಾಯಿತಷ್ಟೆ? ದೊಡ್ಡ ದೊಡ್ಡ ಪತ್ತೆದಾರಿಗಳಿಗೂ ತಿಳಿಯದೆ ಇದ್ದ, ಕಾರ್ಯದ ಅರ್ಧಭಾಗವು ಈಗ ನೆರವೇರಿದುದು ಆಶ್ಚರ್ಯವೇ ಸರಿ.

ಕೋಮಲೆ—ಏನಾದರೂ ಹೇಳಿ. ತೃಣವಿದ್ದರೆ ಪರ್ವತವನ್ನಾಗಿ ಮಾಡಿಬಿಡುವಿರಿ.

ಮೋಹನ—ಇದೇನು ಸಾಮಾನ್ಯ ಕಾರ್ಯವೇ?

ಕೋಮಲೆ—ಸರಿ. ಏನಾದರೂ ಹೇಳುತ್ತೀರಿ.

ಮೋಹನ—ಏನು? ಕೋಪಕ್ಕೆ ಆರಂಭವಾಯಿತೆ? ನಿನ್ನ ಹತ್ತಿರ ಮಾತನಾಡುವದಿಲ್ಲ. ಬೇರೆ ವಿಷಯವನ್ನು ಮಾತನಾಡುವೆನು. ರಾಕಾಚಂದ್ರ, ಮುಂದೇನು ಯೋಚನೆ?

ರಾಕಾಚಂದ್ರ--ರಜತಕ್ಕೆ ಹೋಗಿ ಪರೀಕ್ಷಿಸುವದು ಅನುಕೂಲವಾಗಿ ತೋರುತ್ತದೆ.

ಮೋಹನ—ಹೌದು; ಆದರೆ ನೀನು ಮಾತ್ರ ಈಗ ನಮ್ಮೊಂದಿಗೆ ಬರಬಾರದು. ಈಗ ಸುವರ್ಣನಗರಕ್ಕೆ ಹೊರಟು ಹೋಗಿ, ಅಲ್ಲಿಂದ ನಾಳೆ ಮಧ್ಯಾಹ್ನ ರಜತಕ್ಕೆ ಹೋಗಿ ರಮೇಶನನ್ನು ನೋಡುವ ನೆವದಿಂದ ರಮೇಶನ ಗೃಹಕ್ಕೆ ಹೋಗಬೇಕು. ಅಲ್ಲಿ ಮಾತಿನಿಂದ ರಮೇಶನ ವಶವರ್ತಿಯಾದಂತೆ ತೋರ್ಪಡಿಸಬೇಕು. ಆ ವಿಷಯದಲ್ಲಿ ನಿನ್ನ ಯುಕ್ತಿಯನ್ನು ಚೆನ್ನಾಗಿ ತೋರಿಸಬೇಕು. ಆತನ ಹೃದಯವನ್ನು ಪರೀಕ್ಷಿಸಬೇಕು.

ರಾಕಾಚಂದ್ರ—ಹಾಗೆಯೇ ಆಗಲಿ.

ಮೋಹನ (ಲಕ್ಷ್ಮೀಶನನ್ನು ಕುರಿತು)—ನೀನು ಈ ದಿನ ರಾತ್ರಿಯ ರೈಲಿನಲ್ಲಿ ರಜತಕ್ಕೆ ಹೊರಟು ಹೋಗಿ ಅಲ್ಲಿ ನಾವೆಲ್ಲರೂ ಗುಪ್ತವಾಗಿ ಇರಲು ತಕ್ಕದಾದ ಮನೆಯನ್ನು ಹುಡುಕಿ ಸಿದ್ಧಪಡಿಸು. ರಜತಕ್ಕೆ ಟಿಕೇಟನ್ನು ತೆಗೆದುಕೊಳ್ಳದೆ ಅದರ ಹಿಂದಿನ ಸ್ಟೇಶನ್ನಿಗೇ ತೆಗೆದುಕೋ ಯಾಕೆಂದರೆ ಯಾರಾದರೂ ಹೊಂಚು ಹಾಕುತ್ತಲೂ ಇರಬಹುದು. ಅಲ್ಲಿಂದ ಯಾವುದಾದರೂ ಬಾಡಿಗೆ ವಾಹನಗಳಿಂದ ರಜತಕ್ಕೆ ಹೋಗು. ವೇಷವನ್ನು

ಮರೆಸಿ ಹೋಗುವದಾದರೂ ಸಂದೇಹಕ್ಕೆ ಆಸ್ಪದವಾಗಬಹುದು. ರಮೇಶನೂ ಪತ್ತೇದಾರಿಯಾದುದರಿಂದ ಕುಶಲನಾಗಿ ಕಾರ್ಯವನ್ನು ಸಾಧಿಸುತ್ತಿರಬಹುದು.

ಈ ರೀತಿ ಮಾತನಾಡುತ್ತಿರುವಾಗ ಸೇವಕನೊಬ್ಬನು ಅಲ್ಲಿಗೆ ಬಂದು ಕೋಮಲೆಯ ಕೈಯಲ್ಲೊಂದು ಲಕ್ಕೋಟೆಯನ್ನು ಕೊಟ್ಟು ಹೊರಟು ಹೋದನು. ಕೋಮಲೆಯು ಅದರಲ್ಲಿದ್ದ ಕಾಗದವನ್ನೋದಿ ಮೋಹನನ ಕೈಯಲ್ಲಿ ಅದನ್ನು ಕೊಟ್ಟಳು. ಮೋಹನನು ಅದನ್ನೋದಿ ಹೇಳಿದನು: "ಇದೊಂದು ಕಾರ್ಯವೊದಗಿದೆ. ಸುರೇಂದ್ರನಾಥನಿಂದ ಇದು ಬರೆಯಲ್ಪಟ್ಟಿದೆ."

ರಾಕಾಚಂದ್ರ—ಏನು?

ಮೋಹನ—ಸುವರ್ಣನಗರದಿಂದ ಎಂಟು ಮೈಲಿ ದೂರದಲ್ಲಿ ಸಾಂಬನೂರು ಎಂಬುದೊಂದು ಗ್ರಾಮವಿದೆ.

ರಾಕಾಚಂದ್ರ—ಹೌದು. ಗೊತ್ತಿದೆ.

ಮೋಹನ—ಅಲ್ಲಿ ನಮ್ಮ ಸುರೇಂದ್ರನಾಥನ ಚಿಕ್ಕ ತಂದೆಯ ಮಗನು ವಾಸವಿರುವನು. ಆತನ ಹೆಸರು ಕವೀಶ.

ಸುಖಾನಂದ—ಏನು? ಆತನ ಹೆಸರು ಕವೀಶನೆಂದೆ?

ಮೋಹನ—ಹೌದು. ಆತನ ಗುರುತು ಇದೆಯೇನು?

ಸುಖಾನಂದ—ಹೌದು ಸುವರ್ಣನಗರದಲ್ಲಿ ಆತನು ಎರಡು ವರ್ಷ ನನಗೆ ಸಹಪಾಠಿಯಾಗಿದ್ದನು. ಆತನು ತುಂಬಾ ಧನಿಕ. ಅಲ್ಲಿ ವಿಶೇಷವೇನು?

ಮೋಹನ—ಸರಿ. ನೀನೇ ಅಲ್ಲಿಗೆ ಹೋಗುವುದೊಳ್ಳೇದು.

ರಾಕಾಚಂದ್ರ—ಕಾರ್ಯವೇನು?

ಮೋಹನ—ಕೇಳಿರಿ. ಸುರೇಂದ್ರನಾಥನ ಕಾಗದವನ್ನು ಓದುವೆನು.

"ಪ್ರಿಯ ಪುತ್ರಿಗೆ. ಸಾಂಬನೂರಿನಿಂದ ಭಯಜನಕವಾದ ತಂತಿಯೊಂದು ನನಗೀಗ ಬಂದಿತು. ಅದರಲ್ಲಿ ಕವೀಶನು ಈ ಮೇರೆಗೆ ತಿಳಿಸಿರುವನು. "ಯಾರೋ ಕಳ್ಳರು ಎರಡು ದಿನಗಳಿಂದ ನಮ್ಮ ಮನೆಯನ್ನು ಸೂರೆ ಮಾಡಲು ಹೊಂಚು ಹಾಕುತ್ತಿರುವಂತೆ ತೋರುತ್ತಿದೆ. ಭಯವು ನನಗೆ ಹೆಚ್ಚಾಗುತ್ತಲಿದೆ. ಮೋಹನನು ಎಲ್ಲಿ ಇರುತ್ತಾನೆಂಬುದು ನನಗೆ ತಿಳಿಯದೆ

ಯೋಚನೆಯಾಗುತ್ತಿದೆ. ನಿಮಗೆ ಆತನು ಇರುವ ಸ್ಥಳವು ತಿಳಿದಿದ್ದರೆ ದಯವಿಟ್ಟು ಕೂಡಲೆ ಅನುಗ್ರಹವಿಡುವಂತೆ ತಿಳಿಸಿರಿ. ಇತಿ" ನೀನಿದನ್ನು ಕೂಡಲೆ ಮೋಹನನ ಹತ್ತಿರ ವಿಜ್ಞಾಪಿಸು. ಇತಿ— ಸುರೇಂದ್ರನಾಥ"

ಸುಖಾನಂದ! ನೀನು ಆದಷ್ಟು ಬೇಗನೆ ಹೊರಡು. ಈಗ ಇಲ್ಲಿಂದ ಹೊರಟರೂ ಸಾಯಂಕಾಲ ಅಲ್ಲಿಗೆ ಸೇರಲು ಕಷ್ಟವಾಗಬಹುದು. ರಾತ್ರಿಯೇ ಅಲ್ಲಿಗೆ ಸೇರದಿದ್ದರೆ ಕವೀಶನ ಸ್ಥಿತಿಯು ಏನಾಗುವದೋ ತಿಳಿಯದು. ಸರ್ವಿಸ್ ಮೋಟಾರ್‌ಬಂಡಿಯು ಸಮಯಕ್ಕೆ ಸರಿಯಾಗಿ ನಿನಗೆ ದೊರೆಯದೇ ಹೋದರೆ ಬಾಡಿಗೆ ಕಾರೊಂದನ್ನು ತೆಗೆದುಕೊಂಡು ಹೋಗು. ಈಗಲೇ ಹೊರಡು." ಎಂದು ಮೋಹನನು ಹೇಳಿದನು. ಸುಖಾನಂದನು ಕೂಡಲೆ ಅಲ್ಲಿಂದ ಹೊರಟು ಸಾಂಬನೂರಿಗೆ ಪ್ರಯಾಣ ಮಾಡಿದನು.

ಸಾಂಬನೂರಿಗೆ ತಲ್ಪುವಾಗ ಪ್ರಾತಃಕಾಲದ ನಾಲ್ಕು ಗಂಟೆಯಾಗಿ ಹೋಗಿದ್ದಿತು. ಅಷ್ಟುಹೊತ್ತಿಗೆ ಅಲ್ಲಿಗೆ ಸೇರುವುದಕ್ಕೂ ಸುಖಾನಂದನು ಪ್ರಯಾಸಪಟ್ಟಿದ್ದನು. ಸರ್ವಿಸ್ ಮೋಟಾರು ಸಿಗದೆ ಬಾಡಿಗೆ ಕಾರಿನಲ್ಲಿ ಬಂದಿದ್ದನು. ಕವೀಶನ ಮನೆಯ ಬಾಗಿಲಿನ ವರೆಗೂ ರಸ್ತೆಯು ಇದ್ದಿತ್ತು. ಬಾಗಿಲಿನಲ್ಲಿ ಮೋಟಾರು ನಿಂತು ಸುಖಾನಂದನು ಕೆಳಗಿಳಿದು ಡ್ರೈವರನನ್ನು ಕುರಿತು: "ನೀನೀಗ ಬಂದಿರುವ ಮಾರ್ಗದಿಂದ ಹಿಂದಿರುಗಿ ಹೋಗಬೇಡ. ಪಶ್ಚಿಮದ ದಾರಿಯಿಂದ ಪ್ರಯಾಣ ಮಾಡು. ಯಾಕಂದರೆ ಈ ದಾರಿಯಲ್ಲಿ ಕಳ್ಳರ ತೊಂದರೆಯು ಬಂದರೂ ಬರಬಹುದು" ಎಂದು ಹೇಳಿ ಬಾಡಿಗೆ ಹಣವನ್ನು ಕೊಟ್ಟು ಆತನನ್ನು ಕಳುಹಿಸಿದನು. ಇದೆಲ್ಲವನ್ನೂ ನೋಡುತ್ತಿದ್ದ ಮನೆಯ ಕಾವಲಿಗೆ ಸುತ್ತಲೂ ನಿಂತಿದ್ದ ಜನಗಳಲ್ಲಿ ಒಬ್ಬನು ಹೋಗಿ ಕವೀಶನಿಗೆ ತಿಳಿಸಿದನು. ಕವೀಶನು ಒಡನೆ ಮೋಟಾರಿನಿಂದ ಬಂದವರನ್ನು ವಿಚಾರಿಸಲು ಇತ್ತಕಡೆಗೇ ಬಂದನು. ಸುಖಾನಂದನು ಗುರುತಿಸಿ: "ಇದೇನು! ಅಕಾಲದಲ್ಲಿ ಪತ್ತೇದಾರಿಗಳ ಸವಾರಿಯು ಇತ್ತ ಕಡೆಗೆ ದಯಮಾಡಿಸಿತು" ಎಂದು ಮಂದಹಾಸದಿಂದ ನುಡಿದನು.

ಸುಖಾನಂದ—ನಿನ್ನನ್ನು ನೋಡುವುದಕ್ಕಾಗಿಯೇ ಬಂದೆನು. ಮೋಹನನು ಕಾರ್ಯಾಂತರದಲ್ಲಿ ಉದ್ಯುಕ್ತನಾದುದರಿಂದ ನನ್ನನ್ನಿಲ್ಲಿಗೆ ಕಳುಹಿಸಿದನು.

ನಿನ್ನ ಸಮಾಚಾರವು ತಿಳಿದೊಡನೆ ಇಲ್ಲಿಗೆ ಬರುವದಕ್ಕಾಗಿ ಹೋರಟರೂ ನಿನ್ನ ಮನೆಯನ್ನು ತಲ್ಪುವುದಕ್ಕೆ ಇಷ್ಟು ವಿಲಂಬವಾಯಿತು. ಏನು! ಇಲ್ಲಿಯ ವರೆಗೆ ಕ್ಷೇಮವಷ್ಟೆ?

ಕವೀಶ—ಹಾಗೆನ್ನ ಬಹುದು.

ಸುಖಾನಂದ—ನಿನ್ನ ಸಿದ್ಧತೆಯನ್ನು ಚೆನ್ನಾಗಿಯೇ ನಡೆಸಿರುವಿ.

ಕವೀಶ—ನಿಮ್ಮಲ್ಲಿ ಯಾರೂ ಬರದೇ ಹೋದಮೇಲೆ ಇನ್ನೇನು ಮಾಡೋಣ. ನೀನೇ ಹೇಳು. ಮನೆಯ ಸುತ್ತಲೂ ಕಾವಲನ್ನಿಟ್ಟು ಇಡೀ ರಾತ್ರಿಯನ್ನು ಜಾಗರೂಕನಾಗಿ ಕಾಯುತ್ತಿರುವೆನು.

ಸುಖಾನಂದ— ಪೋಲೀಸರಿಗೆ ಯಾಕೆ ತಿಳಿಸಲಿಲ್ಲ?

ಕವೀಶ—ಅದು ನನಗೆ ಇಷ್ಟವಿಲ್ಲ. ಸಾಧ್ಯವಾದರೆ ಮೋಹನನ ಸಹಾಯ. ಅದಿಲ್ಲದೆ ಹೋದರೆ ನನ್ನ ಸಹಾಯವೇ ನನಗೆ ಅದಲ್ಲದೆ ಆ ಹಾಳು ಪೋಲೀಸರ ಆವಶ್ಯಕತೆಯು ನನಗೆ ಸರ್ವಥಾ ಬೇಡ. ಪೋಲೀಸರು ನಮ್ಮಿಂದಲೂ ದುಡ್ಡನ್ನು ತಿಂದು, ಗುಪ್ತವಾಗಿ ಕಳ್ಳರಿಂದಲೂ ದುಡ್ಡನ್ನು ತಿಂದು ಕೊನೆಗೆ ಕಾರ್ಯವನ್ನು ಹಾಳುಮಾಡಿ ಹೊರಟು ಹೋಗುವರು. ನಾನಿದನ್ನು ಎಷ್ಟೋಬಾರಿ ನೋಡಿರುವೆನು. ಈಗ ನೀನು ಬಂದಮೇಲೆ ನನಗಿನ್ನಾವ ಭಯವೂ ಇಲ್ಲ" ಎಂದು ಹೇಳಿ ಕವೀಶನು ಸುಖಾನಂದನನ್ನು ಒಳಗೆ ಕರೆದುಕೊಂಡು ಹೋಗಿ ಉಪಚರಿಸಿದನು.

ಕ್ರಮೇಣ ಹಗಲು ಕಳೆದು ರಾತ್ರಿಯಾಯಿತು. ಸುಖಾನಂದನ ಸಿದ್ಧತೆಯು ಚೆನ್ನಾಗಿ ನಡೆದಿತ್ತು. ಸುಖಾನಂದನು ಬೆಳಗಿನ ಝಾವದಲ್ಲಿ ಬಂದಿದ್ದರಿಂದ ಆತನ ಆಗಮನವು ಕಳ್ಳರಿಗೆ ತಿಳಿದಿರಲಿಲ್ಲ ರಾತ್ರಿಯಲ್ಲಿ ಮನೆಯ ದೀಪವನ್ನೆಲ್ಲ ಆರಿಸಿದ್ದರು. ಹಿಂದಿನ ರಾತ್ರಿಯಂತೆ ಮನೆಯ ಸುತ್ತ ಕಾವಲಿಗೆ ಜನರು ನಿಂತಿರಲಿಲ್ಲ. ಮನೆಯು ನಿಶ್ಶಬ್ದವಾಗಿದ್ದಿತು ರಾತ್ರಿ ೧ ಗಂಟೆಯ ಹೊತ್ತಿನಲ್ಲಿ ಮನೆಯ ಹಿಂಭಾಗದಲ್ಲಿ ಒಂದು ದೊಡ್ಡ ಸದ್ದಾಯಿತು. ಮನೆಯಲ್ಲಿ ಜನರು ನಿದ್ರಿಸಿರುವರೊ, ಎಚ್ಚತ್ತಿರುವರೋ ಎಂಬುದನ್ನು ನೋಡಲು ಈ ಶಬ್ದವು ಕಳ್ಳರಿಂದ ಮಾಡಲ್ಪಟ್ಟಿದ್ದಿತು; ಆದರೂ ಮನೆಯು ನಿಶ್ಶಬ್ದವಾಗಿದ್ದಿತು. ತಿರುಗಿ ಇನ್ನೊಂದು ವಿಧವಾದ ಧ್ವನಿಯಾಯಿತು; ಆದರೂ ಶಬ್ದವಿಲ್ಲ.

ಕಳ್ಳರು ಹತ್ತು ಜನರಿದ್ದರು. ಮನೆಯ ಹಿಂಭಾಗದ ಒಂದೆಡೆಯಲ್ಲಿ ಕನ್ನವನ್ನು ಹಾಕಿದರು. ಆ ರಂಧ್ರದಿಂದ ಒಬ್ಬನು ಒಳಹೊಕ್ಕು ಉಳಿದವರನ್ನು ಒಳಗೆ ಬರಲು ಸೂಚಿಸಿದನು. ನಾಲ್ಕು ಜನರು ಮೊದಲನೆಯವನನ್ನು ಅನುಸರಿಸಿ ಒಳಗೆ ಪ್ರವೇಶಿಸಿದರು. ಎಲ್ಲೆಲ್ಲಿ ಏನೇನು ಇರುವದೆಂಬದನ್ನು ನೋಡಲು ಮೆಲ್ಲಮೆಲ್ಲನೆ ಹುಡುಕುತ್ತಿದ್ದರು. ಸುಖಾನಂದನು ಹದಿನೈದು ಜನರೊಡನೆ ಮನೆಯಿಂದ ಸ್ವಲ್ಪ ದೂರದಲ್ಲಿ ಅಡಗಿ ಕುಳಿತು ಕಳ್ಳರನ್ನು ನಿರೀಕ್ಷಿಸುತ್ತಲಿದ್ದನು. ಕಳ್ಳರು ಮನೆಯೊಳಗೆ ಪ್ರವೇಶಿಸಿದುದನ್ನು ದೂರಿನಿಂದಲೇ ನೋಡಿ ಸುಖಾನಂದನು ನಾಲ್ಕೂ ಕಡೆಗಳಲ್ಲಿ ತನ್ನ ಜನರನ್ನು ತಡೆಯಲು ಹೇಳಿ ಆಕಾಶದ ಕಡೆಗೆ ಗುಂಡೊಂದನ್ನು ಹಾರಿಸಿದನು. ಗುಂಡಿನ ಸದ್ದನ್ನು ಕೇಳಿದೊಡನೆ ಮನೆಯ ಹೊರಗೆ ನಿಂತಿದ್ದ ಕಳ್ಳರು "ಹೊ" ಎಂದು ಗಟ್ಟಿಯಾಗಿ ಕೂಗಿ ದಿಕ್ಕು ದಿಕ್ಕಿಗೆ ಹಾರಿ ಓಡಿದರು. ಒಳಗಿದ್ದ ನಾಲ್ಕು ಜನರು ಗುಂಡಿನ ಶಬ್ದವನ್ನೂ ಕಳ್ಳರ ಕೂಗನ್ನೂ ಕೇಳಿ ಭೀತರಾಗಿ ಒಳಹೊಕ್ಕ ದ್ವಾರದಿಂದ ಹೊರಗೆ ಹಾರಿ ಓಡಲಾರಂಭಿಸಿದರು. ನಾಲ್ಕೂ ಕಡೆಗಳಿಂದ ಕವೀಶನ ಜನರು ಹಾರಿಬಂದು ಕಳ್ಳರನ್ನು ದೊಣ್ಣೆಗಳಿಂದ ಬಡಿಯಲಾರಂಭಿಸಿದರು. ಒಬ್ಬಿಬ್ಬರು ದೊಣ್ಣೆಯ ಪೆಟ್ಟುಗಳಿಗೆ ಸಿಗದೆ ಓಡಿದರು. ಕೆಲವರು ಪೆಟ್ಟುಗಳನ್ನು ತಿಂದರೂ ಪೆಟ್ಟಿನ ಹತಿಯನ್ನು ಸಹಿಸಿಕೊಂಡು ಹಾರಿ ಓಡಿದರು. ಕನ್ನದ ರಂಧ್ರದಿಂದ ಕೊನೆಗೆ ಹೊರಬಿದ್ದ ಇಬ್ಬರು ಮಾತ್ರ ಚೆನ್ನಾಗಿ ಪೆಟ್ಟುಗಳನ್ನು ತಿಂದು ಕವೀಶನ ಜನರಿಂದ ಬಂಧಿತರಾದರು. ಉಳಿದವರನ್ನು ಹಿಂಬಾಲಿಸಿ ಕವೀಶನೂ ಸುಖಾನಂದನೂ ಬೆನ್ನಟ್ಟಿ ಓಡುತ್ತಿದ್ದರು.

ಓಡುತ್ತಿದ್ದ ಕಳ್ಳನೊಬ್ಬನು ಥಟ್ಟನೆ ನಿಂತು ಹಿಂದಿರುಗಿ ಕವೀಶನನ್ನು ದೊಣ್ಣೆಯಿಂದ ಬಡಿದನು. ಒಡನೆ ಸುಖಾನಂದನು ಆ ಕಳ್ಳನ ಮೇಲೆ ಸಿಟ್ಟಾಗಿ ಗುರಿಯಿಟ್ಟು ಗುಂಡನ್ನು ಹಾರಿಸಿದನು. ಗುಂಡು ಕೆನ್ನೆಗೆ ತಗಲಿ ಕಳ್ಳನು ಭೂಮಿಗೊರಗಿದನು. ಮೂರು ಜನರಲ್ಲದೆ ಬೇರೆ ಯಾರೂ ಸಿಗದೆ ಓಡಿ ಹೋದರು. ಸೇವಕರು ದೀಪಗಳನ್ನು ಹಚ್ಚಿ ಕವೀಶನಿದ್ದೆಡೆಗೆ ಬಂದರು. ಕವೀಶನಿಗೆ ಪೆಟ್ಟು ಸಾಮಾನ್ಯವಾಗಿ ಬಿದ್ದಿತ್ತು. ಗುಂಡು ತಾಗಿ ಬಿದ್ದಿದ್ದ ಕಳ್ಳನ ಪ್ರಾಣವು ಕಂಠಕ್ಕೆ ಬಂದಿದ್ದಿತು. ಸೇವಕರು ಮನೆಯಿಂದ ನೀರನ್ನು

ತಂದು ಕಳ್ಳನ ಬಾಯಿಗೆ ಬಿಟ್ಟರು. ನೀರು ಹೊಟ್ಟೆಯೊಳಗೆ ಹೋದೊಡನೆ ಪ್ರಾಣವು ಹೊರಟು ಹೋಯಿತು. ಸೆರೆ ಹಿಡಿದಿದ್ದ ಇಬ್ಬರನ್ನು ಸೇವಕರು ಕವೀಶನ ಹತ್ತಿರ ಎಳೆದು ತಂದು, ಅವರ ಮುಖದ ಹತ್ತಿರ ದೀಪವನ್ನು ಹಿಡಿದರು. ದೀಪದ ಬೆಳಕಿನಲ್ಲಿ ಅವರ ಮುಖವನ್ನು ನೋಡಿದೊಡನೆ ಕವೀಶನು ಅವರ ಮೇಲೆ ರೇಗಿ ಹೋದನು.

ಸೆರೆ ಹಿಡಿಯಲ್ಪಟ್ಟ ಇಬ್ಬರೂ ಅದೇ ಗ್ರಾಮದವರಾಗಿದ್ದರು. ಹಣ ದಾಶೆಯಿಂದ ಕಳ್ಳರ ಬಲೆಯೊಳಗೆ ಸಿಕ್ಕಿ ಕಳ್ಳರಿಗೆ ಸಹಾಯ ಮಾಡಲು ಮುಂದಾಗಿ ಹೋಗಿ ಈಗ ಸಿಕ್ಕಿಬಿದ್ದಿದ್ದರು. ಸುಖಾನಂದನು ಗರ್ಜಿಸಿ ಕೇಳಿದು ದಕ್ಕೆ ಉತ್ತರವಾಗಿ: "ಯಾವನೋ ಒಬ್ಬನು ತಮ್ಮ ಬಳಿಗೆ ಬಂದು, ತನಗೀ ಕಾರ್ಯವನ್ನು ಸಾಧಿಸಿಕೊಟ್ಟರೆ ನೂರು ರೂಪಾಯಿಗಳನ್ನು ಕೊಡುವದಾಗಿ ಪ್ರತಿಜ್ಞೆ ಮಾಡಿರವನೆಂದೂ, ಹಣದಾಶೆಗೆ ತಾವೀಕಾರ್ಯದಲ್ಲಿ ಸೇರಿದೆವೆಂದೂ, ಮೃತಪಟ್ಟ ಕಳ್ಳನದ್ದಾಗಲಿ, ಪ್ರೇರಿಸಿದ ಕಳ್ಳನದ್ದಾಗಲಿ ಪರಿಚಯುವವು ತಮಗೆ ಮೊದಲು ಇರಲಿಲ್ಲವೆಂದೂ, ಪೋಲೀಸರಿಗೆ ತಮ್ಮನ್ನು ಒಪ್ಪಿಸದೆ ಕಾಪಾಡ ಬೇಕೆಂದೂ" ಹೇಳಿ, ಆ ಇಬ್ಬರು ಕವೀಶನ ಕಾಲಿನ ಮೇಲೆ ಬಿದ್ದರು. ಕವೀ ಶನು, "ಛೀ. ಪಾಪಿಗಳಿರಾ! ಈ ಮೇರೆಗೆ ಅತ್ಯಾಚಾರವನ್ನು ಮಾಡಿ ಈಗ ಎದುರಿನಲ್ಲಿ ನಿಂತು ಬೊಗಳುವದಕ್ಕೆ ನಿಮಗೆ ಲಜ್ಜೆಯಾಗುವದಿಲ್ಲವೇನು? ನಿಮ್ಮನ್ನು ಪೋಲೀಸರಿಗೆ ಒಪ್ಪಿಸುವದಿಲ್ಲ. ಪೋಲೀಸರಿಗೆ ಒಪ್ಪಿಸಿದರೆ ಶಿಕ್ಷೆಯು ಅಧಿಕವಾಗಿ ಆಗಲಾರದು. ನಿಮಗೆ ತಕ್ಕ ಶಿಕ್ಷೆಯು ಇಲ್ಲಿಯೇ ದೊರೆಯುವದು" ಎಂದು ಹೇಳಿ ಒಬ್ಬ ಸೇವಕನಿಂದ ಇಬ್ಬರಿಗೂ ಇಪ್ಪತ್ತೈದು ಪೆಟ್ಟುಗಳನ್ನು ಹೊಡೆಸಿದನು. ಕ್ಷೌರಕನನ್ನು ಕರೆಸಿ ಇಬ್ಬರಿಗೂ ತಲೆಬೋಳು ಮಾಡಿ ಹಣೆಗೆ ನಾಮ ಹಚ್ಚಿಸಿ ಕತ್ತೆ ಮೇಲೆ ಕುಳ್ಳಿರಿಸಿ ಅವರವರ ಮನೆಗೆ ಕಳುಹಿಸಿದನು. ಸುಖಾನಂದನು ಕವೀಶನನ್ನು ಕುರಿತು "ಕಳ್ಳರು ಪೆಟ್ಟು ತಿಂದು ಹೋದುದ ರಿಂದ ಇನ್ನು ನಿನ್ನ ತಂಟೆಗೆ ಬರಲಾರರು. ನಾನಿನ್ನು ಹೊರಟು ಹೋಗುವೆನು" ಎಂದು ಹೇಳಿ ಅವನಿಂದ ಸತ್ಕೃತನಾಗಿ ಹೊರಟು ಹೋದನು.

# ದ್ವಾದಶ ಗುಚ್ಛ.

ಈ ದಿನ ಸೋಮವಾರ. ಮಧ್ಯಾಹ್ನ ಮೂರೂವರೆ ಗಂಟೆಯ ಸಮಯದಲ್ಲಿ ರಜತದಲ್ಲಿ ರಮೇಶನ ಗೃಹದ ಮುಂದೆ ಒಂದು ಟ್ಯಾಕ್ಸಕಾರು ಬಂದು ನಿಂತಿತು. ಅದರಿಂದ ರಾಕಾಚಂದ್ರನು ಕೆಳಗೆ ಇಳಿದು ಬಾಗಿಲಿನಲ್ಲಿದ್ದ ಸೇವಕನ ಹತ್ತಿರ ತನ್ನ ವಿಳಾಸವಿರುವ ಒಂದು ಕಾರ್ಡನ್ನು (ವ್ಹಿಜಿಟಿಂಗ್ ಕಾರ್ಡ್) ಕೊಟ್ಟು ರಮೇಶನಿಗೆ ಕೊಡುವಂತೆ ಹೇಳಿದನು. ಸೇವಕನು ರಮೇಶನ ಹತ್ತಿರ ಹೋಗಿ ಅಲ್ಲಿಂದ ತಿರುಗಿ ಬಂದು ರಾಕಾಚಂದ್ರನಿಗೆ ರಮೇಶನಿರುವ ಕೊಠಡಿಯ ದಾರಿಯನ್ನು ತೋರಿಸಿದನು. ರಾಕಾಚಂದ್ರನು ಕೊಠಡಿಯ ಹತ್ತಿರ ಬಂದೊಡನೆ ರಮೇಶನು ಎದ್ದು ಬಂದು ಸ್ವಾಗತವನ್ನು ಬಯಸಿ ಒಳಗೆ ಕರೆದು ಕೊಂಡು ಹೋಗಿ ಕುಳ್ಳಿರಿಸಿದನು. ಸುಖಾನಂದ, ಲಕ್ಷ್ಮೀಶರಿಗೆ ಮಾಡಿದಂತೆ ಉದ್ಧಟತನವನ್ನು ತನ್ನ ಮೇಲೆ ತೋರದೆ ಇರುವದನ್ನು ನೋಡಿ ರಾಕಾಚಂದ್ರನು ರಮೇಶನಲ್ಲಿ ಸಂದೇಹಪಟ್ಟನು. ರಮೇಶನು ಮನಸ್ಸಿನಲ್ಲಿ "ನಾನು ಕಳ್ಳರನ್ನು ಹಿಡಿದಿರುವೆನೆಂಬುದರಿಂದ ಪ್ರಸಿದ್ಧ ಪತ್ತೇದಾರಿಗಳೂ ಕೂಡ ನನ್ನ ಹತ್ತಿರ ಬಂದು ಹೋಗಲಾರಂಭಿಸಿರುವರು; ಆದರೆ ಎಲ್ಲವರಲ್ಲಿ ವರ್ತಿಸಿದಂತೆ ರಾಕಾಚಂದ್ರನಲ್ಲಿ ವರ್ತಿಸಬಾರದು. ಸರ್ಕಾರಕ್ಕೆ ಪ್ರೀತಿ ಪಾತ್ರನಾದ ಈತನು ವಶನಾದರೆ ನಾನು ಮುಂದೆ ಏನನ್ನು ಬೇಕಾದರೂ ಸಾಧಿಸಬಹುದು. ಅದಕ್ಕಾಗಿ ತಕ್ಕ ಯುಕ್ತಿಯನ್ನು ಹೂಡುವೆನು" ಎಂದು ಮೊದಲೇ ನಿಶ್ಚಯ ಮಾಡಿಕೊಂಡಿದ್ದನು. ಮೊದಲು ತಾನಾಗಿಯೇ ಮಾತನಾಡಲಾರಂಭಿಸಿದನು. "ಇದೇನು! ಇತ್ತ ಚಿತ್ತೈಸೋಣಾಯಿತು!"

ರಾಕಾಚಂದ್ರ—ಈಗಿನ ಕಳ್ಳರ ವಿಚಾರವೇನಾದರೂ ನಿಮ್ಮಿಂದ ತಿಳಿಯಲಾದೀತೇ ಎಂಬುದನ್ನು ನೋಡಲು ಬಂದೆನು. ನಮ್ಮ ಉಪಾಯಗಳಲ್ಲಿ ಯಾವದೂ ಫಲಿಸಲಿಲ್ಲ. ನೀವು ಪ್ರಯಾಸಪಟ್ಟು ಇಬ್ಬರನ್ನು ಹಿಡಿದಿದ್ದೀರೆಂಬುದಾಗಿ ಕೇಳಿದ್ದೆನು.

ರಮೇಶ-ನಾನು ತಿಳಿದ ವಿಷಯವನ್ನು ಹೇಳಿದರೆ ನೀವು ಅದನ್ನು ಒಪ್ಪಲಾರಿರಿ. ಅದಕ್ಕಾಗಿಯೇ ಹಿಂದೆ ಸುಖಾನಂದನು ಬಂದಾಗ ಏನನ್ನೂ ಹೇಳಲಿಲ್ಲ.

ರಾಕಾಚಂದ್ರ—ಹಾಗೇನೂ ಇಲ್ಲ. ಸರಿಯಾಗಿ ಒಪ್ಪುವದಾಗಿದ್ದರೆ ಯಾಕೆ ಒಪ್ಪಬಾರದು! ಕಳ್ಳನು ತನ್ನ ಮನೆಯವನೇ ಆಗಲಿ. ಅವನು ಕಳ್ಳನೆಂದು ತಿಳಿದ ಮೇಲೆ ಆತನಿಗೂ ತಕ್ಕ ಶಿಕ್ಷೆಯಾಗಲೇ ಬೇಕು. ನನ್ನ ಯುಕ್ತಿಯು ಫಲಿಸದೆ ಇರುವುದನ್ನು ನೋಡಿದರೆ, ನಿಮ್ಮ ಮಾತಿನ ಅಭಿಪ್ರಾಯವನ್ನೂ ನೋಡಿದರೆ ಯಾರೋ ನಮ್ಮವರಾಗಿದ್ದವರೇ ಈ ಕಾರ್ಯ ಮಾಡುತ್ತಿರಬೇಕು, ಎಂದು ನನಗೀಗ ತೋರುತ್ತಿದೆ. ಹೇಳಿರಿ ನಿಮಗೆ ತಿಳಿದುದನ್ನು. ಪರಿಶೀಲಿಸುವೆನು.

ರಮೇಶ—ಜೈಲಲ್ಲಿದ್ದ ಇಬ್ಬರು ಕಳ್ಳರಿಂದ ಈ ವರೆಗೆ ತಿಳಿದುದು ಏನೆಂದರೆ "ತಮಗೆ ಮೋಹನನೇ ಮುಖ್ಯನು. ಆತನ ಆಜ್ಞೆಯಿಂದಲೇ ನಮ್ಮಂತಹ ನೂರಾರು ಜನರು ಈ ಕೆಲಸವನ್ನು ಮಾಡುತ್ತಿರುವರು" ಎಂದು.

ರಾಕಾಚಂದ್ರ—ಏನು! ಮೋಹನನೇ!

ರಮೇಶ—ಹೌದು. ಸುಪ್ರಸಿದ್ಧನಾಗಿ ಯಾವ ಮೋಹನನು ಮೆರೆದಾಡುತ್ತಿರುವನೋ ಅದೇ ಮೋಹನ.

ರಾಕಾಚಂದ್ರ—ಆತನೂ, ಆತನ ಸಂಗಡಿಗರೂ ಹಿಂದಿನ ನಡತೆಗಳನ್ನೆಲ್ಲಾ ಬಿಟ್ಟಿರುವರಲ್ಲವೇ? ಆತನ ಸಂಗಡಿಗರು ಈಗ ಪತ್ತೇದಾರಿಗಳಾಗಿ ಇರುವರಲ್ಲವೇ?

ರಮೇಶ—ಹೌದು. ಅದು ಜನರ ತೋರಿಕೆಗಾಗಿ. ಮಿತ್ರರೇ ಪತ್ತೇದಾರಿಗಳಾಗಿ ಇದ್ದರೆ ಮೋಹನನ ಕಾರ್ಯಕ್ಕೆ ಇದು ಅನುಕೂಲವಲ್ಲವೇ?

ರಾಕಾಚಂದ್ರ-ಮೋಹನನಾಗಿದ್ದರೆ ಹೀಗೆ ಅಲ್ಲಲ್ಲಿ ಕೊಲೆಗಳು ನಡೆಯುತ್ತಿದ್ದವೇ?

ರಮೇಶ—ಅದೊಂದು ಉಪಾಯ. ಮೊದಲೇ ಆತನು ಈ ರೀತಿ ಆರಂಭಿಸಿದ್ದರೆ ಭೂಮಿಯ ಮೇಲೆ ಆತನು ಇದು ವರೆಗೆ ಇರಲು ಸಾಧ್ಯವಿರುತ್ತಿರಲಿಲ್ಲ. ಜನಗಳಲ್ಲಿ ಏನೋ ಒಂದು ವಿಧವಾಗಿ ನಂಬಿಕೆಯನ್ನು ಹುಟ್ಟಿಸಲೋಸ್ಕರ ಮೊದಮೊದಲು ತುಂಬಾ ನ್ಯಾಯದರ್ಶಿಯೆಂದು ಹೊಗಳಿಸಿಕೊಂಡು, ಈಗ ಪೋಲೀಸರ ಕಣ್ಣುಕಟ್ಟಲು ಮಿತ್ರರನ್ನು ಪತ್ತೇದಾರಿಗಳನ್ನಾಗಿ ಮಾಡಿ ತಾನು ತನ್ನ ಕೆಲಸಗಳನ್ನು ನಡೆಸುತ್ತಿರುವನು. ಆತನು ಕಳ್ಳ

ತನವನ್ನು ಬಿಟ್ಟಿದ್ದರೆ ಮಿತ್ರರಂತೆ ತಾನೂ ಉದ್ಯೋಗಕ್ಕೆ ಯಾಕೆ ಸೇರಬಾರದಾಗಿತ್ತು? ಇದರಿಂದಲೇ ಆತನು ಕಳ್ಳನೆಂದು ತಿಳಿಯುವದಿಲ್ಲವೆ? ನಿಮ್ಮ ಶಿಫಾರಸಿನಿಂದ ಪಾಪ ಸರ್ಕಾರದವರ ಕಣ್ಣೂ ಕಟ್ಟಲ್ಪಟ್ಟಿತು. ಬೇರೆ ಯಾರಿಂದಲಾದರೂ ಇಂತಹ, ಇಷ್ಟು ಚಾತುರ್ಯದ ಕಾರ್ಯವನ್ನು ನಡೆಸಲು ಸಾಧ್ಯವಾದೀತೇ?

ರಾಕಾಚಂದ್ರ—ಹೌದು ನಾವು ಮೋಸಹೊಂದಿದಂತೆ ತೋರುತ್ತಿದೆ. ನೀವಿದನ್ನು ಮನಸ್ಸಿನಲ್ಲಿಯೇ ಇಟ್ಟುಕೊಳ್ಳದೆ ಮೇಲಧಿಕಾರಿಗಳಿಗೆ ತಿಳಿಸಬಹುದಲ್ಲವೆ?

ರಮೇಶ:—ತಿಳಿಸಿದೆನು. "ಮುಂದಿನ ಕಾರ್ಯವನ್ನು ಜರುಗಿಸು" ಎಂದು ಉತ್ತರವೂ ಬಂದಿದೆ. ನೀವೂ ಸ್ವಲ್ಪ ಇದರಲ್ಲಿ ಪ್ರಯತ್ನಿಸಬೇಕು.

ರಾಕಾಚಂದ್ರ—ಆಗಲಿ. ಜಯಲಕ್ಷ್ಮಿಯು ನಿಮ್ಮ ಕಂಠಕ್ಕೆ ಮಾಲಿಕೆಯನ್ನು ಹಾಕುವಳು. ನೀವು ಸರಿಯಾದ ಕೀರ್ತಿಗೆ ಪಾತ್ರರಾದಿರಿ. ನಾನೀಗ ಹೋಗಿ ಬರುತ್ತೇನೆ. ಎಂದು ಹೇಳಿ ರಾಕಾಚಂದ್ರನು ಅಲ್ಲಿಂದ ಹೊರಟು ಸುವರ್ಣನಗರಕ್ಕೆ ಹೋಗಿ, ಮಾರನೇ ದಿನ ವೇಷಾಂತರದಿಂದ ತಿರುಗಿ ರಜತದಲ್ಲಿ ಗುಪ್ತನಾಗಿ ತಿರುಗುತ್ತಿದ್ದ ಮೋಹನನ ಮನೆಗೆ ಬಂದನು. ರಮೇಶನೊಡನೆ ಆದ ಸಂಭಾಷಣೆಯನ್ನು ಮೋಹನನ ಹತ್ತಿರ ವಿವರಿಸಿದನು.

ಮೋಹನನು ಹೇಳಿದನು: "ರಮೇಶನು ತನ್ನ ಕೌಶಲ್ಯವನ್ನು ಸ್ವಲ್ಪ ತೋರಿಸಿದನು. ನೀನೊಬ್ಬನು ಉದಾಸೀನನಾದರೆ ತನ್ನ ಕಾರ್ಯವು ಸಾಗಿಹೋಗುವದೆಂದು ರಮೇಶನ ಅಭಿಪ್ರಾಯವಿರಬಹುದು. ನಾವೆಲ್ಲರೂ ಕಳ್ಳರೆಂದ ಮೇಲೆ ಇನ್ನುಳಿದ ಯಾರ ಚಿಂತೆಯು ಅವನಿಗಿರುವದು? ಪಾಪ, ಕುಶಲತೆಯನ್ನು ತೋರಿಸಲಿ. ಎಲ್ಲಿಗೆ ಹೋಗುವನೋ ನೋಡೋಣ"

ರಮೇಶನ ಮನೆಗೆ ಮತ್ತು ಆತನ ಮಿತ್ರರಾದ ಪೋಲೀಸ ಇನ್ಸಪೆಕ್ಟರರ ಮನೆಗೆ ಹೊಸಬರಾರಾದರೂ ಬಂದು ಹೋಗುವರೊ ಎಂಬುದನ್ನು ಹೊಂಚು ಹಾಕಿ ನೋಡುತ್ತಿರುವದು ಮೋಹನ ಮತ್ತು ಆತನ ಮಿತ್ರರ ಈಗಿನ ಕೆಲಸವಾಗಿತ್ತು. ಬುಧವಾರ ಸಾಯಂಕಾಲ ಇನ್ಸಪೆಕ್ಟರರ ಮನೆಯನ್ನು ಪರೀಕ್ಷಿಸಲು ಹೋಗಿದ್ದ ಪ್ರಿಯನಾಥನು ಆ ದಿನ ಬಿಡಾರಕ್ಕೆ ಹಿಂದಿರುಗಿ

ಬರಲಿಲ್ಲ. ಯಾರನ್ನಾದರೂ ಬೆನ್ನಟ್ಟಿ ಹೋಗಿರಬಹುದೆಂದು ಮೋಹನನು ಊಹಿಸಿದನು.

ಗುರುವಾರ ಪ್ರಾತಃಕಾಲ ರಮೇಶನ ಮನೆಯಿಂದ ಒಬ್ಬ ಮಾರ್ವಾಡಿಯು ಹೊರಟು ರೈಲ್ವೆಸ್ಟೇಷನ್ ಕಡೆಗೆ ಹೋಗುತ್ತಿರುವದನ್ನು ಅಲ್ಲಿ ಹೊಂಚು ಹಾಕುತ್ತಿದ್ದ ಮೋಹನನು ನೋಡಿ ಸಂದೇಹಪಟ್ಟನು. ಹಿಂದೆ ನೋಡಿದ್ದ ರಘುವಿದ್ದರೂ ಇರಬಹುದೆಂಬ ಸಂದೇಹವು ಮೋಹನನಿಗುಂಟಾಗಿ ಸಂಪೂರ್ಣ ನಿಶ್ಚಯ ಮಾಡಿಯೇ ಹಿಂದಿರುಗಬೇಕೆಂದು ಯೋಚಿಸಿ, ಮೋಹನನು ಆತನನ್ನು ಹಿಂಬಾಲಿಸಿದನು. ಮಾರ್ವಾಡಿಯು ನೆಟ್ಟಗೆ ರೈಲ್ವೆ ಸ್ಟೇಶನ್ನಿಗೆ ಹೋದನು. ಅಲ್ಲಿ ಅಹೀಮತಿ ಎಂಬಲ್ಲಿಗೆ ಹೊರಡಲು ರೈಲು ಸಿದ್ಧವಾಗಿ ನಿಂತಿತ್ತು. ಮಾರ್ವಾಡಿಯು ಒಂದು ಟಿಕೇಟನ್ನು ಪಡೆದುಕೊಂಡು ಥರ್ಡಕ್ಲಾಸಿನ ಗಾಡಿಯೊಂದರಲ್ಲಿ ಹೋಗಿ ಕುಳಿತುದನ್ನು ಮೋಹನನು ಕಂಡು ತಾನೂ ಟಿಕೇಟನ್ನು ತೆಗೆದುಕೊಳ್ಳಲು ಹೋದನು. ಮಾರ್ವಾಡಿಯು ಎಲ್ಲಿಗೆ ಟಿಕೇಟನ್ನು ಮಾಡಿರುವನೆಂದು ತಿಳಿಯದೆ ಇದ್ದರೂ ಅಹೀಮತಿಯ ವರೆಗೆ ರೈಲ್ವೆಯು ಒಂದೇ ಆದುದರಿಂದ ಅಹೀಮತಿಗೆ ಟಿಕೇಟನ್ನು ಪಡೆದು ಬಿಟ್ಟರೆ ಯಾವ ತೊಂದರೆಯೂ ಇಲ್ಲವೆಂದು ಭಾವಿಸಿ ಮೋಹನನು ಅಹೀಮತಿಗೆ ಥರ್ಡಕ್ಲಾಸಿನ ಟಿಕೇಟೊಂದನ್ನು ತೆಗೆದುಕೊಂಡು ಮಾರ್ವಾಡಿಯು ಕುಳಿತ ಬಂಡಿಯ ಹಿಂದಿನ ಬಂಡಿಯಲ್ಲಿ ಕುಳಿತುಕೊಂಡು ಮಾರ್ವಾಡಿಯ ಮೇಲೆ ತೀಕ್ಷ್ಣವಾದ ದೃಷ್ಟಿಯನ್ನಿಟ್ಟು ಕಾಯುತ್ತಿದ್ದನು.

ಸಕಾಲದಲ್ಲಿ ರೈಲ್ವೆಯು ಕೇಕೆ ಹಾಕಿ ಅಲ್ಲಿಂದ ಹೊರಟಿತು. ಮಧ್ಯಾಹ್ನ ಹತ್ತುಗಂಟೆಯ ಸಮಯಕ್ಕೆ ಸರಿಯಾಗಿ ಸದಾಮ ಎಂಬುದೊಂದು ಸ್ಟೇಷನ್ನಿಗೆ ರೈಲ್ವೆಯು ಹೋಗಿ ನಿಂತಿತು. ಮೆಲ್ಲಗೆ ಜನರ ಗುಂಪಿನೊಳಗೆ ಮಾರ್ವಾಡಿಯು ಇಳಿಯುತ್ತಿದ್ದುದನ್ನು ನೋಡಿ ಮೋಹನನು ತಾನೂ ಇಳಿದು ಹಿಂಬಾಲಿಸಿದನು. ಮೋಹನನ ಈಗಿನ ವೇಷವು ಶೆಟ್ಟಿಯದಾಗಿತ್ತು. ಮಾರ್ವಾಡಿಯು ಸ್ಟೇಷನ್ನಿನಿಂದ ಹೊರಗೆ ನಡೆದು ಅಲ್ಲಿ ಹೊರಡಲು ಸಿದ್ಧವಾಗಿ ನಿಂತಿದ್ದ ಮೋಟಾರನ್ನು ಹತ್ತಿ ಸಪ್ತತಿ ಎಂಬಲ್ಲಿಗೆ ಟಿಕೇಟನ್ನು ತೆಗೆದುಕೊಂಡನು. ಮೋಹನನು ಅದನ್ನು ನಿರೀಕ್ಷಿಸುತಲಿದ್ದನು. ಸಪ್ತತಿಯು

ರೈಲ್ವೆ ಸ್ಟೇಷನ್ನಾಗಿದ್ದು ಸದಾಮುದಿಂದ ಹತ್ತೇ ಮೈಲಿ ದೂರದಲ್ಲಿ ಇದ್ದರೂ ಈಗ ಬಂದಿರುವ ರೈಲಿನಲ್ಲಿಯೇ ಅಲ್ಲಿಗೆ ಹೋಗಬಹುದಾಗಿದ್ದರೂ ರೈಲಿನಲ್ಲಿ ಹೋಗದೆ ಮೋಟಾರಿನಿಂದ ಅಲ್ಲಿಗೆ ಹೋಗಲು ಐಚ್ಛಿಸಿರುವದನ್ನು ನೋಡಿ ಮೋಹನನು: "ಇದು ಮಾರ್ವಾಡಿಯ ಕೌಶಲ್ಯ" ಎಂದು ಭಾವಿಸಿಕೊಂಡು ತಾನು ಸಪ್ತತಿಯ ಮುಂದಿನಊರಿಗೆ ಟಿಕೇಟನ್ನು ಕೇಳಿ ತೆಗೆದುಕೊಂಡು ಮೋಟಾರಿನ ಒಂದು ಭಾಗದಲ್ಲಿ ಮೆಲ್ಲಿಗೆ ಕುಳಿತನು. ಮೋಟಾರು ಅಲ್ಲಿಂದ ಹೊರಟು ಹನ್ನೊಂದು ಗಂಟೆಯ ಹೊತ್ತಿಗೆ ಸಪ್ತತಿ ಎಂಬ ಊರಿಗೆ ಹೋಯಿತು. ಮಾರ್ವಾಡಿಯು ಮೋಟಾರಿನಿಂದಿಳಿದು ಜಟಕಾಬಂಡಿಯೊಂದನ್ನು ಗೊತ್ತುಮಾಡಿ ಅದರಲ್ಲಿ ಕುಳಿತು ಅಲ್ಲಿಂದ ಮುಂದಕ್ಕೆ ಹೊರಟನು. ಮೋಹನನು ಡ್ರೈವರನ ಹತ್ತಿರ: "ನನಗೆ ಈ ಊರಿನಲ್ಲಿ ಸ್ವಲ್ಪ ಕೆಲಸವಿದೆ ಮೋಟಾರು ಮುಂದೆ ಹೋಗಲಿ" ಎಂದು ಹೇಳಿ ಮೋಟಾರಿನಿಂದ ಇಳಿದನು. ಮೋಹನನು ಸಾಧಾರಣವಾದ ಉಡುಪಿನವನಿದ್ದದರಿಂದ ಬಂಡಿಯವರಲ್ಲಿ ಮೋಹನನನ್ನು ಯಾರೂ ತ್ವರೆ ಮಾಡಲು ಹತ್ತಿರ ಬರಲಿಲ್ಲ. ಮೋಹನನೇ ಮುಂದೆ ಹೋಗಿ ಒಬ್ಬ ಜಟಕಾಬಂಡಿಯವನನ್ನು ಕರೆದು ಮಾರ್ವಾಡಿಯು ಕುಳಿತಿದ್ದ ಬಂಡಿಯನ್ನು ತೋರಿಸಿ, ಮೆಲ್ಲನೆ ಕೇಳಿದನು: "ಆ ಬಂಡಿಯಲ್ಲಿರುವ ರಾಯರ ಗುರುತು ನಿನಗಿರುವುದೆ?"

ಬಂಡಿಯ ಆಳು—ಗುರುತಿಲ್ಲದೆ ಏನು? ಅವರನ್ನೆಷ್ಟೋ ಬಾರಿ ಇಲ್ಲಿ ನೋಡಿರುವೆನು. ಇಲ್ಲಿಗೆ ಆರು ಮೈಲು ದೂರವಿರುವ ಹಳ್ಳಿಯೊಂದರಲ್ಲಿ ಇವರ ಜಮೀನು ಇರುವದಂತೆ. ಅದನ್ನು ನೋಡಿ ಹೋಗಲು ಆಗಾಗ್ಗೆ ಬರುತ್ತಿರುವರು.

ಮೋಹನ—ನನಗೆ ಅವರ ಹತ್ತಿರ ಸ್ವಲ್ಪ ಕಾರ್ಯವಿದೆ. ನಿನ್ನ ಗಾಡಿಯನ್ನು ಆ ಗಾಡಿಯ ಹಿಂದೆ ಹೋಗುವಂತೆ ಬಿಡು" ಎಂದು ನುಡಿದು, ಆತನ ಗಾಡಿಯನ್ನು ಹತ್ತಿದನು. ಮಾರ್ವಾಡಿಯ ಗಾಡಿಯನ್ನನುಸರಿಸಿ ಮೋಹನನ ಗಾಡಿಯು ಹೊರಟಿತು. ಆ ಗಾಡಿಗೂ ಈ ಗಾಡಿಗೂ ಒಂದು ಫರ್ಲಾಂಗ್ ವ್ಯವಧಾನವಿದ್ದಿತು. ನಾಲ್ಕು ಮೈಲು ದೂರ ಕಳೆದೊಡನೆ ಅಲ್ಲಿ ಒಂದು ಚಿಕ್ಕ ಗ್ರಾಮವಿದ್ದು ಅಲ್ಲಿಂದ ಮುಂದೆ ರಸ್ತೆಯು ಇರಲಿಲ್ಲ. ಮಾರ್ವಾಡಿಯು ಆ

ಸ್ಥಳದಲ್ಲಿ ಗಾಡಿಯಿಂದಿಳಿದು ಕಾಲುದಾರಿಯೊಂದರಿಂದ ತನ್ನ ಹಳ್ಳಿಯ ಕಡೆಗೆ ಹೊರಟನು. ಮೋಹನನು ಅದನ್ನು ನೋಡಿ ತನ್ನ ಬಂಡಿಯನ್ನು ಅಲ್ಲಿಯೆ ನಿಲ್ಲಿಸಲು ಹೇಳಿ ಬಾಡಿಗೆಯನ್ನು ಕೊಟ್ಟು ಗಾಡಿಯಿಂದಿಳಿದು ಮೆಲ್ಲಮೆಲ್ಲನೆ ಮಾರ್ವಾಡಿಯನ್ನು ಹಿಂಬಾಲಿಸಿ ನಡೆದನು. ಒಂದು ಮೈಲು ದೂರದ ವರೆಗೆ ಬೈಲುದಾರಿಯಾಗಿದ್ದಿತು. ಅನಂತರ ಒಂದು ಮೈಲು ದೂರ ಕಾಡುದಾರಿ. ಕಾಡುದಾರಿಯು ಸಮೀಪಿಸಿದೊಡನೆ ಮೋಹನನು ದಾರಿಯನ್ನು ಬಿಟ್ಟು ಕಾಡಿನ ಮಧ್ಯದಲ್ಲಿಯೇ ಹೋಗುತ್ತಾ ಮಾರ್ವಾಡಿಯನ್ನು ಹಿಂಬಾಲಿಸಿದನು. ಮಾರ್ವಾಡಿಯು ಕಾಡನ್ನು ಕಳೆದು ಬೈಲುಪ್ರದೇಶಕ್ಕೆ ಇಳಿದನು. ಅದು ಒಂದು ಸಣ್ಣ ಗ್ರಾಮವಾಗಿದ್ದು ದೂರದಲ್ಲಿ ಕೆಲವು ಮನೆಗಳು ಕಾಣಿಸುತ್ತಿದ್ದವು. ಮಾರ್ವಾಡಿಯು ಸ್ವಲ್ಪದೂರ ಹೋಗುತ್ತಿರಲು ಆತನಿಗೆ ಅಭಿಮುಖನಾಗಿ ಪುರುಷನೊಬ್ಬನು ಬರುತ್ತಿದ್ದನು. ಮೋಹನನು ಆತನನ್ನು ನೋಡಿ "ಹಿಂದೆ ರಘುವಿನೊಡನೆ ಸೇರಿ ಕೆಲಸದಿಂದ ನಿವೃತ್ತನಾದ ಇನ್‌ಸ್ಪೆಕ್ಟರ್ ಸುಖೇಶನೇ ಈತನು" ಎಂದುಕೊಂಡು ತಾನು ಮುಂದೇನಾಗುವುದೆಂಬುದನ್ನು ನೋಡಲು ಬೈಲಿಗಿಳಿಯದೆ ಮರಗಳ ಮರೆಯಲ್ಲಿಯೇ ನಿಂತನು. ಸುಖೇಶನು ದೂರದಿಂದಲೇ ಮಾರ್ವಾಡಿಯನ್ನು ಕುರಿತು ಗಟ್ಟಿಯಾಗಿ ಕೇಳಿದನು. "ರಘೋ! ನಿನ್ನನ್ನು ಪಟ್ಟಣದಿಂದಲೇ ಯಾರೋ ಬೆನ್ನಟ್ಟಿ ಬಂಡಿಯಿಂದ ಬಂದಿರುವರೆಂದು ಈಗ ತಾನೇ ನಮ್ಮವನೊಬ್ಬನು ಬಂದು ಹೇಳಿದನು. ಅದನ್ನು ತಿಳಿದು ಆತನು ಇತ್ತಕಡೆಗೆ ಬಂದರೆ ಒಡನೆ ಹೊಡೆದು ಹಾಕಲು ಹತ್ತು ಜನರನ್ನು ಸಿದ್ಧಪಡಿಸಿರುವೆನು." ಸುಖೇಶನ ಮಾತು ಮುಗಿಯುವದರೊಳಗೆ ಕಾಡಿನೊಳಗಿಂದ ಒಂದು ಗುಂಡು ಹೊರಟು ಸುಖೇಶನ ಮುಖದ ಹತ್ತಿರವೇ ಸುಯ್‌ಗುಟ್ಟುತ್ತಾ ಹೊರಟು ಹೋಯಿತು. ಇಬ್ಬರೂ ಚಕಿತರಾದರು.

ಒಡನೆ ಸುಖೇಶನು ಕೊಳಲೊಂದನ್ನು ತೆಗೆದು ಊದಿದನು. ಹತ್ತು ಜನರು ಸುಖೇಶನಿದ್ದೆಡೆಗೆ ಓಡಿ ಬಂದರು. ಕೂಡಲೆ ಎಲ್ಲರೂ ಗುಂಡು ಬಂದಿರುವ ದಿಕ್ಕನ್ನು ಹಿಡಿದು ಓಡಿದರು. ಇವರು ಕಾಡನ್ನು ಸೇರುವದರೊಳಗೆ ಮೋಹನನ ಇನ್ನೊಂದು ಗುಂಡು ಬಂದು ಸೇವಕನೊ

ಬ್ಬನ ಕಾಲಿಗೆ ತಗಲಿ ಸೇವಕನು ಭೂಶಾಯಿಯಾದನು. ಕೂಡಲೆ ಮಾರ್ವಾಡಿ ವೇಷಧಾರಿಯಾದ ರಘುವು ಹೇಳಿದನು: "ನಾವೆಲ್ಲರೂ ಏಕಕಾಲದಲ್ಲಿ ಕಾಡಿನ ಕಡೆಗೆ ಗುಂಡನ್ನು ಹೊಡೆಯೋಣ" ಒಡನೆ ಹನ್ನೊಂದು ಗುಂಡು ಗಳು ಕಾಡೊಳಗೆ ಪ್ರವೇಶಿಸಿದವು. ಮೋಹನನು ಮರದ ಅಡ್ಡ ನಿಂತು ಹನ್ನೊಂದು ಗುಂಡುಗಳನ್ನೂ ವ್ಯರ್ಥಪಡಿಸಿ ಕಾಲುದಾರಿಗೆ ಹೋಗಿ ಅಲ್ಲಿ ನಿಂತು: ''ಲೇ ಕತ್ತೆಗಳಿರಾ ಬನ್ನಿ" ಎಂದು ಕೂಗಿ ಹೇಳಿ ಮುಂದೆ ಓಡಲಾರಂಭಿಸಿದನು. ಮೋಹನನನ್ನು ನೋಡಿ "ಇನ್ನೇನು ಸಿಕ್ಕಿದ ಕಳ್ಳ" ಎನ್ನುತ್ತಾ ಎಲ್ಲರೂ ಮೋಹನನನ್ನು ಹಿಂಬಾಲಿಸಿ ಓಡಿದರು, ಮೋಹನನು ಸ್ವಲ್ಪ ದೂರ ಮಾತ್ರ ಕಾಲುದಾರಿಯಲ್ಲಿ ಓಡಿ ಆ ಮೇಲೆ ಕಾಡಿನೊಳಗೆ ಓಡ ಲಾರಂಭಿಸಿದನು. ಮೋಹನನು ಕಾಡನ್ನು ಹೊಕ್ಕುದನ್ನು ನೋಡಿ ರಘುವು ಸಂತೋಷಪಟ್ಟನು. ಕಾಡಿನ ಪರಿಚಯವು ತನ್ನವರಿಗಿದ್ದಂತೆ ಇನ್ನಾರಿಗೂ ಇಲ್ಲವೆಂದು ಅಭಿಮಾನ ಪಡುತ್ತಿದ್ದನು. ಆತನ ಕಡೆಯ ಜನಗಳೂ ಅದೇ ಅಭಿಮಾನವನ್ನು ತಾಳಿದ್ದರು; ಆದರೆ ಅಲ್ಲಿಯೂ ಮೋಹನನು ಅವರ ಕೈಗೆ ಸಿಗಲಿಲ್ಲ. ಕಾಡಿನಿಂದ ಹೊರಗೆ ಹೋಗದೆ ಕಾಡಿನ ಮಧ್ಯದಲ್ಲಿಯೇ ಆಚೆ ಈಚೆ ಮೋಹನನು ಆ ಜನಗಳನ್ನು ಸುತ್ತಿಸಿ ಪೀಡಿಸುತ್ತಿದ್ದನು. ಸುಖೇಶ, ಇನ್ನಿಬ್ಬರನ್ನು ಬಿಟ್ಟು, ಉಳಿದವರು ಓಡಿ ಓಡಿ ಬಿಸಿಲಿನ ತಾಪಂದಿದ ಬಸ ವಳಿದು ಅಲ್ಲಲ್ಲಿಯೇ ನಿಂತುಬಿಟ್ಟರು. ಮೋಹನನು ತನ್ನನ್ನು ಹಿಂಬಾಲಿಸಿ ಮೂರೇ ಜನರು ಬರುತ್ತಿದ್ದುದನ್ನು ಕಂಡು, ಇನ್ನು ಓಡಬೇಕಾದ ಆವಶ್ಯ ಕತೆಯಿಲ್ಲವೆಂದು ತಿಳಿದು ನಿಂತು ಬಿಟ್ಟನು. ಸುಖೇಶನು "ಇನ್ನು ಕಳ್ಳನು ಸಿಕ್ಕಿದನು" ಎಂದುಕೊಂಡು ವೇಗವಾಗಿ ಬಂದನು. ಒಡನೆ ಗುರಿಯಿಟ್ಟು ಮೋಹನನು ಗುಂಡನ್ನು ಹಾರಿಸಿದನು. ಸುಖೇಶನು ಗುಂಡಿನೇಟಿನಿಂದ ಭೂಶಾಯಿಯಾದನು, ಉಳಿದಿಬ್ಬರು ಪ್ರಾಣದ ಭಯದಿಂದ ಅಲ್ಲಿ ನಿಲ್ಲದೆ ಪರಾರಿಯಾದರು. ಸುಖೇಶನು ಬಿದ್ದು ಹೋದ ಸಮಾಚಾರವನ್ನು ತಿಳಿದೊ ಡನೆ ರಘುವು ಅಲ್ಲಿಂದಲೇ ಪರಾರಿಯಾದನು. "ಇನ್ನು ಯಾರೂ ತನ್ನನ್ನು ಹಿಂಬಾಲಿಸಲು ಬರುವವರಿಲ್ಲ'' ಎಂದು ತಿಳಿದು ಮೋಹನನು ಅಲ್ಲಿಂದ ಹೊರಟು ಗ್ರಾಮವನ್ನು ಪ್ರವೇಶಿಸಿದನು. ಗ್ರಾಮಸ್ಥರೆಲ್ಲರನ್ನೂ ನಡೆದ

ವಿಚಾರವನ್ನೂ ತಿಳಿಸಿ ಬೆದರಿಸಿದನು. ಎಲ್ಲರೂ ತಮ್ಮನ್ನು ಕಾಪಾಡಬೇಕೆಂದೂ, ಇನ್ನು ಮುಂದೆ ಇಂತಹ ಮೋಸದ ಬಲೆಗೆ ಸಿಲುಕುವದಿಲ್ಲವೆಂದೂ ಬೇಡಿಕೊಂಡರು. ಮೋಹನನು ಅವರಲ್ಲೊಬ್ಬನನ್ನು ವಿಚಾರಿಸಿದನು.

ಮೋಹನ—ರಘು, ಸುಖೇಶರು ನಿಮಗೆ ಪರಿಚಯುವಾದದು ಹೇಗೆ?

ಗ್ರಾಮಸ್ಥ—ಅವರ ಹೆಸರು ನೀವು ಹೇಳಿದಂತೆ ನಮಗೆ ತಿಳಿದಿಲ್ಲ. ಈಗ ಪರಾರಿಯಾದವನ ಹೆಸರು ಸುಂದರನೆಂತಲೂ, ಗುಂಡು ತಾಗಿದ ಪುರುಷನ ಹೆಸರು ಸುಬೋಧನೆಂತಲೂ ನಾವು ಕೇಳಿದ್ದೆವು.

ಮೋಹನ—ಹಾಗಾದರೆ ಅವರೀಗ ಹೆಸರನ್ನೂ ಅಲ್ಲಲ್ಲಿ ಮಾರ್ಪಡಿಸಿರುವರೆಂದು ತೋರುತ್ತದೆ.

ಗ್ರಾಮಸ್ಥ—ಒಂದು ತಿಂಗಳಿನ ಹಿಂದೆ ಅವರಿಬ್ಬರು ಇಲ್ಲಿಗೆ ಬಂದು ದ್ರವ್ಯದ ಆಶೆಯನ್ನು ಹುಟ್ಟಿಸಿ ನಮ್ಮನ್ನೀ ಕೆಲಸದಲ್ಲಿ ನಿಯೋಜಿಸಿದರು. ಇಲ್ಲಿಗೆ ಹತ್ತಿರವಿರುವ ಊರುಗಳಲ್ಲಿ ಸುಲಿಗೆಯನ್ನು ಮಾಡಲು ನಮ್ಮನ್ನು ಕಳುಹಿಸಿಕೊಡುತ್ತಿದ್ದರು.

ಮೋಹನ—ಒಂದೇ ದಿನದಲ್ಲಿ ಎರಡು ಮೂರು ಕಡೆಗಳಲ್ಲಿ ಕಳವುಗಳು ನಡೆಯುತ್ತಿರುವದು ಹೇಗೆ?

ಗ್ರಾಮಸ್ಥ—ಅಲ್ಲಲ್ಲಿ ಇದೇ ರೀತಿಯಾಗಿ ಗ್ರಾಮದವರನ್ನು ದುಡ್ಡಿನ ಆಶೆಯಿಂದ ತಮ್ಮ ತಮ್ಮ ಕಡೆಗೆ ಅವರು ಸೇರಿಸಿಕೊಂಡಿರುವರೆಂದು ನಾವು ಕೇಳಿರುವೆವು. ಎಲ್ಲಾ ಕಡೆಗಳಲ್ಲಿಯೂ ಅವರಿಗೆ ಈ ರೀತಿಯಾಗಿಯೇ ವಸತಿಗಳು ಇರಬಹುದು.

ಮೋಹನ—ರಜತದಲ್ಲಿ ಅವರ ಪಂಗಡದವರಾರಾದರೂ ಇರುವರೇ?

ಗ್ರಾಮಸ್ಥ—ಅದು ತಿಳಿಯದು. ಈ ಗ್ರಾಮದವರ ಹತ್ತಿರ ಇಲ್ಲಿನ ವಿಚಾರವಲ್ಲದೆ ಬೇರೆ ಯಾವ ವಿಷಯವನ್ನೂ ಅವರು ಹೇಳಲಿಲ್ಲ. ಅದು ಗುಪ್ತವಾಗಿದೆ.

ಮೋಹನ—ಸುಖೇಶನು ಮರಣಾವಸ್ಥೆಯಲ್ಲಿ ಇರುವನು ಆತನನ್ನು ಇಲ್ಲಿಗೆ ತಂದು ಉಪಚರಿಸಿರಿ. ಜೀವವು ಉಳಿದರೆ ಸೆರೆಯಲ್ಲಿಟ್ಟು ಪೋಲೀಸರ ವಶಕ್ಕೆ ಒಪ್ಪಿಸಿರಿ. ಇನ್ನಾದರೂ ನೀವು ಜಾಗರೂಕರಾಗಿರಿ. ಇದು ವರೆಗೆ

ನಿಮಗೆ ರಘುವಿನಿಂದ ಬಂದಿರುವ ಹಣವನ್ನು ನಿಮ್ಮಿಂದ ತೊಂದರೆಯನ್ನು ಹೊಂದಿದವರ ಮನೆಗಳಿಗೆ ತಲ್ಪಿಸಿ ಪಾಪಕರ್ಮದಿಂದ ನಿವೃತ್ತಿಯನ್ನು ಹೊಂದಿರಿ ನಾನು ಇನ್ನೊಂದು ಬಾರಿ ಇಲ್ಲಿಗೆ ಬರುವೆನು. ಆಗ ನಿಮ್ಮ ಸ್ಥಿತಿಯು ಸರಿಯಾಗಿ ನನ್ನ ಮನಸ್ಸಿಗೆ ತೋರದೆ ಇದ್ದರೆ ಈ ಗ್ರಾಮದವ ರೆಲ್ಲರನ್ನೂ ಇದುವರೆಗೆ ಮಾಡಿದ ತಪ್ಪಿಗಾಗಿ ಪೋಲೀಸರ ಅಧೀನರನ್ನಾಗಿ ಮಾಡಿಬಿಡುವೆನು. ಎಚ್ಚರ ಹೊಂದಿ ಇರುತ್ತಿರ್ರಿ, ಎಂದು ಹೇಳಿ ಮೋಹ ನನು ಅಲ್ಲಿಂದ ಹೊರಟು ರಜತಕ್ಕೆ ಹೋದನು. ಅಷ್ಟರಲ್ಲಿ ಪ್ರಿಯನಾಥನು ಅಲ್ಲಿಗೆ ಬಂದಿದ್ದನು. ಪ್ರಿಯನಾಥನು ತನ್ನ ಕಥೆಯನ್ನು ವಿವರಿಸಿದನು: "ನಾನು ಇನ್‌ಸ್ಪೆಕ್ಟರರನ್ನು ಪರೀಕ್ಷಿಸಲು ಹೋಗಿದ್ದಾಗ ಅವರ ಮನೆಯ ಮುಂದೆ ಒಂದು ಜಟಕಾ ಬಂಡಿಯು ಹೊರಡಲು ಸಿದ್ಧವಾಗಿ ನಿಂತಿತ್ತು. ಗಾಡಿಯುವನ ಹತ್ತಿರ: 'ಇದೀಗ ಎಲ್ಲಿಗೆ ಹೊರಡುವುದು!' ಎಂದು ಕೇಳಿದೆನು. "ರೈಲ್ವೆಸ್ಟೇಷನ್ನಿಗೆ" ಎಂದು ಆತನು ಹೇಳಿದುದನ್ನು ಕೇಳಿ ಅಲ್ಲಿಯೇ ಸ್ವಲ್ಪ ದೂರದಲ್ಲಿ ನಿಂತಿದ್ದೆನು. ಸ್ವಲ್ಪಹೊತ್ತಿನ ಮೇಲೆ ಇಲ್ಲಿನ ಪೋಲೀಸ್ ಇನ್‌ಸ್ಪೆ ಕ್ಟರರೂ, ನಮ್ಮ ಪೂರ್ವ ಪರಿಚಿತನಾದ ಸುಖೇಶನೂ ಸಂಭಾಷಿಸುತ್ತಾ ಹೊರಗೆ ಬಂದರು. ಸುಖೇಶನು ಜಟಕಾಬಂಡಿಯನ್ನು ಹತ್ತಿದನು. ಗಾಡಿಯು ಸ್ಟೇಷನ್ನಿಗೆ ಅಭಿಮುಖವಾಗಿ ಹೊರಟು ಹೋಯಿತು. ಪ್ರಯತ್ನಪಟ್ಟು ಆತ ನನ್ನು ಅಲ್ಲಿಯೇ ಹಿಡಿಯಬಹುದಾಗಿದ್ದರೂ ಆತನ ವಸತಿಯನ್ನು ಕಂಡು ಹಿಡಿಯುವ ಉದ್ದೇಶದಿಂದ ಆಗ ಹಿಡಿಯುವ ಯತ್ನವನ್ನು ಮಾಡದೆ ಆತ ನನ್ನು ಹಿಂಬಾಲಿಸುವ ಉದ್ಯೋಗದಲ್ಲುದ್ಯುಕ್ತನಾದೆನು. ಸ್ವಲ್ಪ ದೂರದ ವರೆಗೆ ನಾನು ಆ ಬಂಡಿಯನ್ನು ಹಿಂದಿನಿಂದ ಅನುಸರಿಸುತ್ತಿರಲು ದೈವ ಯೋಗದಿಂದ ಒಂದು ಜಟಕಾಬಂಡಿಯು ಶೂನ್ಯವಾಗಿ ಬರುತ್ತಿರುವದನ್ನು ನೋಡಿದೆನು. ಗಾಡಿಯುವನನ್ನು ಕುರಿತು ಗಾಡಿಯನ್ನು ರೈಲ್ವೆಸ್ಟೇಷನ್ನಿಗೆ ಬಿಡಲು ಹೇಳಿ ನಾನು ಗಾಡಿಯನ್ನು ಹತ್ತಿದೆನು. ಸ್ಟೇಷನ್ನನ್ನು ಮುಟ್ಟಿ ದೆನು. ಸುಖೇಶನು ಎಲ್ಲಿಗೆ ಟಿಕೇಟನ್ನು ತೆಗೆದಿರುವನೆಂದು ತಿಳಿಯದೆ ಅಹೀಮತಿಗೆ ಟಿಕೇಟನ್ನು ತೆಗೆದುಕೊಂಡೆನು. ಸುಖೇಶನು ಸೆಕಂಡ್‌ಕ್ಲಾ ಸಿನ ಗಾಡಿಯೊಂದರಲ್ಲಿ ಕುಳಿತಿದ್ದುದನ್ನು ನೋಡಿ ಆ ಬಂಡಿಯ ಹಿಂದಿನ

ಬಂಡಿಯಲ್ಲಿ ಕುಳಿತು "ಆತನು ಎಲ್ಲಿ ಇಳಿಯುವನು" ಎಂಬುದನ್ನು ಹೊಂಚು ಹಾಕಿ ನೋಡುತಲಿದ್ದೆನು. ರೈಲು ಅಲ್ಲಿಂದ ಹೊರಟು ಸಪ್ತಾತಿ ಎಂಬ ಸ್ಟೇಷನ್ನಿನಲ್ಲಿ ಹೋಗಿ ನಿಂತಿತು. ಸ್ವಲ್ಪ ಹೊತ್ತು ಅಲ್ಲಿ ನಿಂತು ರೈಲು ಮೆಲ್ಲಗೆ ಅಲ್ಲಿಂದ ಹೊರಟಿತು. ಮೆಲ್ಲನೆ ರೈಲು ಹೋಗುತ್ತಿರುವಾಗಲೇ ಸುಖೇಶನು ರೈಲಿನಿಂದ ಇಳಿದುಬಿಟ್ಟನು. "ನಾನಾಗ ಇಳಿಯದೆ ಹೋದರೆ ಸುಖೇಶನು ತಪ್ಪಿ ಹೋಗುವನು" ಎಂದು ತಿಳಿದು ಒಡನೆ ನಾನೂ ರೈಲಿನಿಂದ ಕೆಳಗೆ ಧುಮುಕಿದೆನು. ಕಾಲಿಗೆ ಏನೋ ತಾಕಿ ಗಾಯವೂ ಆಯಿತು; ಆದರೂ ಅದನ್ನು ಎಣಿಸದೆ ಸುಖೇಶನನ್ನು ಬೆನ್ನಟ್ಟಿದೆನು. ಸ್ಟೇಷನ್ನಿನ ಹೋಟಲಿನೊಳಗೆ ಸುಖೇಶನು ಹೋಗಿ ಕುಳಿತನು. ನಾನೂ ಕಾಫಿ ಕುಡಿಯುವವನಂತೆ ಅಲ್ಲಿ ಹೋಗಿ ಕುಳಿತೆನು. ಸುಖೇಶನು ಕಾಫಿಯನ್ನು ಕುಡಿದು ಒಳಗಡೆ ಹೋದನು. ಎಷ್ಟು ಹೊತ್ತಾದರೂ ಆತನು ಹೊರಗೆ ಬರದೆ ಇದ್ದುದನ್ನು ನೋಡಿ ನಾನೂ ಒಳಗಡೆಗೆ ಹೋದೆನು. ಆತನು ಕಾಣಿಸಲಿಲ್ಲ. ನನ್ನ ಪರಿಚಯವಿಲ್ಲದಿದ್ದರೂ ನನ್ನನ್ನು ನೋಡಿ ಸುಖೇಶನು ಸಂದೇಹಪಟ್ಟು ಒಳಗಿನಿಂದಲೇ ಪರಾರಿಯಾಗಿರಬಹುದೆಂದೂಹಿಸಿದೆನು. ಬೆಳಗಾಗುವ ವರೆಗೆ ಅಲ್ಲಿಯೇ ಹೋಟಲಿನ ಹತ್ತಿರ ಕಾದು ಕುಳಿತಿದ್ದೆನು; ಆದರೂ ಪ್ರಯೋಜನವಾಗಲಿಲ್ಲ. ನಿರಾಶನಾಗಿ ಅಲ್ಲಿಂದ ಹಿಂದಿರುಗಿದೆನು."

ಮೋಹನನು ಪ್ರಿಯನಾಥನ ವೃತ್ತಾಂತವನ್ನು ಕೇಳಿ ಆ ಮೇಲೆ ತನ್ನ ವಿಚಾರವನ್ನು ಹೇಳಿದನು.

ಕೋಮಲೆ—ಈ ವರೆಗೂ ಕೊಲೆಗೆ ಕೈಯಿಕ್ಕದೆ ಇದ್ದು ಈಗ ಮಾತ್ರ ಅದೇನನ್ನು ನಡೆಸಿಬಿಟ್ಟಿರಿ!

ಮೋಹನ—ಮಾಡುವುದೇನು! ಆಗಿ ಹೋಯಿತು. ಆತನ ಪಾಪವು ಅಷ್ಟು ದೊಡ್ಡದಾಗಿಯೇ ಇರಬಹುದು. ಸುಖೇಶನೊಡನೆ ಹಿಂಬಾಲಿಸಲು ಬಂದವರಲ್ಲಿ ಒಬ್ಬನಿಗೆ ಗುಂಡಿನೇಟು ತಾಗಿತ್ತು; ಆದರೆ ಆತನು ಮೃತನಾಗಲಿಲ್ಲ. ಸುಖೇಶನೂ ನಾನು ಬರುವವರೆಗೆ ಮೃತನಾಗಿರಲಿಲ್ಲ. ಜೀವಿಸಿದರೆ ಆತನನ್ನು ಪೋಲೀಸರ ವಶ ಮಾಡುವಂತೆ ಹೇಳಿಬಂದಿರುವೆನು; ಆದರೆ ರಘುವು ಪರಾರಿಯಾಗಿರುವದರಿಂದ ನಮ್ಮ ಕಾರ್ಯವು ಸಂಪೂರ್ಣವಾಗಿ ಆಗಲಿಲ್ಲ. ಇನ್ನೂ ರಘುವಿನ ತೊಂದರೆಯು ತೀರಲಿಲ್ಲ

ರಾಕಾಚಂದ್ರ---ರಘುವು ಇಲ್ಲಿಗೇ ತಟಸ್ಥನಾಗುವನೋ ಅಥವಾ ಮುಂದೆಯೂ ಇದೇ ಮೇರೆಗೆ ತನ್ನ ಕಾರ್ಯವನ್ನು ಸಾಧಿಸುವನೋ?

ಮೋಹನ—ಯಾವುದನ್ನೂ ಈಗ ನಿಶ್ಚಯಿಸುವಂತಿಲ್ಲ. ಈಗ ಒಂದು ಗ್ರಾಮವು ಆತನ ಕೈತಪ್ಪಿದ್ದರೂ ಇನ್ನೆಷ್ಟು ಸ್ಥಳಗಳು ಆತನ ಸ್ವಾಧೀನವಾಗಿ ಇರುವವೂ ತಿಳಿಯಲಸಾಧ್ಯವಾಗಿದೆ. ಯಾವುದಿದ್ದರೂ ಅದು ಮುಂದೆ ತಿಳಿಯುವದು. ಭಯದಿಂದ ಸ್ವಲ್ಪ ಕಾಲದ ವರೆಗೆ ಸುಮ್ಮನೆ ಕುಳಿತುಕೊಳ್ಳಬಹುದು. ಆತನು ಇತ್ತಕಡೆಗೆ ಬರದೆ ರಮೇಶನನ್ನು ಹಣ್ಣಿಗೆ ತರಲು ಸಾಧ್ಯವಿಲ್ಲ. ಆತನೂ ಒಬ್ಬ ಉದ್ಯೋಗಿಯಾಗಿರುವದರಿಂದ ಥಟ್ಟನೆ ಮುಂದೆ ನುಗ್ಗುವಂತಿಲ್ಲ. ಮುಂದೆ ಏನಾಗುವದೆಂಬುವದನ್ನು ನೋಡೋಣ. ಇಲ್ಲಿ ರಮೇಶನ ಮೇಲೆ ಕಣ್ಣಿಟ್ಟಿರಲು, ಲಕ್ಷ್ಮೀಶನು ನಿಲ್ಲುವನು. ನಾವೆಲ್ಲರೂ ನಮ್ಮ ನಮ್ಮ ಸ್ಥಳಕ್ಕೆ ಹೊರಟು ಹೋಗೋಣ. ರಮೇಶನು ನಿನ್ನ ಹತ್ತಿರ ಹೇಳಿದಂತೆ ನನ್ನನ್ನು ಹಿಡಿದು ಸರ್ಕಾರಕ್ಕೆ ಒಪ್ಪಿಸಲು ತಾನಾಗಿಯೇ ಮುಂದುವರಿದು ಬಂದರೆ ಆಗ ಆತನನ್ನು ಪರೀಕ್ಷಿಸೋಣ.

ಮೋಹನನ ಇಚ್ಛೆಯಂತೆ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಮೋಹನನು ಕೋಮಲೆ, ಪ್ರಿಯನಾಥರೊಂದಿಗೆ ಸುಖೇಶನು ಮರಣವನ್ನು ಹೊಂದಿದನೋ, ಅಥವಾ ಜೀವಿಸಿದನೋ ಎಂಬದನ್ನು ತಿಳಿಯಲು ಅತ್ತಕಡೆಗೆ ಹೊರಟನು. ರೈಲನ್ನು ಹತ್ತಿ ಮೂರು ಜನರೂ ಸಪ್ತತಿ ಸ್ಟೇಷನ್ನಿಗೆ ಹೋಗಿ ಅಲ್ಲಿಂದ ಜಟಕಾಬಂಡಿಯೊಂದನ್ನು ಗೊತ್ತು ಮಾಡಿ ಅದರಲ್ಲಿ ಕುಳಿತು ಮುಂದಕ್ಕೆ ಹೊರಟರು. ಬಂಡಿಯು ಸ್ವಲ್ಪ ದೂರ ಮುಂದೆ ಹೋಗುತ್ತಿರಲು ಮೋಹನನ ಬಂಡಿಗೆ ಅಭಿಮುಖವಾಗಿ ಇನ್ನೊಂದು ಜಟಕಾ ಬಂಡಿಯು ಸ್ಟೇಷನ್ನಿಗೆ ಹೋಗಲು ಬರುತ್ತಿತ್ತು. ಆ ಬಂಡಿಯು ಮೋಹನನ ಬಂಡಿಯ ಹತ್ತಿರವೇ ಮುಂದಕ್ಕೆ ಹೊರಟು ಹೋಯಿತು. ಮೋಹನನು ಹಿಂಭಾಗದಿಂದ ಆ ಬಂಡಿಯೊಳಗೆ ಯಾರು ಇರುವರೆಂಬದನ್ನು ನೋಡಿದನು.

ಕೋಮಲೆಯು "ಯಾರು" ಎಂದು ಕೇಳಿದಳು.

ಮೋಹನ—ಯಾರು! ನೀನೇ ಹೇಳು.

ಕೋಮಲೆ—ಮುಸಲ್ಮಾನನೊಬ್ಬನು ಕುಳಿತಿರುವನು. ಇನ್ನೊಬ್ಬನು

ಗಾಡಿ ಹೊಡೆಯುವವನು:. ಬೇರೆ ಯಾರೂ ಇಲ್ಲ.

ಮೋಹನ—ಮುಸಲ್ಮಾನನನ್ನು ನೋಡಿ ನನಗೆ ರಘುವೆಂಬ ಸಂಶಯ ವುಂಟಾಗಿದೆ.

ಪ್ರಿಯನಾಥ—ರಘುವೇ! ಆತನನ್ನು ಸುಮ್ಮನೆ ಬಿಡುವುದೇ?

ಮೋಹನ—ಹಾಗಿದ್ದರೆ ನೀನೇ ಹೋಗಿ ಹಿಂಬಾಲಿಸು. ಜಾಗರೂಕ ನಾಗಿ ಕೆಲಸವನ್ನು ಸಾಧಿಸು.

ಒಡನೆ ಪ್ರಿಯನಾಥನು ಗಾಡಿಯನ್ನು ನಿಲ್ಲಿಸಲು ಹೇಳಿ ಕೆಳಗಿಳಿದು ಸ್ಟೇಷನ್ನಿಗೆ ತ್ವರೆಯಿಂದ ಹೋದನು. ಅಷ್ಟರಲ್ಲಿಯೆ ರಘುವು ಅಹೀಮತಿಗೆ ಹೊರಡಲು ಸಿದ್ಧವಾಗಿದ್ದ ರೈಲನ್ನು ಹತ್ತುತ್ತಿರುವದನ್ನು ಪ್ರಿಯನಾಥನು ನೋಡಿದನು. ಆಗಲೆ ರೈಲು ಹೊರಡುವ ಸಮಯವಾಯಿತು ಪ್ರಿಯ ನಾಥನು ಓಡುತ್ತಾ ಹೋಗಿ ಅಹೀಮತಿಗೆ ಟಿಕೇಟೊಂದನ್ನು ತೆಗೆದುಕೊಂಡು ಬಂದನು. ಆಗಲೇ ರೈಲ್ ಮೆಲ್ಲನೆ ಹೊರಟಾಗಿತ್ತು. ರೈಲ್ ಹೋಗುತ್ತಿರು ವಾಗಲೆ ಹತ್ತಿದನು. ಆದರೂ ರಘುವಿರುವ ಬಂಡಿಯ ಹತ್ತಿರವಿರಲು ಸಾಧ್ಯ ವಾಗದೆ ಕೊನೆಯ ಬಂಡಿಯನ್ನು ಏರಿದನು. ಮುಂದಿನ ಸ್ಟೇಷನ್‌ಬಂದಿತು. ರೈಲ್ವೆಯು ನಿಂತಿತು. ಒಡನೆ ಪ್ರಿಯನಾಥನು ಕೆಳಗೆ ಇಳಿದು ರಘುವು ಕುಳಿ ತಿದ್ದ ಬಂಡಿಯ ಕಡೆಗೆ ಹೋದನು; ಆದರೆ ಅಷ್ಟರಲ್ಲಿಯೇ ರಘುವು ಕೆಳಗಿಳಿದು ಜನರ ಸಂದಣಿಯಲ್ಲಿ ಮಾಯವಾಗಿದ್ದನು. ಎಷ್ಟು ಹುಡುಕಿದರೂ ಪ್ರಯೋ ಜನವಾಗದೆ ಪ್ರಿಯನಾಥನು ಎರಡನೆ ಬಾರಿಯೂ ನಿರಾಶನಾಗಿ ಹಿಂತಿರಳಿದನು.

ಇತ್ತ ಮೋಹನನು ಕೋಮಲೆಯೊಡನೆ ಸುಖೇಶನು ಇರುತ್ತಿರುವ ಗ್ರಾಮಕ್ಕೆ ಹೋದನು. ಮೋಹನನನ್ನು ನೋಡಿದೊಡನೆ ಗ್ರಾಮದವರು ಎದುರ್ಗೊಂಡು ಸನ್ಮಾನಿಸಿದರು.

ಮೋಹನ—"ಸುಖೇಶನ ಅವಸ್ಥೆ ಏನಾಯಿತು?" ಎಂದು ಕೇಳಿದನು.

ಗ್ರಾಮಸ್ಥರಲ್ಲೊಬ್ಬನು:—"ಇಷ್ಟು ಹೊತ್ತಿನವರೆಗೆ ನಾವಾತನನ್ನು ಉಪಚರಿಸಿದೆವು. ಆದರೂ ಪ್ರಯೋಜನವಾಗದೆ ಈಗ ತಾನೆ ಮೃತಪಟ್ಟನು. ಇನ್ನೊಂದು ವಿಚಾರವೇನಂದರೆ ರಘುವು ನೀವು ಬರುವದಕ್ಕಿಂತ ಸ್ವಲ್ಪ ಮುಂಚಿತವಾಗಿ ನೀವು ಬಂದಿರುವ ಮಾರ್ಗದಿಂದಲೇ ಹಿಂದಿರುಗಿ ಹೋದನು.

ಮಾರ್ಗದಲ್ಲಿ ನಿಮಗೆ ಅವನು ಸಿಕ್ಕಿರಬಹುದು; ಆದರೆ ಪರಿಚಯವಾಗಿರ ಲಾರದು. ಆತನ ಹತ್ತಿರ ಮಾತನಾಡಿ ಸುಖೇಶನು ಮೃತನಾದನು.''

ಮೋಹನ—ರಘುವು ಎಲ್ಲಿಗೆ ಹೊಗುತ್ತೇನೆಂದು ಹೇಳಿ ಇಲ್ಲಿಂದ ಹೊರಟನು?

ಗ್ರಾಮಸ್ಥ—''ತೀರ್ಥಯಾತ್ರೆಯನ್ನು ಮಾಡಿ ಪಾಪವನ್ನು ಕಳೆದು ಕೊಳ್ಳುವೆನೆ''ಂದು ಹೇಳಿ ಹೋದನು.

ಮೋಹನ—ಆತನನ್ನು ನೀವಿಲ್ಲಿ ಯಾಕೆ ಹಿಡಿಯಲಿಲ್ಲ? ಇದು ನಿಮ್ಮ ತಪ್ಪು.

ಗ್ರಾಮಸ್ಥ—ಕ್ಷಮಿಸಿರಿ. ನಾವೇನೋ ಹಿಡಿಯಲು ಹವಣಿಸಿದೆವು; ಆದರೆ ಅದಕ್ಕೊಂದು ವಿಘ್ನವು ಒದಗಿತು. ''ಸುಖವಾಗಿ ನನಗೆ ಮರಣ ವಾಗುವದಕ್ಕೂ ಬಿಡುವದಿಲ್ಲವೆ? ಇಂತಹ ಸಮಯದಲ್ಲಿ ಸ್ನೇಹಿತನನ್ನೂ ನೀವು ಹಿಡಿದರೆ ನನಗೆ ದುಃಖದಿಂದ ಒಡನೆ ಮರಣ ಉಂಟಾದೀತು. ಮರಣ ಕಾಲದ ಇದೊಂದು ಬೇಡಿಕೆಯನ್ನು ಪರಿಪಾಲಿಸಿರಿ. ಈತನನ್ನು ಹಿಡಿ ಯದೆ ಬಿಟ್ಟುಬಿಡಿರಿ'' ಎಂದು ಸುಖೇಶನು ಕರುಣಾವ್ಯಂಜಕವಾದ ಧ್ವನಿ ಯಿಂದ ಹೇಳಿದನು. ರಘುವೂ ಕೂಡ: ''ನಾನಿನ್ನು ಸರ್ವಸಂಗಪರಿತ್ಯಾಗ ವನ್ನು ಮಾಡಿ ತೀರ್ಥಯಾತ್ರೆಗೆ ಹೋಗುವೆನು.'' ಎಂದು ನುಡಿದುದರಿಂದ ನಾವು ಸುಮ್ಮನಿದ್ದು ಬಿಟ್ಟೆವು.

ಮೋಹನ—ನಿಮ್ಮ ಗ್ರಾಮ್ಯಬುದ್ಧಿಗೆ ಬೆಂಕಿಹಚ್ಚಲಿ. ರಘುವನ್ನು ಬಿಟ್ಟಿರುವದು ನಿಮ್ಮ ಪಾಮರಬುದ್ಧಿಯನ್ನು ಚೆನ್ನಾಗಿ ವ್ಯಕ್ತಗೊಳಿಸುವದು. ಅದು ಹೋಗಲಿ. ಸುಖೇಶನು ರಘುವಿನೊಡನೆ ಏನನ್ನು ಮಾತಾಡಿದನು?

ಗ್ರಾಮಸ್ಥ—''ಇನ್ನು ಮೇಲಾದರೂ ಸನ್ಮಾರ್ಗದಲ್ಲಿ ಸಂಚರಿಸು'' ಎಂದು ಹೇಳಿದನು. ಆಗ ರಘುವು ''ಇನ್ನೊಂದು ಕಾರ್ಯವಿದೆ. ಅದರಲ್ಲಿ ನಿರಾಶ ನಾದರೆ ಆಗ ನೀನಿರುವ ಲೋಕಕ್ಕೆ ಬರುವೆನು'' ಎಂದು ಹೇಳಿದನು.

ಮೋಹನನು ಕೋಮಲೆಯನ್ನು ಕುರಿತು ಹೇಳಿದನು: ''ರಘುವಿನ ಉಪ ಟಳವು ಇನ್ನೂ ಇದೇ ಎಂಬುದು ಆತನ ಮಾತಿನಿಂದ ತಿಳಿಯುತ್ತಿದೆ. ಪ್ರಿಯ ನಾಥನು ಆತನನ್ನು ಹಿಂಬಾಲಿಸಿದರೂ ಏನಾಗುವದೋ ಹೇಳಲಶಕ್ಯವು''

ಅನಂತರ ಮೋಹನನು ಕೋಮಲೆಯೊಡನೆ ಹೊರಟು ಹೋದನು.

× × × × ×

ಈ ದಿನ ಏಕಾದಶಿಯಾದುದರಿಂದ ಮೋಹನನೂ, ಆತನ ಮಿತ್ರರೂ ಮಾಧವಕುಟೀರಕ್ಕೆ ಬಂದಿದ್ದರು. ಏಕಾದಶೀ ದಿನ ಮಾಧವಕುಟೀರದಲ್ಲಿ ಯಾರೂ ಭೋಜನವನ್ನು ಮಾಡುತ್ತಿರಲಿಲ್ಲ. ದಿನವೆಲ್ಲವೂ ನಿರಾಹಾರದಿಂದಿದ್ದು ರಾತ್ರಿ ಜಾಗರಣೆಯನ್ನು ಮಾಡಿ ಮಾಧವಸೇವಾನಿರತರಾಗಿದ್ದು ದ್ವಾದಶೀದಿನ ಪಾರಣೆಯನ್ನು ಮಾಡುತ್ತಿದ್ದರು. ಎಂದಿನಂತೆ ಈ ಏಕಾದಶಿಯಲ್ಲಿಯೂ ಪೂಜಾದಿಗಳು ನಡೆಯುತ್ತಿದ್ದವು. ಹಗಲು ಕಳೆದು ರಾತ್ರಿಯಾಯಿತು. ಪೂಜೆಯೂ, ಭಜನೆಗಳೂ ನಡೆಯುತಲಿದ್ದವು. ರಾತ್ರಿ ಒಂಭತ್ತು ಗಂಟೆಯ ಸಮಯದಲ್ಲಿ ಸ್ವಲ್ಪ ಮೈಲಿಗೆಯ ಸ್ಪರ್ಶವಾದಂತಾಗಿ ವಿರಕ್ತೆಯು ದಾಸಿಯೊಬ್ಬಳನ್ನು ಕರೆದುಕೊಂಡು ಹತ್ತಿರವಿದ್ದ ನದಿಗೆ ಸ್ನಾನವನ್ನು ಮಾಡಲು ಹೋದಳು. ನದಿಯಲ್ಲಿ ಸ್ನಾನವನ್ನು ಮಾಡಲು ಇಳಿದೊಡನೆ ಎಲ್ಲಿಂದಲೋ ನಾಲ್ಕಾರು ಜನರು ಹಾರಿಬಂದು ವಿರಕ್ತೆಯನ್ನು ಹಿಡಿದು ಕೂಗದಂತೆ ಬಾಯಿಯಲ್ಲಿ ವಸ್ತ್ರವನ್ನಿಟ್ಟು, ಕೈಕಾಲುಗಳನ್ನು ಕಟ್ಟಿ ಹತ್ತಿರವಿಟ್ಟಿದ್ದ ಡೋಲಿಯಲ್ಲಿ ಆಕೆಯನ್ನು ಮಲಗಿಸಿ ಡೋಲಿಯನ್ನು ಹೊತ್ತುಕೊಂಡು ಎತ್ತೋ ಹೊರಟು ಹೋದರು. ವಿರಕ್ತೆಯ ಜೊತೆಯಲ್ಲಿ ನದಿಗೆ ಬಂದ ದಾಸಿಯು ಅತಿವೃದ್ಧಳಾಗಿ ಕಣ್ಣು ಚೆನ್ನಾಗಿ ಆ ಕತ್ತಲೆಯಲ್ಲಿ ಕಾಣಿಸದೆ ಇದ್ದುದರಿಂದ ವಿರಕ್ತೆಯನ್ನು ಕಳ್ಳರು ಯಾವ ದಿಕ್ಕಿಗೆ ಹೊತ್ತು ಕೊಂಡು ಹೋದರೆಂಬುದನ್ನು ಆಕೆಯು ತಿಳಿಯಲಿಲ್ಲ ಕಳ್ಳರು ತನ್ನನ್ನು ಎಲ್ಲಾದರೂ ಹೊಡೆದು ಬಿಟ್ಟಾರೆಂಬ ಭಯದಿಂದ ಆ ಮುದುಕಿಯು ಕಳ್ಳರನ್ನು ನೋಡಿ ಕೂಗಲೂ ಇಲ್ಲ. ಮಾಧವಮಂದಿರಕ್ಕೆ ಹೋಗಿ ಆ ಮುದುಕಿಯು ನಡೆದ ವಿಷಯವನ್ನು ಮೋಹನನ ಹತ್ತಿರ ಹೇಳಿದಳು. ಒಡನೆ ವಿರಕ್ತೆಯನ್ನು ಹುಡುಕಲು ನಾಲ್ಕೂ ದಿಕ್ಕುಗಳಿಗೆ ಸೇವಕರು ಕಳುಹಲ್ಪಟ್ಟರು; ಆದರೂ ಪ್ರಯೋಜನವಾಗಲಿಲ್ಲ. ಈ ರೀತಿಯಾಗಿ ವಿರಕ್ತೆಯನ್ನು ಅಪಹರಿಸಿದವರು ಯಾರಿರಬಹುದೆಂದು ಮೋಹನನು ತನ್ನವರೊಡನೆ ಆಲೋಚಿಸಿದನು. ಇದ್ದರೆ ರಘುವೇ ಇರಬೇಕೆಂದು ಊಹಿಸಿದನು. ಮುಂದೆ ಹುಡುಕಲು ಯಾವ ಉಪಾಯವೆಂದು ಚಿಂತಿಸುತಲಿದ್ದನು.

ತ್ರಯೋದಶೀ ದಿನ ಲಕ್ಷ್ಮೀಶನು ರಜತದಿಂದ ಮಾಧವಕುಟೀರಕ್ಕೆ ಬಂದನು. ಮೋಹನನು "ವಿಶೇಷವೇನಾದರೂ ಇರುವುದೇ" ಎಂದು ಕೇಳಿದನು.

ಲಕ್ಷ್ಮೀಶ—ನಿನ್ನೆ ರಮೇಶನ ಮನೆಗೆ ಒಬ್ಬಾಳೊಬ್ಬ ಸ್ತ್ರೀಯು ಸೆರೆ ಹಿಡಿಯಲ್ಪಟ್ಟು ತರಲ್ಪಟ್ಟಿರುವದನ್ನು ನೋಡಿದೆನು. ರಮೇಶನ ಈ ದೌಷ್ಟ್ಯ ವನ್ನು ತಿಳಿಸಲು ಬಂದೆನು.

ಮೋಹನ—ಏನು! ಸ್ತ್ರೀಯು ತರಲ್ಪಟ್ಟಳೇ! ಹಾಗಾದರೆ ಆಕೆಯು ವಿರಕ್ತೆಯೇ ಇರಬೇಕು. ಆಕೆಯು ಮೊನ್ನೆ ದಿನ ಇಲ್ಲಿ ಅಪಹೃತಳಾಗಿರುವಳು. ಸಕಾಲದಲ್ಲಿ ನೀನು ಅದನ್ನು ಕಂಡುಹಿಡಿದಿರುವದು ನಮ್ಮ ಕಾರ್ಯಕ್ಕೆ ಅನು ಕೂಲವಾಯಿತು. ಈ ಸಮಯದಲ್ಲಿ ಆತನನ್ನು ಶಿಕ್ಷಿಸದೆ ಇರಲು ಸಾಧ್ಯ ವಿಲ್ಲ ರಘುವಿಗಾಗಿ ರಮೇಶನು ಈ ಕಾರ್ಯವನ್ನು ಮಾಡಿರಬಹುದು, ಎಂದು ಹೇಳಿ ಮೋಹನನು ಮಿತ್ರರೊಡನೆ ಅಲ್ಲಿಂದ ಹೊರಟು ರಜತಕ್ಕೆ ಹೋದನು. ಅಲ್ಲಿ ಕಾರ್ಯಸಾಧನೆಗಾಗಿ ಒಬ್ಬ ಟ್ಯಾಕ್ಸಿ ಕಾರಿನವನಿಗೆ ಸ್ವಲ್ಪ ಹಣವನ್ನು ಹೆಚ್ಚಾಗಿ ಕೊಟ್ಟು ಆ ಮೋಟಾರಿನಿಂದ ಮೋಹನನೂ, ಆತನ ಮಿತ್ರರೂ ರಾತ್ರಿ ಒಂಭತ್ತು ಗಂಟೆಯ ಸಮಯದಲ್ಲಿ ರಮೇಶನ ಮನೆಗೆ ಹೋದರು. ಮೋಟಾರು ರಮೇಶನ ಮನೆಯ ಹತ್ತಿರ ನಿಂತು ಮೋಹನನು ಕೆಳಗಿಳಿದು ಬಾಗಿಲಿನಲ್ಲಿದ್ದ ಸೇವಕನ ಕೈಯಲ್ಲಿ ವ್ಹಿಜಿಟಿಂಗ್ ಕಾರ್ಡ್ ಒಂದನ್ನು ಕೊಟ್ಟು, "ಸ್ವಲ್ಪ ಕಾರ್ಯವಿದೆ. ಅದನ್ನು ತಿಳಿಸಿ ಕೂಡಲೆ ನಾವು ಹೊರಟು ಹೋಗ ಬೇಕು. ಆದ್ದರಿಂದ ಒಡನೆ ಕೆಳಗೆ ಬಂದು ಹೋಗಲು ರಾಯರ ಹತ್ತಿರ ಹೇಳು" ಎಂದು ಹೇಳಿ ಆತನನ್ನು ಕಳುಹಿಸಿದನು.

ರಮೇಶನು ಸೇವಕನು ಕೊಟ್ಟ ಕಾರ್ಡನ್ನು ನೋಡಿದನು. ರಾಕಾ ಚಂದ್ರನ ಹೆಸರು ಅದರಲ್ಲಿತ್ತು. ಸೇವಕನು ಹೇಳಿದ ಮಾತಿನಿಂದ ರಮೇ ಶನು ಒಡನೆ ಹೊರಗೆ ಬಂದನು. ಹೊರಗೆ ಬಂದೊಡನೆ ಮೋಹನನೂ, ಆತನ ಮಿತ್ರರೂ ಮುಂದೆ ನುಗ್ಗಿ ರಮೇಶನನ್ನು ಕಟ್ಟಿ ಮೋಟಾರಿನಲ್ಲಿ ಉರುಳಿಸಿದರು. ಸಹಾಯಕ್ಕೆ ಬಂದ ರಮೇಶನ ಸೇವಕನು ಮೋಹನನಿಂದ ಪೆಟ್ಟುಗಳನ್ನು ತಿಂದು ನರಳುತ್ತಿದ್ದನು. ಮೋಟಾರು ಅಲ್ಲಿಂದ ಅತಿವೇಗ

ವಾಗಿ ಹೊರಟು ಮೋಹನನ ಬಿಡಾರಕ್ಕೆ ಬಂದು ಮುಟ್ಟಿತು. ರಮೇಶನು ಮನೆಯೊಳಗೆ ಸಾಗಿಸಲ್ಪಟ್ಟನು. ಅಲ್ಲಿ ರಮೇಶನ ಕಟ್ಟುಗಳನ್ನು ಸಡಲಿಸಿ ಮೋಹನನು ಆತನ ಮುಖಕ್ಕೆ ಪಿಸ್ತೂಲನ್ನು ಹಿಡಿದು ಗರ್ಜಿಸಿ ನುಡಿದನು: "ಲೇ ಪಾಪಿ! ಇನ್ನೆಲ್ಲಿ ಅಡಗುವಿ! ಸತ್ಯವನ್ನು ಹೇಳು. ಸುಳ್ಳನ್ನು ಹೇಳಿದರೆ ಇಗೋ ಈಗಲೇ ನಿನ್ನ ಮುಖವನ್ನು ಸುಟ್ಟುಹಾಕುವೆನು. ಇನ್ನು ನನ್ನ ಕೈಯಿಂದ ನೀನು ಪಾರಾಗಲಾರೆ. ಅನುದಿನವೂ ರಘುವಿನೊಡನೆ ಸೇರಿ ಕೊಲೆ, ಕಳವುಗಳನ್ನು ನಡೆಸುತ್ತಿದ್ದ ನೀನು ಆ ತಪ್ಪನ್ನು ನನ್ನ ಮೇಲೆ ಹೊರಿಸಿ ತಪ್ಪಿಸಿಕೊಳ್ಳಲಿಚ್ಛಿಸುವಿಯಾ? ನನ್ನನ್ನು ಹಿಡಿದು ಪೋಲೀಸರ ಅಧೀನಕ್ಕೆ ಕೊಡುವೆನೆಂದು ಈ ಕೆಟ್ಟ ನಾಲಿಗೆಯಿಂದ ರಾಕಾಚಂದ್ರನ ಹತ್ತಿರ ನುಡಿದಿರಲಿಲ್ಲವೇ? ನಿಮ್ಮ ಸಂಗಡವೆಲ್ಲವನ್ನೂ ಅರಿತಿರುವೆನು. ತಂಡದ ಒಬ್ಬ ನಾಯಕನಾದ ಸುರೇಶನನ್ನು ಕೊಂದಂತೆ ಉಳಿದವರೆಲ್ಲರನ್ನೂ ಒಂದೇ ಬಾರಿ ಹಿಡಿದು ಹಾಕಲು ಯತ್ನಿಸುತ್ತಿರುವೆನು. ಹೇಳು? ರಘುವು ಈಗ ಎಲ್ಲಿರುವನು?"

ರಮೇಶನು ತನ್ನ ಮೋಸವು ಬಯಲಾದುದರಿಂದ ಮನದಲ್ಲಿ ಮರುಗಿದನು. ಮೋಹನನ ಕೈಯಲ್ಲಿ ಸಿಕ್ಕಿದ ಮೇಲೆ ತನ್ನ ಉಪಾಯವು ನಡೆಯಲಾರದೆಂದು ಭಾವಿಸಿ ಹೇಳಿದನು. "ರಘುವು ಸಾಯಂಕಾಲ ಆರು ಗಂಟೆಯ ಸಮಯದಲ್ಲಿಯೇ ಎತ್ತೊ ಹೊರಟು ಹೋಗಿರುವನು"

ಮೋಹನ—ಎಲ್ಲಿಗೆ?

ರಮೇಶ—ಅದೆನಗೆ ತಿಳಿಯದು.

ರಮೇಶನು ಸುಳ್ಳುಹೇಳಿದುದನ್ನು ಕೇಳಿ ಮೋಹನನು ಆತನ ಮುಖಕ್ಕೊಂದುಬಾರಿ ಬಲವಾಗಿ ತಿವಿದು ಹೇಳಿದನು: "ಛಿ. ಕತ್ತೆ! ಸುಳ್ಳಾಡುವಿಯಾ 'ನನಗೆ ತಿಳಿಯದು' ಎಂದು ಇನ್ನೊಂದುಬಾರಿ ನುಡಿದರೆ ನಿನ್ನ ಹಲ್ಲುಗಳನ್ನು ಉದುರಿಸಿ ಬಿಡುವೆನು"

ರಮೇಶ—ರಘುವು ನಶೀದಕ್ಕೆ ಹೊರಟು ಹೋದನು.

ಮೋಹನ—ನಶೀದವು ಇಲ್ಲಿಂದ ಎಷ್ಟುದೂರದಲ್ಲಿದೆ?

ರಮೇಶ—ಇಲ್ಲಿಂದ ಹದಿನೆಂಟು ಮೈಲಿಗಳಾಗಬಹುದು.

ಮೋಹನ—ಅಲ್ಲೀಗ ಆತನಿಗೆ ಕಾರ್ಯವೇನು?

ರಮೇಶ—ಅಲ್ಲಿ ಆತನ ವಸತಿಸ್ಥಾನವೊಂದು ಇದೆ.

ಮೋಹನ:—ಮೊನ್ನೆ ಕದ್ದು ತಂದ ವಿರಕ್ತೆಯನ್ನು ಎಲ್ಲಿ ಇಟ್ಟಿರುವಿ.

ರಮೇಶ:—ಆಕೆಯು ರಘುವಿನೊಡನೆ ಹೋಗಿರುವಳು.

ಮೋಹನ—ಇದು ಸುಳ್ಳು. ನಿನ್ನ ಮನೆಯಲ್ಲಿಯೇ ಆಕೆಯು ಇರು ವುದನ್ನು ನೋಡಿದವರು ಹೇಳುವರು.

ರಮೇಶ—ನಿನ್ನೆ ಸಾಯಂಕಾಲದ ವರೆಗೆ ಆಕೆಯು ಇಲ್ಲಿ ಇದ್ದಿರುವದು ನಿಜ; ಆ ಮೇಲೆ ರಘುವು ಕರೆದುಕೊಂಡು ಹೋದನು.

ಮೋಹನ—ವಿರಕ್ತೆಯು ರಘುವಿನೊಡನೆ ಹೋಗಲು ಸಮ್ಮತಿಸಿದಳೆ?

ರಮೇಶನು ಒಂದು ಉಪಾಯವನ್ನು ಯೋಚಿಸಿ ಹೇಳಿದನು:-ಹೌದು. ವಿರಕ್ತೆಯು ಒಪ್ಪಿಯೇ ಆತನೊಡನೆ ಹೋದಳು. ಹಾಗೆ ಆಕೆಯು ಒಪ್ಪಿ ಗೆಯು ಮೊದಲೆ ಇಲ್ಲದಿದ್ದರೆ ಮಾಧವಕುಟೀರದಲ್ಲಿ ಅಂತಹ ಸಮಯದಲ್ಲಿ ಆಕೆಯು ನದಿಗೆ ಸ್ನಾನಕ್ಕೆ ಬರುವಳೆಂದು ಯಾರಿಗೆ ತಿಳಿದಿತ್ತು.

ಮೋಹನನು ರಮೇಶನ ಈ ಅಸತ್ಯ ವಚನವನ್ನು ಕೇಳಿ ಕ್ರೋಧದಿಂದ ಮುಷ್ಟಿಯನ್ನೆತ್ತಿ: "ಹೇಳು. ಇನ್ನೊಂದು ಬಾರಿ ಹೇಳು. ವಿರಕ್ತೆಯು ಒಪ್ಪಿ ರಘುವಿನಿಂದ ಅಪಹರಿಸಲ್ಪಟ್ಟಳೇ? ನನ್ನನ್ನು ಮೋಸಪಡಿಸುವಿಯಾ" ಎಂದು ಗರ್ಜಿಸಿ ನುಡಿದು ರಮೇಶನ ಮೂಗಿನ ಮೇಲೆ ಬಲವಾಗಿ ಗುದ್ದಿದನು. ರಮೇಶನು ನೋವಿನಿಂದ ನರಳುತ್ತ ನುಡಿದನು:—"ಇಲ್ಲ-ಇಲ್ಲ. ಕೊಲ್ಲದಿರು. ವಿರಕ್ತೆಯು ಶುದ್ಧಳು. ಅವಳು ಯಾವುದನ್ನೂ ಅರಿಯಳು. ಆಕೆಯು ಅರಿಯದಂತೆ ಮೇಲೆ ಬಿದ್ದು ಕಟ್ಟಿ ತಂದೆವು. ಈಗಲೂ ಬಂಧಿತಳಾಗಿಯೇ ರಘುವಿನಿಂದ ಒಯ್ಯಲ್ಪಟ್ಟಿರುವಳು.

ಮೋಹನನು ನಗುತ್ತಾ ಹೇಳಿದನು: "ನಿನ್ನ ಕುಶಲತೆಯನ್ನು ನನ್ನ ಹತ್ತಿರ ತೋರಿಸುವಿಯಾ? ಅದು ನಡೆಯಲಾರದು.

ಒಡನೆ ರಮೇಶನನ್ನು ಮೊದಲಿನಂತೆ ಕಟ್ಟಿ ಟ್ಯಾಕ್ಸಿಕಾರಿನಲ್ಲಿ ಉರುಳಿಸಿ ಮೋಹನನೂ, ಆತನ ಮಿತ್ರರೂ ನಶೀದಕ್ಕೆ ಹೋದರು. ಆಗ ರಾತ್ರಿ ೧೨ ಗಂಟೆಯಾಗಿದ್ದಿತು. ಗ್ರಾಮದೊಳಗೆ ಮೋಟಾರು ಹೋಯಿತು. ರಘು

ವಿರುವ ಮನೆಯ ದಾರಿಯನ್ನು ರಮೇಶನು ತೋರಿಸಿದನು. ಆತನ ಮನೆಯ ವರೆಗೂ ರಸ್ತೆಯು ಇದ್ದಿತ್ತು. ಮೋಟಾರು ರಘುವಿನ ಮನೆಯ ಹತ್ತಿರ ಮೆಲ್ಲನೆ ಹೋಗಿ ನಿಂತಿತು.

ಮನೆಯ ಉಪ್ಪರಿಗೆಯ ಒಂದು ಕೋಣೆಯಲ್ಲಿ ಮಾತ್ರ ದೀಪವಿರುವದು ಕಿಟಕಿಯಿಂದ ಹೊರಗೆ ತೋರುತಲಿತ್ತು. ಬಾಗಿಲನ್ನು ತೆರೆಯುವದಕ್ಕಾಗಿ ರಘುವನ್ನು ಕರೆಯಲು ಮೋಹನನು ರಮೇಶನನ್ನು ಪ್ರೇರಿಸಿದನು. ಇನ್ನಾರಾದರೂ ಕರೆದರೆ ಸಂದೇಹದಿಂದ ರಘುವು ಕದವನ್ನು ತೆರೆಯಲಾರನೆಂದು ಮೋಹನನು ಈ ಉಪಾಯವನ್ನು ಹೂಡಿದನು. ರಮೇಶನು ರಘುವನ್ನು ಕೂಗಿದನು.

ಸ್ವಲ್ಪ ಹೊತ್ತಿನಲ್ಲಿ ಕದವು ತೆರೆಯಲ್ಪಟ್ಟಿತು. ಕದವನ್ನು ತೆರೆದ ವ್ಯಕ್ತಿಯು ರಘುವೇ ಇರಬಹುದೆಂದೂಹಿಸಿ ಮೋಹನನೂ, ಆತನ ಮಿತ್ರರೂ ಆತನ ಮೇಲೆ ಬಿದ್ದು ಹಿಡಿದರು; ಆದರೆ ಆತನು ರಘುವಾಗಿರದೆ, ರಘುವಿನಿಂದ ಕಳುಹಿಸಲ್ಪಟ್ಟ ಆತನ ಸೇವಕನಾಗಿದ್ದನು. ಈ ರೀತಿ ಮೇಲೆ ಬಿದ್ದ ಜನರನ್ನು ನೋಡಿ ಭಯದಿಂದ ಗಟ್ಟಿಯಾಗಿ ಕೂಗಿದನು. ಆತನ ಧ್ವನಿಯನ್ನು ಕೇಳಿ "ಈತನು ರಘುವಲ್ಲ"ವೆಂದು ರಮೇಶನು ನುಡಿದನು. ಅಷ್ಟರಲ್ಲಿ ಮನೆಯ ಹಿಂಭಾಗದ ಬಾಗಿಲನ್ನು ತೆರೆದ ಸದ್ದಾಯಿತು. ಒಡನೆ ಎಲ್ಲರೂ ಎಲೆಕ್ಟ್ರಿಕ್ ದೀಪವನ್ನು ಹಚ್ಚಿ ಒಳನುಗ್ಗಿದರು; ಆದರೆ ಅಷ್ಟರೊಳಗೆ ರಘುವು ಮಾಯವಾಗಿದ್ದನು. ಹಿಂಭಾಗದ ಕದವು ತೆರೆಯಲ್ಪಟ್ಟಿದ್ದನ್ನು ದೀಪದ ಬೆಳಕಿನಲ್ಲಿ ಮೋಹನನು ನೋಡಿ "ರಘುವು ಕೈತಪ್ಪಿದನು." ಎಂದು ಹೇಳಿದನು.

ಆ ಮೇಲೆ ಉಪ್ಪರಿಗೆಯಲ್ಲಿ ಬಂಧಿತಳಾದ ವಿರಕ್ತೆಯನ್ನು ಬಿಡಿಸಿದರು. ಸೇವಕನನ್ನು ಮೋಹನನು ರಘುವಿನ ವಿಚಾರವನ್ನು ತಿಳಿಯಲು ಕೇಳಿದನು. ಸೇವಕನು ಹೇಳಿದನು: "ನಾನು ಇದೇ ಊರಿನವನು. ಈಗ ಓಡಿ ಹೋದ ಪುರುಷನು ಈ ಮನೆಯನ್ನು ಬಾಡಿಗೆ ಕೊಟ್ಟು ಇಟ್ಟುಕೊಂಡಿರುವನು. ನಾನು ಸೇವಕನಾಗಿ ಇಲ್ಲಿ ಇರುತ್ತಿದ್ದೆನು. ರಘುವು ಒಮ್ಮೊಮ್ಮೆ ಇಲ್ಲಿಗೆ ಬಂದು ಹೋಗುವನು. ಈ ಊರಿನಲ್ಲಿ ಆತನ ಸ್ನೇಹಿತರು ಕೆಲವರಿರುವರು;

ಆದರೆ ಅವರು ಯಾರಾರೆಂದು ನನಗೆ ಚೆನ್ನಾಗಿ ತಿಳಿಯದು. ನಿಮ್ಮ ಹತ್ತಿರ ಬಂಧಿಸಲ್ಪಟ್ಟು ಇರುವ ಇವರೂ ಕೂಡ ಕೆಲವು ಸಾರಿ ಇಲ್ಲಿಗೆ ಬಂದಿರುವರು. ನಾನೀಗ ಇಲ್ಲಿ ಮಲಗಿದ್ದಾಗ ರಘುವು ಬಂದು ನನ್ನನ್ನು ಎಬ್ಬಿಸಿ ಬಾಗಿಲನ್ನು ತೆರೆಯಬೇಕೆಂದು ಹೇಳಿದನು. ಅವನ ಅಪ್ಪಣೆಯಿಂದ ನಾನು ತೆರೆದೆನು."

ಆ ಮೇಲೆ ಮೋಹನನು ಆ ಊರಿನವರನ್ನು ಚೆನ್ನಾಗಿ ಎಚ್ಚರಿಸಿ ರಘುವಿನ ಸ್ವಭಾವವನ್ನು ವರ್ಣಿಸಿ ಅಲ್ಲಿಂದ ಹೊರಟು ರಜತದಲ್ಲಿ ರಮೇಶನಿಗೆ ಚೆನ್ನಾಗಿ ಬುದ್ಧಿವಾದವನ್ನು ಹೇಳಿ, ಅಲ್ಲಿಂದ ತನ್ನವರೊಡನೆ ಹೊರಟು ಹೋದನು; ಆದರೆ ರಮೇಶನಿಗೆ ಮೋಹನನ ಉಪದೇಶವು ರುಚಿಸಲಾರದೆ ಹೋಯಿತು. ಮೋಹನನಲ್ಲಿ ಹೊರಗೆ ದ್ವೇಷವನ್ನು ತೋರ್ಪಡಿಸದೆ ಇದ್ದರೂ ಒಳಗಿನಿಂದ ದ್ವೇಷವನ್ನು ಸಾಧಿಸಲು ಆತನು ಹವಣಿಸುತ್ತಿದ್ದನು. ರಮೇಶನ ಅದೃಷ್ಟಕ್ಕೆ ಸರಿಯಾಗಿ ಆತನ ಹತ್ತಿರದ ಸಂಬಂಧಿಯೊಬ್ಬನು ಮ್ಯಾಜಿಸ್ಟ್ರೇಟನಾಗಿ ರಜತಕ್ಕೆ ಬಂದನು. ಈಗಂತೂ ರಮೇಶನ ಕಾರ್ಯಕ್ಕೆ ಕಳೆಯೇರತೊಡಗಿತು. ರಮೇಶನು ಮೊದಲಿನಂತೆ ರಘುವಿಗೆ ಸಹಾಯ ವನ್ನು ಮಾಡತೊಡಗಿದನು.

ಮೋಹನನು ಅದನ್ನು ತಿಳಿದು ರಮೇಶನನ್ನು ಕಾಗದದ ಮುಖದಿಂದ ಎಚ್ಚರಿಸಿದನು. ಅದರಿಂದ ರಮೇಶನು ಬೆದರಲಿಲ್ಲ. ಮ್ಯಾಜಿಸ್ಟ್ರೇಟರು ರಮೇಶನ ಬಂಧುಗಳಾಗಿ ರಮೇಶನನ್ನು ರಕ್ಷಿಸಲು ನಿಂತಿರುವರೆಂಬುದನ್ನು ತಿಳಿದು ಮೋಹನನು ಅವರಿಬ್ಬರನ್ನೂ ಶಿಕ್ಷಿಸಲು ಅವರ ಪ್ರತಿ ಒಂದು ಕಾರ್ಯ ಗಳನ್ನೂ ಫೋಟೋ ತೆಗೆದು ಅವುಗಳನ್ನು ಕೋರ್ಟಿನಲ್ಲಿ ರಮೇಶನ ಅನ್ಯಾಯ ವನ್ನು ದೃಢಪಡಿಸುವದಕ್ಕಾಗಿ ಉಪಯೋಗಿಸಬೇಕೆಂದು ಆಲೋಚಿಸಿದನು. "ಇನ್ನು ಮ್ಯಾಜಿಸ್ಟ್ರೇಟರು ರಮೇಶನ ಪರವಾಗಿ ಹೇಗೆ ವಾದಿಸುವರೋ ನೋಡುತ್ತೇನೆ" ಎಂದುಕೊಂಡು ಮುಂದಿನ ಕಾರ್ಯದಲ್ಲಿ ಮೋಹನನು ಪ್ರವೃತ್ತ ನಾದನು.

———

## ತ್ರಯೋದಶ ಗುಚ್ಛ.

ಪ್ರಾತಃಕಾಲದ ಒಂಭತ್ತು ಗಂಟೆಯ ಸಮಯ ಪುರುಷನೊಬ್ಬನು ವೇಗವಾಗಿ ಸಣ್ಣದಾದ ಒಂದು ಗ್ರಾಮಾಭಿಮುಖವಾಗಿ ಹೋಗುತ್ತಿದ್ದನು. ಗ್ರಾಮವು ಸಮೀಪಿಸಿತು. ಮಾರ್ಗದಲ್ಲಿಬ್ಬರು ಶೂದ್ರರು ಪರಸ್ಪರವಾಗಿ ಸಂಭಾಷಿಸುತ್ತಾ ನಿಂತಿದ್ದರು. ಪುರುಷನು ಅವರ ಹತ್ತಿರ ಹೋಗಿ: "ಈ ಊರಿನಲ್ಲಿ ಯಾರೋ ಒಬ್ಬರನ್ನು ಹಿಡಿದುಕೊಂಡು ಹೋದರಷ್ಟೇ? ಆತನ ಮನೆಯು ಯಾವುದು" ಎಂದು ಕೇಳಿದನು. ಶೂದ್ರರಿಬ್ಬರೂ ಪುರುಷನ ಪ್ರಶ್ನೆಗೆ ಪರಸ್ಪರ ನೋಡಿದರೇ ಹೊರತು ಉತ್ತರವನ್ನೀಯಲಿಲ್ಲ. ಯಾಕಂದರೆ ಆಗಿನ ಸ್ಥಿತಿಯೇ ಹಾಗಿತ್ತು. ಆ ಗ್ರಾಮದಲ್ಲಿ ಕೊಲೆಯೊಂದು ನಡೆದು, ಪೋಲೀಸರು ಆ ಊರಿನವನೊಬ್ಬನನ್ನು ಕೊಲೆಯ ಆಪಾದನೆಯಿಂದ ಜೈಲಿಗೆ ಒಯ್ದಿದ್ದರು ಎಲ್ಲರಿಗೂ ಅದರಿಂದ ತಮ್ಮ ಮೇಲೆ ಅಲ್ಲಿ ಆ ತರಹ ಸಂಕಟವು ಬರುವುದೊ ಎಂದು ಭಯವುಂಟಾಗಿತ್ತು. ಪೋಲೀಸರು ಯಾವ ವೇಷದಿಂದ ಬಂದು ತಮ್ಮನ್ನು ಏನನ್ನಾದರೂ ಕೇಳಿ ಸೆರೆಮನೆಗೆ ಸೇರಿಸುವರೋ ಎಂದು ಪ್ರತಿಯೊಬ್ಬರೂ ಹೆದರಿ ನಡುಗುತ್ತಿದ್ದರು. ಗ್ರಾಮಗಳಲ್ಲಿ ಪೋಲೀಸರ ಗದ್ದಲವು ಹೆಚ್ಚಾಗಿ ಇರುವದು ಸ್ವಭಾವ ಗ್ರಾಮದ ಜನರಿಗೂ ಭಯವು ಹೆಚ್ಚು. ಅದಕ್ಕಾಗಿ ಗುರುತಿಲ್ಲದವರಲ್ಲಿ ಯಾರಾದರೂ ಪ್ರಶ್ನೆಮಾಡಿದರೆ ಆ ಕಾಲದಲ್ಲಿ ಮಾತನಾಡಿಸಿದವರಿಗೆ ಉತ್ತರವು ದೊರೆಯುವದು ದುರ್ಲಭವಾಗಿತ್ತು

ಪುರುಷನು ಶೂದ್ರರಿಬ್ಬರ ಮನಸ್ಸಿನ ಸ್ಥಿತಿಯನ್ನು ಅರಿತು, ಅವರಿಂದ ಏನನ್ನು ತಿಳಿಯುವದು ಕಷ್ಟವೆಂದೂಹಿಸಿ, ಅವರನ್ನು ಬಿಟ್ಟು ಮುಂದೆ ನಡೆದನು. ಹತ್ತು ವರ್ಷದ ಹುಡುಗನೊಬ್ಬನು ಎದುರಿಗೆ ಸಿಕ್ಕಿದನು. ಪುರುಷನು ಆ ಹುಡುಗನ ಕೈಯಲ್ಲಿ ಒಂದಾಣೆಯನ್ನಿಟ್ಟು ವಿಚಾರಿಸಿದನು. ಹುಡುಗನು ಕೈತೋರಿಸಿ:—"ಅಗೋ ಅಲ್ಲಿ ನೋಡಿ. ಆ ಮಾವಿನ ಮರದ ಹತ್ತಿರದಲ್ಲಿರುವ ಮನೆ" ಎಂದು ಹೇಳಿದನು. ಪುರುಷನು ಹುಡುಗನು ತೋರಿಸಿದ ಗುರುತನ್ನು ಹಿಡಿದು ಮುಂದೆ ಹೊರಟು ಆ ಸ್ಥಳವನ್ನು ಮುಟ್ಟಿದನು.

ಸಣ್ಣದೊಂದು ಮನೆಯು ಅಲ್ಲಿ ಇತ್ತು. ಬಾಗಿಲಿನಲ್ಲಿ ಮುದುಕಿಯೊಬ್ಬಳು ಕುಳಿತಿದ್ದಳು. ಪುರುಷನು ಹತ್ತಿರ ಹೋಗಿ "ನಿಮ್ಮ ಮಗನು ಮನೆಯಲ್ಲಿ ಇದ್ದಾನೆಯೇ?" ಎಂದು ಕೇಳಿದನು. ಮುದುಕಿಯು ದುಃಖದಿಂದ "ನೀವು ಯಾರು? ನಿಮಗೆ ನಡೆದ ವಿಷಯವು ಗೊತ್ತಿಲ್ಲವೇ?" ಎಂದಳು.

ಪುರುಷ— ಇಲ್ಲ. ನನಗೆ ನಿಮ್ಮ ಮಗನ ಗುರುತಿದೆ. ಆತನು ನನಗೆ ತುಂಬಾ ಉಪಕಾರವನ್ನು ಮಾಡಿರುತ್ತಾನೆ. ಅವನನ್ನು ನೋಡಿ ಹೋಗಲು ಬಂದೆನು. ಏನಾಗಿದೆ?

ಮುದುಕಿ—ಅಯ್ಯೋ! ನಮ್ಮ ಅವಸ್ಥೆಯು ಏನೆಂದು ಹೇಳಲಿ. ಕೊಲೆ ಗಡುಕನೆಂದು ಅವನನ್ನು ಪೋಲೀಸರು ಹಿಡಿದುಕೊಂಡು ಹೋದರು. ನಮ್ಮ ನ್ನೀಸಮಯದಲ್ಲಿ ಯಾರೂ ಕೇಳುವವರಿಲ್ಲ. ದೇವರ ದಯೆಯೂ ತಪ್ಪಿ ಹೋಯಿತು. ಎಂದು ಹೇಳಿ ಕಣ್ಣೀರಿಟ್ಟಳು. ಪುರುಷನು ಹೇಳಿದನು: "ಅದೇನು! ಈತನೇ ಕೊಲೆಯನ್ನು ಮಾಡಿರುವನೆಂದು ಪೋಲೀಸರು ಹೇಗೆ ನಿಶ್ಚಯವನ್ನು ಮಾಡಿದರು? ಈ ಊರಲ್ಲಿ ನಿಮ್ಮ ಪರವಾಗಿ ಯಾರೂ ಎದುರು ನಿಂತು ಹೇಳಲಿಲ್ಲವೇ"

ಮುದುಕಿ—ಯಾರು ಹೇಳುವರು? ಎಲ್ಲರಿಗೂ ಪೋಲೀಸರ ಭಯ. ಯಾರಿಗೂ ನಮ್ಮ ಮೇಲೆ ದಯವುಂಟಾಗಲಿಲ್ಲ ನನ್ನ ಸೊಸೆಯನ್ನು ಇನ್ ಸ್ಪೆಕ್ಟರರ ಹತ್ತಿರಕ್ಕೆ ಎರಡು-ಮೂರು ಬಾರಿ ಕಳುಹಿಸಿದೆನು. 'ನೋಡೋಣ' ಎನ್ನುತ್ತಿರುವರಂತೆ. ಈಗಲೂ ಆಕೆಯನ್ನು ಅಲ್ಲಿಗೆ ಕಳುಹಿಸಿರುವೆನು. ಏನಾ ಗುವದೋ ದೇವರೇ ಬಲ್ಲನು.

ಪುರುಷ—ಅಧಿಕಾರಿಗಳ ಬಳಿಗೆ ಹೀಗೆ ಹೆಂಗಸರನ್ನು ಕಳುಹಿಸಿ ಅದರಿಂದ ಪ್ರಯೋಜನವಾದೀತೇ? ಅವರು ಮದೋನ್ಮತ್ತರು.

ಮುದುಕಿ—ನಾನು ಇನ್ನೇನನ್ನು ತಾನೆ ಮಾಡಲಿ? ನನಗೆ ಅಲ್ಲಿಯ ವರೆಗೆ ಹೋಗಲು ಸಾಧ್ಯವಿಲ್ಲ. ಇನ್ನು ಯಾರೂ ನಮ್ಮನ್ನು ಕೇಳುವವ ರಿಲ್ಲ. ಆಕೆಯನ್ನಾದರೂ ನೋಡಿ ಇನ್‌ಸ್ಪೆಕ್ಟರರಿಗೆ ದಯೆವುಂಟಾದೀತೆಂದು ಕಳುಹಿಸಿದೆನು. ಇನ್ನಾವ ಗತಿಯೂ ಇಲ್ಲ.

ಪುರುಷ—ಆಕೆಯು ಇನ್ಸಸ್ಪೆಕ್ಟರರ ಮನೆಗೆ ಹೋಗಿ ಎಷ್ಟು ಹೊತ್ತಾ

ಯಿತು! ಇಲ್ಲಿಂದ ಅವರ ಮನೆಯು ಎಷ್ಟು ದೂರದಲ್ಲಿದೆ?

ಮುದುಕಿ—ಅರ್ಧ ಗಂಟೆಯಾಯಿತು. ಬೆಳಗಿನ ಹೊತ್ತಿನಲ್ಲಿ ಮನೆಯಲ್ಲಿಯೇ ಅವರು ಇರಬಹುದೆಂದು ಈಗ ಕಳುಹಿಸಿದೆನು. ಇಲ್ಲಿಂದ ಎರಡು ಮೈಲುಗಳಾಗಬಹುದು. ಅದೂ ಒಂದು ಸಾಧಾರಣ ದೊಡ್ಡ ಊರು.

ಪುರುಷ—ನಾನೂ ಅಲ್ಲಿಗೆ ಹೋಗಿ ಬರುತ್ತೇನೆ. ಕಷ್ಟ ಕಾಲದಲ್ಲಿ ತಾಳ್ಮೆಯಿಂದ ಇರ್ರಿ. ಭಯಪಡಬೇಡಿ, ಎಂದು ನುಡಿದು ಪುರುಷನು ಅಲ್ಲಿಂದ ಹೊರಟು, ಎಲ್ಲಿಯೂ ನಿಲ್ಲದೆ ಪೋಲೀಸಸ್ಟೇಷನ್ನಿದ್ದ ಮುಂದಿನ ಊರನ್ನು ತಲ್ಪಿದನು. ದಾರಿಯಲ್ಲಿ ಸ್ಟೇಷನ್ನು ಸಿಕ್ಕಿತು. ಅಲ್ಲಿ ವಿಚಾರಿಸಲು ಇನ್ಸಪೆಕ್ಟರರು ಮನೆಯಲ್ಲಿ ಇರುವರೆಂದು ತಿಳಿಯಿತು. ಪುರುಷನು ಅವರ ಮನೆಯು ಎಲ್ಲಿರುವದೆಂದು ವಿಚಾರಿಸುತ್ತಾ ಇನ್ಸಪೆಕ್ಟರರ ಮನೆಯನ್ನು ಸೇರಿದನು. ಮನೆಯು ಸಾಧಾರಣವಾದ ಸ್ಥಿತಿಯಲ್ಲಿದ್ದು, ಅದಕ್ಕೆ ಒತ್ತಿ ಬೇರೆ ಮನೆಗಳು ಇರದೆ ಸ್ವಲ್ಪ ದೂರದಲ್ಲಿ ಇದ್ದವು. ಪುರುಷನು ಇನ್ಸಪೆಕ್ಟರರ ಮನೆಗೆ ಹೋದಾಗ ಹೊರಭಾಗದ ಒಂದು ಕೋಣೆಯಲ್ಲಿ ಇನ್ಸಪೆಕ್ಟರರು ಕುರ್ಚಿಯೊಂದರಲ್ಲಿ ಕುಳಿತಿದ್ದರು. ಹತ್ತಿರದಲ್ಲಿಯೇ ಇಪ್ಪತ್ತು ವರ್ಷದ ತರುಣಿಯೊಬ್ಬಳು ನಿಂತು ಇನ್ಸಪೆಕ್ಟರರನ್ನು ಯಾಚಿಸುತ್ತಿದ್ದಳು. ಪುರುಷನು ಒಳಗಿನ ಪರಿಸ್ಥಿತಿಯನ್ನು ಕಿಟಕಿಯಿಂದ ಗುಪ್ತವಾಗಿ ನೋಡುತ್ತಾ ನಿಂತನು. ತರುಣಿಯು ಇನ್ಸಪೆಕ್ಟರರನ್ನು ಬೇಡಿ ಬೇಡಿ ಸಾಕಾಗಿ ಕೊನೆಗೆ "ನಮ್ಮನ್ನು ಯಾರೂ ಕಾಪಾಡುವವರಿಲ್ಲ. ನೀವೇ ನಮ್ಮ ಭಾಗದ ದೇವರು. ನಮ್ಮನ್ನು ಅನಾಥರನ್ನಾಗಿ ಮಾಡಬೇಡಿ. ರಕ್ಷಿಸಿರಿ. ನಮ್ಮವರನ್ನು ದಯವಿಟ್ಟು ಬಿಡಿಸಿ ಪುಣ್ಯ ಕಟ್ಟಿಕೊಳ್ಳಿರಿ" ಎಂದು ನುಡಿದು ಇನ್ಸಪೆಕ್ಟರರ ಕಾಲಿಗೆ ಬಿದ್ದುಬಿಟ್ಟಳು. ಇನ್ಸಪೆಕ್ಟರರು ಕೂಡಲೆ ಕುರ್ಚಿಯನ್ನು ಬಿಟ್ಟೆದ್ದು "ಏಳು ತಂಗೀ! ನೀನು ನನಗೆ ಸಹೋದರಿಯಂತಿರುವಿ. ಖಂಡಿತವಾಗಿಯೂ ಬಿಡಿಸುತ್ತೇನೆ. ಅಳಬೇಡ" ಎಂದು ಹೇಳಿ ತರುಣಿಯ ಕೈಗಳನ್ನು ಹಿಡಿದು, ನಿಲ್ಲಿಸುವ ನೆವವನ್ನು ಮಾಡಿ ಎಬ್ಬಿಸಿ ಆಕೆಯನ್ನು ಬಲವಾಗಿ ಆಲಿಂಗಿಸಿದರು. ಆಗ ತರುಣಿಗೆ ಮುಂದೆ ಏನನ್ನು ಮಾಡುವದಕ್ಕೂ ಸಾಧ್ಯವಿರಲಿಲ್ಲ. ಬಾಯಿಂದ "ತಂಗಿ" ಎಂದು ನುಡಿದು, ನಡತೆಯಿಂದ ವಿಪರೀತವಾಗಿ ಇನ್ಸಪೆ

ಕ್ಟರರು ಆಚರಿಸಿದ್ದರು. ಬಲಭೀಮನಂತಿದ್ದ ಆ ಇನ್ಸಪೆಕ್ಟರರ ಹಿಡಿತದಿಂದ ದುಃಖದಿಂದಲೂ, ಲಜ್ಜೆಯಿಂದಲೂ, ಮರ್ಯಾದೆಯು ಹೋಗುವ ಭಯ ದಿಂದಲೂ ಶಕ್ತಿಹೀನಳಾಗಿದ್ದ ಆ ತರುಣಿಯು ಬಿಡಿಸಿಕೊಳ್ಳಲಾರದೆ ಪಾದ ದಿಂದ ಶಿರಸ್ಸಿನ ವರೆಗೂ ನಡುಗುತ್ತಾ, ಬೆದರಿ, ಬಸವಳಿದು ಧಾರೆಧಾರೆಯಾಗಿ ಕಣ್ಣೀರನ್ನು ಸುರಿಸುತ್ತಿದ್ದಳು. ಮನಸ್ಸಿನಲ್ಲಿ "ಹಾ! ಅಯ್ಯೋ!! ಮರ್ಯಾದೆ ಯು ಹೋಗುತ್ತಿದೆ. ಅತ್ತ ಗಂಡನನ್ನು ಬಿಡಿಸಬೇಕೋ, ಇತ್ತ ಮರ್ಯಾದೆ ಯನ್ನು ತ್ಯಜಿಸಬೇಕೊ" ಎಂದು ಪರಿತಪಿಸುತ್ತಿದ್ದಳು. ಆದರೆ ಈ ಸಂಕಟ ದಲ್ಲಿ ಹೆಚ್ಚು ಹೊತ್ತು ನಿಲ್ಲಲಿಲ್ಲ. ಇನ್ಸಪೆಕ್ಟರರ ಈ ಮದೋನ್ಮತ್ತತೆಯನ್ನು ಗೋಪ್ಯವಾಗಿ ನೋಡುತ್ತಲಿದ್ದ ಪುರುಷನು ಈ ಅನ್ಯಾಯವನ್ನು ನೋಡಿ ಸಹಿಸದೆ, ಥಟ್ಟನೆ ಒಳನುಗ್ಗಿ, ಇನ್ಸಪೆಕ್ಟರರ ಕೆನ್ನೆಯ ಮೇಲೆ ಬಲವಾಗಿ "ಫಡೀಕ್" ಎಂದು ಒಂದು ಪೆಟ್ಟನ್ನು ಕೊಟ್ಟನು. "ಹಾ" ಎಂದು ಬಾಯ್ಬಿ ಡುತ್ತ ಇನ್ಸಪೆಕ್ಟರರು ತರುಣಿಯನ್ನು ಬಿಟ್ಟು ಹಿಂದಿರುಗಿ ನೋಡುವದರೊಳಗೆ ಪುರುಷನು ಅವರ ಮೂಗಿನ ಮೇಲೆ ಬಲವಾಗಿ ಗುದ್ದಿದನು.

ಏಟು ಬಲವಾದುದರಿಂದ ಮೂಗಿನಿಂದಲೂ, ಬಾಯಿಂದಲೂ ರಕ್ತವು ಸುರಿಯಲಾರಂಭಿಸಿತು. ಕ್ಷಣದೊಳಗೆ ಇನ್ನೊಂದು ಗುದ್ದು ಎದೆಯ ಮೇಲೆ ಬಿತ್ತು. ಅಷ್ಟನ್ನು ಸಹಿಸಿ ಇನ್ಸಪೆಕ್ಟರರು ಪುರುಷನ ಮೇಲೆ ಏರಿ ಬಂದರು. ಮೊದಲೇ ಸಿದ್ಧನಾಗಿದ್ದ ಪುರುಷನು ಪಿಸ್ತೂಲನ್ನು ಇನ್ಸಪೆಕ್ಟರರ ಮುಖಕ್ಕೆ ಗುರಿಯಿಟ್ಟು ಹಿಡಿದನು. ನಿರಾಯುಧರಾದ ಇನ್ಸಪೆಕ್ಟರರು ಹಿಂಜರಿದು ನಿಂತರು. ತಾವೂ ಜೇಬಿನಿಂದ ಪಿಸ್ತೂಲನ್ನು ತೆಗೆಯಲು ಕೈ ಹಾಕಿದರು. ಸಮಯವನ್ನು ಕಾಯುತ್ತಿದ್ದ ಪುರುಷನು 'ಇದೇ ಸಮಯ' ವೆಂದು ಥಟ್ಟನೆ ಮುಂದೆ ಹಾರಿ ಇನ್ಸಪೆಕ್ಟರರ ಸೊಂಟಕ್ಕೆ ಝಾಡಿಸಿ ಒದ್ದು ಬಿಟ್ಟನು. ಒದೆಯನ್ನು ಸಹಿಸಿಕೊಳ್ಳಲಾರದೆ ಇನ್ಸಪೆಕ್ಟರರು ಕಾಲು ಜಾರಿ ಭೂಮಿಗೆ ಒರಗಿದರು. ಒಡನೆ ಪುರುಷನು ಮುಂದೆ ಹಾರಿ ಇನ್ಸಪೆಕ್ಟರರ ಎದೆಯ ಮೇಲೆ ಇನ್ನೊಂದು ಒದೆಯನ್ನು ಕೊಟ್ಟನು. ಇನ್ಸಪೆಕ್ಟರರು ನಿಶ್ಚೇಷ್ಟರಾದರು.

ಒಡನೆ ಪುರುಷನು ತರುಣಿಯನ್ನು ಕರೆದುಕೊಂಡು ಅಲ್ಲಿಂದ ಹೊರಟು

ದಾರಿಯಲ್ಲಿ:—"ಆ ನೀಚನು ಅನ್ಯಾಯಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿದನು. ನೀನಿನ್ನು ಬೆದರಬೇಡ. ನಿನ್ನ ಗಂಡನು ಹಿಂದಿನಿಂದ ಬರುವನು. ಎಂದು ಹೇಳಿದನು. ತರುಣಿಯು ತನ್ನ ಮರ್ಯಾದೆಯನ್ನು ಉಳಿಸಿದ ಆ ಪುರುಷನನ್ನು ಮನಸ್ಸಿನಲ್ಲಿ ತುಂಬಾ ಸ್ತೋತ್ರವನ್ನು ಮಾಡಿ ಹೇಳಿದಳು: "ಹೋಗುತಲಿದ್ದ ನನ್ನ ಮಾನವನ್ನು ಉಳಿಸಿದ ನಿಮಗೆ ನಾನು ಚಿರಕಾಲ ಋಣಿಯಾಗಿರುವೆನು. ನಾನೆಷ್ಟು ಕೃತಜ್ಞತೆಯನ್ನು ತೋರ್ಪಡಿಸಿದರೂ ಅದು ಅಲ್ಪವೇ ಸರಿ. ಮಹಾನ‍ುಭಾವರಾದ ತಮ್ಮ ಪರಿಚಯುವನ್ನು........" ಎಂದು ಮುಂದೆ ಕೇಳಲು ಧೈರ್ಯಸಾಲದೆ ಸ್ವಲ್ಪ ನಾಚಿದಳು.

ಪುರುಷ—ನಾನು ಮೋಹನ. ಕೇಳಿರುವಿಯಾ?

ತರುಣಿಯು ಒಡನೆ ಮೋಹನನ ಕಾಲಿಗೆ ಬಿದ್ದು ನಮಸ್ಕಾರವನ್ನು ಮಾಡಿದಳು.

ಮೋಹನ—ಉಪಚಾರವಿರಲಿ. ನೀನಿಷ್ಟು ನವತರುಣಿಯಾಗಿ ಆ ಮದೋನ್ಮತ್ತನಾದ ಅಧಿಕಾರಿಯ ಮನೆಗೆ ಹೋದುದು ನಿನ್ನ ತಪ್ಪಲ್ಲವೇ?

ತರುಣಿ—ನನ್ನ ಹಣೇಬರಹವು ಹೀಗಿದೆ ಮಾಡುವದೇನು? ನಮ್ಮ ಮನೆಯವರು ಕೊಲೆಗಡುಕರೆಂಬ ಆಪಾದನೆಯಿಂದ ಹಿಡಿಯಲ್ಪಟ್ಟರು. ನಾವು ಅನಾಥರಾದೆವು. ನಾನು ನನ್ನ ಅತ್ತೆಯ ನಿರ್ಬಂಧದಿಂದ ಇನ್ಸಪೆಕ್ಟರರ ಮನೆಗೆ ಒಂದು ಬಾರಿ ಹೋದೆನು. ಆಗಲೇ ಅವರು ಏನೇನೋ ಚೇಷ್ಟೆಗಳನ್ನು ಮಾಡಿದರು. ನಾನು ಭಯಪಟ್ಟು ಮನೆಗೆ ಹಿಂದಿರುಗಿ ಹೋದಾಗ ಅತ್ತೆಯ ಹತ್ತಿರ ಹೇಳಿದೆನು; ಆದರೆ ಅತ್ತೆಯು ಅದನ್ನು ಮನಸ್ಸಿಗೆ ತಂದು ಕೊಳ್ಳಲಿಲ್ಲ. ಈ ದಿನ ಇಲ್ಲಿಗೆ ಬರುವದಕ್ಕಿಂತ ಮುಂಚೆ: "ಮರ್ಯಾದೆಯು ಹೋಗಬಹುದು. ನಾನಲ್ಲಿಗೆ ಹೋಗಲಾರೆನು" ಎಂದೆನು. "ಮರ್ಯಾದೆ ಎಂದು ಸುಮ್ಮನಿದ್ದರೆ ಗಂಡನನ್ನು ಯಾರು ಬಿಡಿಸುವರು! ಬಂದದ್ದನ್ನು ಅನುಭವಿಸಲೇ ಬೇಕು. ಅವನು ಬಿಡಿಸಲ್ಪಡದೆ ಹೋದರೆ ನಮ್ಮ ಹೊಟ್ಟೆ ಹೊರೆಯುವವರಾರು? ಈ ದಿನ ಕಾಲಿಗಾದರೂ ಬಿದ್ದು ಬೇಡು. ದಯೆಯುಂಟಾದೀತು" ಎಂದು ಅತ್ತೆಯವರು ಅಂದು ಬಿಟ್ಟರು. ನಿರುಪಾಯಳಾದ ನಾನು ಉಭಯ ಸಂಕಟದಲ್ಲಿ ಸಿಕ್ಕಿಬಿದ್ದೆನು. ನನ್ನ ಆಗಿನ ಸ್ಥಿತಿಯನ್ನು ಇನ್ನಾರಾ

ದರೂ ನೋಡಿದರೆ, ಅಥವಾ ಕೇಳಿದರೆ ನನ್ನನ್ನು ನೋಡಿ ಕೈ ತಟ್ಟಿ ನಗುವರು. ನನ್ನ ಮರ್ಯಾದೆಯು ಹೋಯಿತು. ನನ್ನ ಹಣೆಯ ಮೇಲೆ ಬ್ರಹ್ಮನು ಈ ರೀತಿ ಸಂಭವಿಸುವಂತೆ ಬರೆದಿರುವನೋ ಏನೋ, ಇಷ್ಟಾದರೂ ಮನೆಯವರು ಬರುವದು ಹೇಗೋ ತಿಳಿಯದು. ನನ್ನ ಅದೃಷ್ಟವು ಹೇಗಿರುವದೊ?

ಮೋಹನ-- ನಡೆದುದನ್ನೇ ತಿರುಗಿ ಮುಂದೆ ಯೋಚಿಸುವದರಿಂದ ಪ್ರಯೋಜನವಿಲ್ಲ. ಈ ಕಾಲದ ಸ್ಥಿತಿಯು ಇಂತಹ ಶೋಚನೀಯಾವಸ್ಥೆಯಲ್ಲಿದೆ. ಆದಷ್ಟು ಜಾಗರೂಕರಾಗಿ ನಾವು ನ್ಯಾಯಮಾರ್ಗದಲ್ಲಿ ಇರುತಲಿದ್ದರೆ ನಮ್ಮ ಕಷ್ಟಕಾಲದಲ್ಲಿ ಯಾರಾದರೂ ರಕ್ಷಿಸಬಹುದು. ಈಗ ನಡೆದ ವಿಚಾರವನ್ನು ನೀನು ಯಾರಿಗೂ ತಿಳಿಸಬೇಕಾಗಿಲ್ಲ. ನಾನು ಈಗ ಹೊರಟು ಹೋಗಿ ನಿನ್ನ ಗಂಡನನ್ನು ಬಿಡಿಸುವ ಯತ್ನವನ್ನು ಮಾಡುವೆನು. ನೀನೀಗ ಮನೆಗೆ ಹೋಗು, ಎಂದು ಹೇಳಿ ಮೋಹನನು ಅಲ್ಲಿಂದ ಪೋಲೀಸ್‌ಸ್ಟೇಷನ್ನಿನ ಕಡೆಗೆ ಹೊರಟನು. ಸ್ಟೇಷನ್ನಿನೊಳಗೆ ಹೋಗಿ ಒಬ್ಬ ಪೋಲೀಸನನ್ನು ಕುರಿತು: "ನನ್ನ ಪರಿಚಯುವಿರುವದೇ? ಇಲ್ಲದಿದ್ದರೆ ಹೋಗಲಿ. ನೀನೀಗ ನಿಮ್ಮ ಇನ್‌ಸ್ಪೆಕ್ಟರರ ಮನೆಗೆ ಹೋಗಿ ಅವರ ಹತ್ತಿರ 'ಮೋಹನನು ಸ್ಟೇಷನ್ನಿನಲ್ಲಿ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿರುವನು. ಒಡನೆ ಬರಬೇಕಂತೆ' ಎಂದು ಹೇಳಿ ಅವರನ್ನು ಕರೆದುಕೊಂಡು ಬಾ." ಎಂದು ಹೇಳಿದನು. ಮೋಹನನೆಂಬುದನ್ನು ಕೇಳಿದೊಡನೆ ಪೋಲೀಸನು ಭೀತನಾಗಿ ಒಡನೆ ಇನ್‌ಸ್ಪೆಕ್ಟರರ ಮನೆಗೆ ಓಡಿದನು. ಆಗ ತಾನೇ ಇನ್‌ಸ್ಪೆಕ್ಟರರು ಸ್ವಲ್ಪ ಚೇತರಿಸಿಕೊಂಡು ತಮಗುಂಟಾದ ಸ್ಥಿತಿಯನ್ನು ನೆನೆಯುತ್ತಿದ್ದರು. ಆ ಸಮಯದಲ್ಲಿ ಮೋಹನನಿಂದ ಕಳುಹಿಸಲ್ಪಟ್ಟ ಪೋಲೀಸನು ಬಂದು ಮೋಹನನು ಹೇಳಿದ ವಚನವನ್ನು ತಿಳಿಸಿದನು. ಒಡನೆ ಇನ್‌ಸ್ಪೆಕ್ಟರರು ಎದ್ದುನಿಂತು 'ಏನು ಮೋಹನನೆ?' ಎಂದು ಆತುರರಾಗಿ ಕೇಳಿದರು,

ಪೋಲೀಸ—ಹೌದು. ಈಗ ತಾನೆ ಸ್ಟೇಷನ್ನಿಗೆ ಬಂದು ಈ ರೀತಿ ತಮ್ಮ ಹತ್ತಿರ ತಿಳಿಸಲು ಹೇಳಿದರು. ಇನ್‌ಸ್ಪೆಕ್ಟರರು—"ನಮ್ಮ ಮನೆಗೆ ಬಂದವನು ಮೋಹನನೇನು?" ಎಂದು ಮನಸ್ಸಿನಲ್ಲಿ ಸಂಶಯಾವಿಷ್ಟರಾಗಿ ಹೇಳಿಕೊಂಡರು. "ಮೋಹನನೇ ನನ್ನನ್ನೀವಿಪತ್ತಿಗೆ ಗುರಿಮಾಡಿದ್ದರೆ ನನ್ನ

ಮುಂದಿನ ಸ್ಥಿತಿಯು ಸಂಕಟಕ್ಕೊಳಗಾಗುವದು. ಆತನು ದಯಾರ್ದ್ರ ಹೃದಯುದವನೆಂದು ಕೇಳಿರುವೆನು. ಕ್ಷಮೆಯನ್ನು ಯಾಚಿಸಿದರೆ ಅನುಗ್ರಹಿಸಿಯಾನು!" ಎಂದು ಇನ್‌ಸ್ಪೆಕ್ಟರರು ಭಾವಿಸಿ ಒಡನೆ ತಮ್ಮ ಪೋಷಾಕನ್ನು ಧರಿಸಿ ಪೋಲೀಸನೊಂದಿಗೆ ಸ್ಟೇಷನ್ನಿಗೆ ಹೋದರು. ದೂರದಿಂದಲೇ ಇನ್‌ಸ್ಪೆಕ್ಟರರು ಮೋಹನನನ್ನು ನೋಡಿ "ತರುಣಿಯನ್ನು ಬಿಡಿಸಿದಾತನು ಈತನೆ" ಎಂದು ನಿಶ್ಚಯುಮಾಡಿ "ಕ್ಷಮೆಯನ್ನು ಬೇಡುವುದಲ್ಲದೆ ಇನ್ನಾವ ಉಪಾಯುವೂ ಇಲ್ಲ"ವೆಂದು ಮನಸ್ಸಿನಿಂದ ಭಾವಿಸಿ ಮೋಹನನ ಹತ್ತಿರ ಹೋಗಿ: "ನಾನು ಕೆಟ್ಟೆನು. ನನ್ನನ್ನು ಕ್ಷಮಿಸಿರಿ. ನನ್ನನ್ನು ಸಂಕಟಕ್ಕೆ ಗುರಿಮಾಡಬೇಡಿರಿ. ಇನ್ನು ನಾನಿಂತಹ ಕಾರ್ಯವನ್ನು ಮಾಡುವದಿಲ್ಲವೆಂದು ಪಾದದಲ್ಲಿ ಪ್ರತಿಜ್ಞೆಯನ್ನು ಮಾಡುವೆನು. ನನ್ನ ತಪ್ಪನ್ನು ಮನ್ನಿಸಿ ಕಾಪಾಡಿ" ಎನ್ನುತ್ತಾ ದೀರ್ಘನಮಸ್ಕಾರವನ್ನು ಮಾಡಿದನು. ಮೋಹನನು ಹೇಳಿದನು: 'ಸಾಕು ಏಳಿರಿ.' ಇನ್‌ಸ್ಪೆಕ್ಟರರು ಎದ್ದು ಕೈ ಮುಗಿದುಕೊಂಡು ನಿಂತರು.

ಮೋಹನ—ಮೊದಲು ಅನ್ಯಾಯುವನ್ನು ಮಾಡುವದೇಕೆ? ಆ ಮೇಲೆ ಅಂಗಲಾಚಿ ಬೇಡುವದೇಕೆ? ಆ ತರುಣಿಯ ಗಂಡನನ್ನು ಎಲ್ಲಿ ಇರಿಸಿರುವಿರಿ? ಆತನನ್ನಿಲ್ಲಿಗೆ ಕರೆಸಿರಿ ನಿಮ್ಮ ನ್ಯಾಯುವನ್ನು ಪರೀಕ್ಷಿಸುವೆನು. ಒಡನೆ ಆಪಾದಿತನು ಕರೆತರಲ್ಪಟ್ಟನು. ಮೋಹನನು ಇನ್‌ಸ್ಪೆಕ್ಟರರನ್ನು ಕುರಿತು: "ಈತನು ಯಾವ ಆಧಾರದಿಂದ ಹಿಡಿಯಲ್ಪಟ್ಟನು?" ಎಂದು ಕೇಳಿದನು.

ಇನ್‌ಸ್ಪೆಕ್ಟರ್—'ಕೊಲೆಯು ನಡೆದಿದೆ' ಎಂಬ ಸಮಾಚಾರವು ನನಗೆ ಕರ್ಣಾಕರ್ಣಿಕೆಯಾಗಿ ತಿಳಿಯಿತು. ಒಡನೆ ನಾನು ಪೋಲೀಸರೊಡನೆ ಕೊಲೆಯು ನಡೆದ ಸ್ಥಳಕ್ಕೆ ಹೋದೆನು. ಕೆಲವು ವಿಚಾರಗಳಿಂದ ಈತನೇ ಕೊಲೆಯನ್ನು ಮಾಡಿದವನೆಂಬುದಾಗಿ ತಿಳಿಯಿತು.

ಮೋಹನ—ಅದು ಹೇಗೆ?

ಇನ್‌ಸ್ಪೆಕ್ಟರ್—ಕೊಲೆಯಾದ ಶವದ ಹತ್ತಿರ ಈತನು ನಿಂತಿದ್ದನು: 'ಕೊಲೆಯು ಹೇಗೆ ನಡೆಯಿತು' ಎಂದು ಆತನನ್ನು ಕೇಳಿದರೆ ಏನೊಂದೂ ಉತ್ತರವನ್ನು ಕೊಡದೆ ಭ್ರಾಂತನಂತೆ ನಿಂತಿದ್ದನು. ಇವನೇ ಕೊಲೆಯನ್ನು ನಡೆಸಿ ಭೀತಿಯಿಂದ ಧೈರ್ಯವಿಲ್ಲದೆ ಹೀಗೆ ಭ್ರಾಂತನಾಗಿ ನಿಂತಿರುವನೆಂದೂಹಿಸಿ

ನಾವೀತನನ್ನು ಹಿಡಿದೆವು.

ಮೋಹನ (ಬಂಧಿತನನ್ನು ಕುರಿತು)—ಇನ್ಸ್‌ಪೆಕ್ಟರರು ಹೇಳಿದುದು ನಿಜವೇ?

ಕೈದಿ—ಅವರು ಹೇಳಿದುದೆಲ್ಲವೂ ನಿಜವಿರಬಹುದು; ಆದರೆ ಕೊಲೆಯನ್ನು ಮಾತ್ರ ನಾನು ಮಾಡಿಲ್ಲ.

ಮೋಹನ—ಬೇರೆ ಯಾರು ಮಾಡಿದರು?

ಕೈದಿ—ಅದೆನಗೆ ತಿಳಿಯದು.

ಮೋಹನ—ಹಾಗಿದ್ದರೆ ಇನ್ಸ್‌ಪೆಕ್ಟರರು ನಿನ್ನನ್ನು ವಿಚಾರಿಸಿದ ಕಾಲದಲ್ಲಿ ಮೂಕೀಭಾವವನ್ನು ವಹಿಸಿದುದೇತಕ್ಕೆ?

ಕೈದಿ—ಅದನ್ನು ಹೇಳುವಂತಿಲ್ಲ.

ಮೋಹನ—ಇದು ಸರಿಯಾದ ಉತ್ತರವಲ್ಲ. ನಿನಗೆ ಬಿಡುಗಡೆ ಹೊಂದುವ ಇಚ್ಛೆ ಇದ್ದರೆ ಸರಿಯಾದ ಕಾರಣವನ್ನು ತಿಳಿಸಲೇ ಬೇಕು. ನಿನ್ನ ಈ ಮೂಕೀಭಾವದಿಂದ ನೀನೂ ಕೆಟ್ಟು, ನಿನ್ನವರನ್ನೂ ಕೆಡಿಸುವಿ. ಭಯಪಡಬೇಡ. ನಾನು ಮೋಹನನಿರುವೆನು.

ಕೈದಿ—ನಾನೊಂದು ಮಾತಿಗೆ ಕಟ್ಟು ಬಿದ್ದು ಹಾಗೆ ಆ ಕಾಲದಲ್ಲಿ ಸುಮ್ಮನಿರಬೇಕಾಯಿತು.

ಮೋಹನ—ಏನದು ಏಂತಹ ಮಾತು? ಸರಿಯಾಗಿ ಹೇಳು.

ಕೈದಿ—ಈಗ ಕೊಲೆಯಾದ ಮನುಷ್ಯನೂ ಬೇರೆ ನಾಲ್ಕಾರು ಜನರೂ ಸೇರಿ ಯಾವಾಗಲೂ ಸಾರಾಯಿಯನ್ನು ಕುಡಿದು ಇಸ್ಪೀಟು ಆಟವನ್ನು ಆಡಿ ಪರಸ್ಪರವಾಗಿ ಕಲಹವಾಡುತ್ತಿದ್ದರು. ಇದು ಯಾವಾಗಲೂ ನಡೆಯುತಲಿತ್ತು. ಎಂದಿನಂತೆ ಕೊಲೆನಡೆದ ದಿನವೂ ಮೊದಲು ಕುಡಿದು ಆ ಮೇಲೆ ಆಟವನ್ನಾಡಲು ಕುಳಿತು ಕಲಹವಾಡಿ ಒಬ್ಬನು ಮೃತನಾದನು.

ಮೋಹನ—ನೀನು ಆ ಕಾಲದಲ್ಲಿ ಅವರಿರುವ ಸ್ಥಳಕ್ಕೆ ಯಾಕೆ ಹೋಗಿದ್ದೆ?

ಕೈದಿ—ನಾನು ನನ್ನ ಭಾವನ ಮನೆಗೆ ಹೋಗಿ ಬೆಳಗಿನ ನಾಲ್ಕು ಗಂಟೆಯ ಸಮಯದಲ್ಲಿ ಹಿಂದಿರುಗಿ ಆ ದಾರಿಯಲ್ಲಿ ಬರುತ್ತಿದ್ದೆನು. ನನ್ನನ್ನು

ನೋಡಿದೊಡನೆ ಅಲ್ಲಿದ್ದ ಎಲ್ಲರೂ ಭೀತರಾದರು. ಶವವನ್ನು ಹೊರಗೆ ಹಾಕಿದ್ದರು. ನಾನು ಕೂಡಲೆ ಅಲ್ಲಿಂದ ಮನೆಗೆ ಬಂದೆನು.

ಮೋಹನ—ನೀನಲ್ಲಿ ಯಾರನ್ನು ನೋಡಿದೆ?

ಕೈದಿ—ರಾಮಚಂದ್ರರಾವ್, ಸೀತಾರಾಮ ಶೆಟ್ಟಿ, ಸುಬ್ಬು, ಇಬ್ರಾಹಿಮ್ ಇಷ್ಟು ಜನರು ಕಾಣಿಸಿದರು. ಬೇರೆ ಯಾರು ಅಲ್ಲಿ ಇದ್ದರೊ ಇಲ್ಲವೊ ತಿಳಿಯದು.

ಮೋಹನ—ನೀನು ಯಾರಿಗೆ ಮಾತು ಕೊಟ್ಟದ್ದು?

ಕೈದಿ—ರಾಮಚಂದ್ರರಾಯರ ಹೆಂಡತಿಗೆ.

ಮೋಹನ—ಯಾವಾಗ?

ಕೈದಿ—ನಾನು ಮನೆಗೆ ಹೋದೆನು. ಬೆಳಗಾಯಿತು. ಆಗ ರಾಮಚಂದ್ರರಾಯರ ಮನೆಯಿಂದ ಒಬ್ಬ ಸೇವಕನು ಬಂದು ನನ್ನನ್ನು ಕರೆದನು. ನಾನು ಅಲ್ಲಿಗೆ ಹೋದೆನು. ರಾಯರ ಹೆಂಡತಿಯು ನನ್ನ ಹತ್ತಿರ:-"ನೀನು ನೋಡಿದುದನ್ನು ಎಲ್ಲಿಯೂ ಪ್ರಕಟಿಸಬೇಡ. ಹಾಗೆ ಪ್ರಕಟಿಸಿದರೆ ಐದಾರು ಜನರ ಪ್ರಾಣಹರಣವಾಗುವದು. ನಾವೆಲ್ಲರೂ ಅನಾಥರಾಗುವೆವು. ಈ ಎಲ್ಲಾ ಪಾಪವೂ ನಿನ್ನನ್ನೇ ಸೇರುವದು. ಅದಕ್ಕಾಗಿ ನೀನು ಇದನ್ನು ಗುಪ್ತವಾಗಿ ಇಡಬೇಕು ನಿನ್ನೊಬ್ಬನಿಂದ ಐದಾರು ಜನರ ಪ್ರಾಣವುಳಿಯುವದು" ಎಂದು ನನ್ನನ್ನು ಕೇಳಿಕೊಂಡರು. ನಾನು ಸಮ್ಮತಿಸಿದೆನು. ತಿರುಗಿ ಅವರು ಹೇಳಿದರು: "ನೀನಿನ್ನೊಂದು ಸಹಾಯವನ್ನು ಮಾಡಬೇಕಾಗಿದೆ. ನೀನೀಗ ಹೋಗಿ ಶವದ ಹತ್ತಿರ ನಿಂತುಕೊಂಡಿರು. ಇಲ್ಲದೇ ಹೋದರೆ ನಮ್ಮವರ ಮೇರೆ ಸಂದೇಹಕ್ಕಾಸ್ಪದವಾದೀತು. ಮುಂದೆ ನಿನಗೆ ಯಾವ ವಿಧವಾದ ಭಯವೂ, ತೊಂದರೆಯೂ ಉಂಟಾಗದಂತೆ ರಾಯರು ಇರುವರು. ನಿನಗೆ ಇದರಿಂದ ಮಹತ್ಪುಣ್ಯವು ಲಭಿಸುವದು. ಹೋಗು."

ನಾನದಕ್ಕೆ ಒಪ್ಪಿದೆನು. ಇದು ವಸ್ತುಸ್ಥಿತಿಯು. ಅವರಂದಂತೆ ನಡೆದು, ಈ ಗತಿಗೆ ಬಂದೆನು.

ಮೋಹನ—ಯಾಕೆ! ಈ ಗತಿಯು ಚನ್ನಾಗಿಲ್ಲವೆ? ಚೆನ್ನಾಗಿಯೇ ಇದೆ. ಈ ರೀತಿ ಪುಣ್ಯಕರ್ಮವನ್ನು ಮಾಡಿದವರಿಗೆ ಇದೇ ಗತಿಯು.

ಹಾಗೆ ಅವರ ಮಾತನ್ನು ನಡೆಸಿರುವದು ಧರ್ಮವೆಂದು ತಿಳಿದೆಯಾ? ದುಷ್ಟರ ಅನ್ಯಾಯವನ್ನು ಪ್ರಕಟಿಸದೆ ಇರುವದೂ ಒಂದು ಪುಣ್ಯವೆಂದು ಭಾವಿಸಿದೆಯಾ? ಯಾರೀ ಧರ್ಮವನ್ನು ನಿನಗೆ ಬೋಧಿಸಿದರು? ಇದರಿಂದ ನಿನಗೆ ಲಜ್ಜೆಯುಂಟಾಗುವದಿಲ್ಲವೇ? ಈ ರೀತಿಯಾಗಿ ನೀನು ಕೊಲೆಯನ್ನು ಮುಚ್ಚಿಹಾಕಿರುವದರಿಂದ ಆ ದುಷ್ಟರ ಅನ್ಯಾಯವು ಇನ್ನೂ ಎಷ್ಟು ಹೆಚ್ಚಿರಬಹುದೆಂದು ನೀನು ಬಲ್ಲೆಯಾ! ನೀನು ಇಲ್ಲಿ ಸಿಕ್ಕಿ ಬಿದ್ದಿರುವದರಿಂದ ನಿನ್ನ ಮನೆಯವರ ಸ್ಥಿತಿಯು ಹೇಗಾಗಿದೆ ಎಂಬುದನ್ನು ಯೋಚಿಸಿರುವೆಯಾ? ಎದುರಿನಲ್ಲಿ ನಿಂತ ಈ ನೀಚನು ನಿನ್ನ ಮರ್ಯಾದೆಯನ್ನು ಎಷ್ಟರಮಟ್ಟಿಗೆ ಉಳಿಸಿರುವನೆಂದು ನಿನಗೇನಾದರೂ ತಿಳಿಯುವದೇ?

ಕೈದಿ—ಹೌದು. ನನ್ನಿಂದ ದೊಡ್ಡ ಅಪರಾಧವಾಯಿತೆಂದು ಬಂಧಿತನಾದ ಮೇಲೆ ತಿಳಿದೆನು. ಆ ಮೇಲೆ ಇಲ್ಲಿ ನಿಜಸ್ಥಿತಿಯನ್ನು ವರ್ಣಿಸಿದೆನು. ಯಾರೂ ನನ್ನ ಮಾತನ್ನು ಕೇಳಲೂ ಇಲ್ಲ; ನಂಬಲೂ ಇಲ್ಲ.

ಮೋಹನ—ನಿನ್ನ ಮಾತನ್ನು ನಂಬಿ ಯಾವುದು ನ್ಯಾಯವಾದುದು, ಯಾವುದು ಅನ್ಯಾಯವೆಂದು ವಿಚಾರಿಸಿ ನಿರ್ಣಯ ಮಾಡುವ ಶಕ್ತಿಯು ಈ ಪೋಲೀಸರಲ್ಲಿರುವದೇ? ಸರ್ಕಾರದಿಂದ ಸಂಬಳವನ್ನು ತಿನ್ನುತ್ತಿದ್ದುದಕ್ಕಾಗಿ ಯಾರಾದರೊಬ್ಬರ ಮೇಲೆ ತಪ್ಪನ್ನು ಹೊರಿಸಿ, ಅದನ್ನು ಸಾಧಿಸಲು ಬೇಕಾದ ಸಾಕ್ಷಿಗಳನ್ನೂ ಒದಗಿಸಿ ಕಾರ್ಯವನ್ನು ಪೂರೈಸಿ ಬಿಡುವರು. ಏನು! ಇನ್ಸಪೆಕ್ಟರರೇ! ನಾನು ಹೇಳುವದು ಸತ್ಯವಲ್ಲವೇ? ಈಗ ಯಾರು ಕೊಲೆ ಮಾಡಿದವರೆಂದು ತಿಳಿಯಿತೇ! ಇಷ್ಟು ಕಾರ್ಯವನ್ನು ಮಾಡಲು ಶಕ್ತಿಯಿಲ್ಲದೆ ಇದ್ದ ಮೇಲೆ ನೀವೀ ಕಾರ್ಯಕ್ಕೆ ಯಾಕೆ ಸೇರಬೇಕಾಗಿತ್ತು? ನಾಲ್ಕು ಮನೆಗಳಲ್ಲಿ ಭಿಕ್ಷೆ ಬೇಡಿದರೆ ಹೊಟ್ಟೆಯು ತುಂಬುವದಿಲ್ಲವೇ? ಎಂತಹ ಅನ್ಯಾಯವನ್ನು ಒಂದರಮೇಲೊಂದು ಒಂದುನ್ನು ಮಾಡಿರುವಿರಿ! ನಿಮ್ಮ ಮೇಲಿನ ಅಧಿಕಾರಿಗಳು ನಿಮ್ಮೀ ಅನ್ಯಾಯವನ್ನು ಕೇಳಿದರೆ ಒಡನೆ ನಿಮ್ಮನ್ನು ಉದ್ಯೋಗದಿಂದ ತೆಗೆದುಹಾಕುವದಿಲ್ಲವೇ? ನಿಮ್ಮ ಅನ್ಯಾಯಕ್ಕೆ ಅಂತಹ ಶಿಕ್ಷೆಯನ್ನು ನಾನೇ ವಿಧಿಸುತ್ತಿದ್ದೆನು; ಆದರೆ ನಿಮ್ಮೊಬ್ಬರ ಅನ್ಯಾಯದಿಂದ ನಿಮ್ಮ ಇಡೀ ಕುಟುಂಬವೇ ಭಿಕ್ಷೆಬೇಡಬೇಕಾದೀತೆಂದು ಸುಮ್ಮನಿರುವೆನು.

ಇನ್ನಾದರೂ ಬುದ್ಧಿಯು ಬರಬಹುದೆಂಬ ನಿರೀಕ್ಷಣೆಯಿಂದ ಈ ಬಾರಿ ಇಷ್ಟಕ್ಕೇ ನಿಲ್ಲಿಸಿರುವನು. ಇನ್ನು ಎಚ್ಚರದಿಂದ ಇದ್ದು ಕಾರ್ಯವನ್ನು ನಡೆಸಿರಿ. ನೀವೀಗಲೇ ಹೋಗಿ ಈತನು ತಿಳಿಸಿದವರನ್ನು ಹಿಡಿಯಬೇಕು. ವಿಲಂಬವಾದರೆ ಕಾರ್ಯವು ಹಾಳಾಗಬಹುದು. ನಾನೀಗ ಹೊರಟು ಹೋಗುವೆನು. ಈತನನ್ನು ಈಗಲೇ ಬಿಡಬೇಡಿರಿ. ಯಾಕೆಂದರೆ ಇವನೀಗ ಮನೆಗೆ ಹೋದೊಡನೆ ಕೊಲೆ ಪಾತಕಿಗಳು ಜಾಗರೂಕರಾಗುವರು. ಅವರನ್ನು ಮೊದಲು ಹಿಡಿದು ಆ ಮೇಲೆ ಈತನನ್ನು ಬಿಡಿರಿ" ಎಂದು ಹೇಳಿ ಮೋಹನನು ಕೈದಿಯ ಹತ್ತಿರ:"ನೀನಿನ್ನು ಸುಖವಾಗಿ ಮನೆಯನ್ನು ಸೇರುವಿ. ಇಂತಹ ಪುಣ್ಯಕಾರ್ಯಗಳಿಗೆ ಇನ್ನು ಮೇಲೆ ಸೇರಬೇಡ" ಎಂದು ನುಡಿದು ಹೊರಟು ಹೋದನು. ಇನ್ಸಪೆಕ್ಟರರು ಒಡನೆ ತಕ್ಕಷ್ಟು ಪೋಲೀಸರ ಸಹಾಯವನ್ನು ತೆಗೆದುಕೊಂಡು ಗೋಪಾಲನು ತಿಳಿಸಿದವರ ಮನೆಗಳಿಗೆ ಹೋದರು. ಕೈದಿಯ ಹೆಸರು ಗೋಪಾಲ. ರಾಮಚಂದ್ರರಾಯರ ಹೊರತು ಉಳಿದವರಾರೂ ಇನ್ಸಪೆಕ್ಟರರ ಕಣ್ಣುಗಳಿಗೆ ಗೋಚರರಾಗಲಿಲ್ಲ. ಉಳಿದವರನ್ನು ಹಿಡಿಯದೆ ಮೊದಲೇ ರಾಮಚಂದ್ರರಾಯರನ್ನು ಹಿಡಿಯಲು ಇನ್ಸಪೆಕ್ಟರರಿಗೆ ಮನಸ್ಸಿರಲಿಲ್ಲ ಯಾಕೆಂದರೆ ರಾಮಚಂದ್ರರಾಯರು ಆ ಗ್ರಾಮದಲ್ಲಿ ಎಲ್ಲರಿಗಿಂತಲೂ ಸ್ವಲ್ಪ ಗೌರವಶಾಲಿಗಳಾಗಿಯೂ, ಧನಿಕರಾಗಿಯೂ ಇದ್ದರು. ರಾಮಚಂದ್ರರಾಯರು ಕೊಲೆಯ ವಿಚಾರದಲ್ಲಿ ಪ್ರವೇಶಿಸಿರುವರೋ, ಇಲ್ಲವೋ ಎಂಬುದು ಇನ್ಸಪೆಕ್ಟರರಿಗೆ ಸಂದೇಹವಾಗಿತ್ತು; ಆದರೆ ಹಿಡಿಯದೆ ಸುಮ್ಮನೆ ಕುಳಿತುಕೊಳ್ಳಲು ಮೋಹನನ ಭೀತಿಯು ಬಾಧಿಸುತ್ತಲಿತ್ತು; ಆದರೂ ನೋಡಿ ಬರೋಣ ಎಂದು ಧೈರ್ಯದಿಂದ ರಾಯರ ಮನೆಗೆ ಹೋದರು. ಇರತಕ್ಕ ಸ್ಥಿತಿಯನ್ನು ತಿಳಿಸಿದರು. "ಕೊಲೆಯ ಆಪಾದನೆಯು ನಿಮ್ಮ ಮೇಲೆಯೂ, ಬೇರೆ ಕೆಲವರ ಮೇಲೆಯೂ ಬಂದಿದೆ. ಉಳಿದವರಲ್ಲಿ ಯಾರೂ ನಮ್ಮ ಕಣ್ಣಿಗೆ ಸಿಗದೆ ತಪ್ಪಿಸಿಕೊಂಡಿರುವದನ್ನು ನೋಡಿದರೆ ಆಪಾದನೆಯು ಸತ್ಯವಾಗಿ ತೋರುತ್ತದೆ. ಇದರಲ್ಲಿ ತಮ್ಮ ಅಭಿಪ್ರಾಯವೇನು?"

ರಾಯರು ಯಾವ ಮುಖವಿಕಾಸವನ್ನೂ ತೋರಿಸದೆ ಗಾಂಭೀರ್ಯ

ದಿಂದ ನುಡಿದರು. "ಅಪರಾಧಕರು ಯಾರು?"

ಇನ್‌ಸ್ಪೆಕ್ಟರ್ ಅದನ್ನೀಗ ತಿಳಿಸಲು ನನಗೆ ಮೇಲಿನ ಅಪ್ಪಣೆಯಿಲ್ಲ. ಮೇಲಧಿಕಾರಿಗಳ ಆಜ್ಞೆಯಿಂದ ನಾನೀಗ ಇಲ್ಲಿಗೆ ಬಂದಿರುವೆನು. ನನ್ನದೇನೂ ಇದರಲ್ಲಿ ತಪ್ಪಿಲ್ಲ ಈಗ ನಿಮ್ಮ ಅಭಿಪ್ರಾಯವೇನು?

ರಾಮಚಂದ್ರರಾಯ—ಏನೀ ಇನ್‌ಸ್ಪೆಕ್ಟರರೇ, ಇದೆಲ್ಲಿಯ ರೂಲನ್ನು ನನ್ನ ಹತ್ತಿರ ಹೇಳುತ್ತಿರುವಿರಿ? ಉಳಿದವರನ್ನು ವಿಚಾರಿಸದೆ ಥಟ್ಟನೆ ನಮ್ಮ ಮನೆಗೇ ಬರಲು ನಿಮಗೆ ಯಾರು ದಾರಿಯನ್ನು ತೋರಿಸಿದರು? ಉಳಿದವ ರನ್ನು ಹಿಡಿಯದೆ ನೀವಿಲ್ಲಿ ಬರಬೇಡಿ. ಹೂ. ನಡೆಯಿರಿ" ಎಂದು ರಾಯರು ಗಟ್ಟಿಯಾಗಿ ನುಡಿದರು. ಇನ್‌ಸ್ಪೆಕ್ಟರರು ದಾಕ್ಷಿಣ್ಯದಿಂದಲೂ, ಸರಿಯಾದ ಕಾರಣವನ್ನು ತೋರಿಸಲು ಅಸಾಮರ್ಥ್ಯದಿಂದಲೂ ಮೌನವಂ ತಾಳಿ ಹಿಂದಿ ರುಗಿದರು. ಗೋಪಾಲನನ್ನು ಮನೆಗೆ ಕಳುಹಿಸಿ, ರಾಯರನ್ನು ಬಿಟ್ಟು ಉಳಿ ದವರನ್ನು ಹಿಡಿಯಲು ಪ್ರಯತ್ನಿಸಿದರು. ಹದಿನೈದು ದಿನಗಳು ಕಳೆದರೂ ತಪ್ಪಿಸಿಕೊಂಡವರನ್ನು ಹಿಡಿಯಲಾಗಲಿಲ್ಲ. ಇನ್‌ಸ್ಪೆಕ್ಟರರು ಆ ಕಾರ್ಯ ದಲ್ಲಿ ಏನನ್ನು ಮಾಡುವದಕ್ಕೂ ಶಕ್ತರಾಗಲಿಲ್ಲ. ಅವರಿರುವ ಸ್ಥಳದಲ್ಲಿಯೇ ನಾಲ್ಕಾರು ಕಳವುಗಳೂ ಆದವು. ಪೋಲೀಸರಿಂದ ಅದನ್ನು ತಡೆಯಲಾಗ ಲಿಲ್ಲ. ಮೇಲಧಿಕಾರಿಗಳ ಭೀತಿಯು ಇನ್‌ಸ್ಪೆಕ್ಟರರಿಗೆ ಅಧಿಕವಾಗತೊಡಗಿತು. ತಮ್ಮಿಂದ ಈ ಕಾರ್ಯವು ಸಾಧ್ಯವಾಗಲಾರದೆನ್ನಲು ಒಂದು ಕಡೆಯಲ್ಲಿ ಭಯ, ಇನ್ನೊಂದೆಡೆಯಲ್ಲಿ ಮರ್ಯಾದೆಯ ಹಾನಿ. ಪಾಪ. ಅವರು ಇಂತಹ ಸಂಕಟದಲ್ಲಿ ಏನನ್ನು ತಾನೇ ಮಾಡಿಯಾರು?

---

## ಚತುರ್ದಶ ಗುಚ್ಛ.

ಪ್ರಶ್ನೆ—'ರಾತ್ರಿ ಉಳಿಯಲು ನಿಮ್ಮ ಮನೆಯೊಳಗೆ ಸ್ವಲ್ಪ ಸ್ಥಳವು ಸಿಗಬಹುದೇ?'

ಉತ್ತರ—"ಇಲ್ಲ, ಮನೆಯು ತೀರಾ ಚಿಕ್ಕದು."

ಪ್ರಶ್ನೆ—"ಏನೋ ಇದ್ದದ್ದರಲ್ಲಿ ಸ್ವಲ್ಪ ಅನುಕೂಲತೆಯನ್ನು ದಯ

ಪಾಲಿಸುವಿರಾ?"

ಉತ್ತರ— ಹೇಳಿದ್ದು ತಿಳಿಯುವದಿಲ್ಲವೆ?"

ಪ್ರಶ್ನೆ ಮಾಡಿದ ವ್ಯಕ್ತಿಯು ವೇಷದಿಂದ ಮುಸಲ್ಮಾನನಾಗಿದ್ದನು. ಸಾಯಂಕಾಲ ಆರು ಗಂಟೆಯ ಸಮಯ. ಹಿಂದಿನ ಗುಚ್ಛದಲ್ಲಿ ಪರಿಚಿತನಾದ ಗೋಪಾಲನ ಮನೆಯ ಮುಂದೆ ಈ ವ್ಯವಹಾರವು ಆ ಮುಸಲ್ಮಾನನಿಗೂ, ಗೋಪಾಲನ ಮುದಿತಾಯಿಗೂ ನಡೆದಿತ್ತು. ಮನೆಯ ಬಾಗಿಲಿನಲ್ಲಿ ಮುದುಕಿಯು ನಿಂತು ಉತ್ತರವನ್ನು ಕೊಡುತ್ತಿದ್ದಳು.

ಮುಸಲ್ಮಾನ—ಕತ್ತಲೆಯಾಗುತ್ತಾ ಬಂದಿತು. ಬೇರೆ ಎಲ್ಲಿಯೂ ಪರಿಚಯವಿಲ್ಲ. ಬೆಳಿಗ್ಗೆ ಹೊರಟು ಹೋಗುವೆನು. ಮನೆಯ ಹೊರಗೆ ಈ ಜಗಲಿಯಲ್ಲಿ ಮಲಗಲು ಅವಕಾಶವನ್ನಿತ್ತರೆ ಸಾಕು. ಅಷ್ಟನ್ನೇ ನಾನು ಕೇಳಿರುವದು. ರಾತ್ರಿ ಸ್ವಲ್ಪ ಏನನ್ನಾದರೂ ತಿನ್ನಲು ಕೊಟ್ಟರೆ ಸಾಕು.

ಮುದುಕಿ—ಎಷ್ಟೋ ದೊಡ್ಡ ಮನೆಗಳು ಹತ್ತಿರದಲ್ಲಿಯೇ ಇವೆ. ಅಲ್ಲಿಗೆ ಹೋಗು. ನೋಡು! ಅಲ್ಲಿ ಹಂಚಿನ ಮನೆಗಳಿವೆ, ಎಂದು ಮುದುಕಿಯು ಕೈಯಿಂದ ಮುಂದೆ ತೋರಿಸಿದಳು; ಆದರೂ ಮುಸಲ್ಮಾನನು ಅಲ್ಲಿಂದ ಹೊರಡಲಿಲ್ಲ. ಅಷ್ಟರಲ್ಲಿ ಗೋಪಾಲನು ಹೊರಗೆ ಹೋಗಿದ್ದವನು ಹಿಂದಿರುಗಿ ಬಂದನು. ಮುದುಕಿಯು ಮಗನ ಹತ್ತಿರ ಮುಸಲ್ಮಾನನ ಪೀಡನೆಯನ್ನು ಹೇಳಿದಳು. ಮುಸಲ್ಮಾನನು ಗೋಪಾಲನ ಕೈಯಲ್ಲಿ ಒಂದು ವ್ಹಿಜಿಟಿಂಗ್ ಕಾರ್ಡನ್ನು ಕೊಟ್ಟು 'ನಾನು ಆತನ ಮಿತ್ರನು' ಎಂದನು. ಕಾರ್ಡಿನ ಮೇಲೆ ಮೋಹನನ ವಿಳಾಸವಿತ್ತು. ಗೋಪಾಲನು ಹೇಳಿದನು. "ನಾನಿದನ್ನು ಹೇಗೆ ನಂಬಲಿ? ಇದು ವೇಷವೋ, ನಿಜಸ್ಥಿತಿಯೋ ನಾನು ಹೇಗೆ ತಿಳಿಯಲಿ? ನೋಡಿದರೆ ಯಾರಿಗಾದರೂ ನಿಜಸ್ಥಿತಿಯು ತಿಳಿಯುವದು ಹೇಗೆ?"

ಮುಸಲ್ಮಾನನು ಒಂದು ಕಾಗದದಲ್ಲಿ ಏನೋ ಬರೆದುಕೊಟ್ಟು 'ಇದನ್ನು ನೋಡು. ಈ ವಿಷಯವು ನಿನಗೂ ತಿಳಿದಿರಲಾರದು. ನಿನ್ನ ಪತ್ನಿ, ಇನ್‌ಸ್ಪೆಕ್ಟರ್, ಮೋಹನ ಈ ಮೂರೇ ಜನರು ಮೊದಲು ಅರಿತಿದ್ದರು" ಎಂದನು. ಗೋಪಾಲನು ಕಾಗದವನ್ನು ಓದಿ ವಿವರ್ಣಮುಖನಾದನು. ಲಜ್ಜೆಯಿಂದ ತಲೆಯು ತಾನಾಗಿಯೇ ತಗ್ಗಿಹೋಯಿತು. ಪತ್ನಿಯನ್ನು ಕರೆದು ಮೆಲ್ಲನೆ

ಕೇಳಿದನು ಆಕೆಯು ಮಾತನಾಡದೆ ಸುಮ್ಮನೆ ನಿಂತಳು. "ಇದು ನಿಶ್ಚಯ"ವೆಂದು ಗೋಪಾಲನು ತಿಳಿದುಕೊಂಡು ಮುಖವನ್ನು ತಗ್ಗಿಸಿ ಯೋಚಿಸುತ್ತಾ ನಿಂತನು. ಮುಸಲ್ಮಾನನು ನಗುತ್ತ ಹೇಳಿದನು:-"ಇದೇನು ಗೋಪಾಲ! ಯೋಚನೆಯನ್ನು ಮಾಡುತ್ತಿರುವಿ? ನನ್ನನ್ನು ನಂಬಿದೆಯಾ? ಒಳಗೆ ಬರಬಹುದೊ?" ಒಡನೆ ಗೋಪಾಲನು: "ಬನ್ನಿ. ತಪ್ಪಾಯಿತು. ಪರೀಕ್ಷಿಸಿದೆನೆಂದು ಕೋಪವನ್ನು ಮಾಡಬೇಡಿರಿ" ಎಂದು ಹೇಳಿ ಒಳಗೆ ಮುಸಲ್ಮಾನನನ್ನು ಕರೆದುಕೊಂಡು ಹೋದನು. ಒಳಗೆ ಹೋಗಿ ಮುಸಲ್ಮಾನನು ಮೇಲಿನ ವೇಷವನ್ನು ತೆಗೆದು: "ಈಗ ಸಂಪೂರ್ಣವಾಗಿ ಸಂದೇಹವು ಪರಿಹಾರವಾಗಲಿ" ಎಂದನು

ಗೋಪಾಲ—ಇಲ್ಲ. ಇನ್ನೇನೂ ಸಂದೇಹವಿಲ್ಲ. ಬಡವರ ಮನೆಗೆ ಭಾಗ್ಯಲಕ್ಷ್ಮಿಯು ಬಂದಂತಾಯಿತು. ತಮ್ಮ ನಾಮಧೇಯವನ್ನು ತಿಳಿಸಿದರೆ ಕೇಳುತ್ತಿದ್ದೆವು" 'ಪ್ರಿಯನಾಥ'ನೆಂದು ಉತ್ತರವು ಬಂದಿತು.

ಪ್ರಿಯನಾಥ:—ಅದೇನು, ಕಾಗದವನ್ನು ನೋಡಿ ಯೋಚನೆಗೆ ಆರಂಭಿಸಿದಿ?

ಗೋಪಾಲ—ಯೋಚನೆಯಾಗಲಾರದೇ? ತಾವೇ ಹೇಳಿರಿ.

ಪ್ರಿಯನಾಥ—ಈ ಅಪರಾಧವು ಒಬ್ಬರಿಂದಲೇ ನಡೆಯಲಿಲ್ಲ ನಿಮ್ಮೆಲ್ಲರಲ್ಲಿಯೂ ತಪ್ಪು ಸೇರಿದೆ. ಅದರಲ್ಲಿಯೂ ನಿನ್ನ ತಪ್ಪೇ ಅಧಿಕವಾಗಿದೆ ಎಂದು ಹೇಳಬಹುದು. ಕೃತಯುಗದವನಂತೆ ಕೊಟ್ಟ ಮಾತಿಗೆ ತಪ್ಪಬಾರದೆಂದು ಸುಮ್ಮನೆ ಇದ್ದು ಸೆರೆಗೆ ಸಿಕ್ಕಿಬಿದ್ದಿರುವದರಿಂದಲೇ ನಿನ್ನ ಪತ್ನಿಯು ಆ ಅವಸ್ಥೆಯನ್ನು ಅನುಭವಿಸಬೇಕಾಯಿತು. ಇದು ನಿನ್ನ ತಪ್ಪಲ್ಲವೇ?

ಗೋಪಾಲ—ಇನ್ಸಪೆಕ್ಟರರ ತಪ್ಪು ಇಲ್ಲವೇ?

ಪ್ರಿಯನಾಥ—ಇದೆ. ಅನಾಥಳಾದ ಸ್ತ್ರೀಯು ಬಂದು ಬೇಡಿದರೆ ಆಕೆಯನ್ನವಮಾನಿಸುವದು ತಪ್ಪು; ಆದರೆ ಈ ಕಾಲದಲ್ಲಿ ಮದೋನ್ಮತ್ತರ ಸ್ಥಿತಿಯು ಹೇಳಲಶಕ್ಯವು. ಈಗ ಇದನ್ನು ಪ್ರಕಟಿಸಿದುದರಿಂದ ಈಕೆಯ ಮನಸ್ಸಿಗೆ ತುಂಬಾ ವ್ಯಥೆಯಾಗಿರಬಹುದು. ಈ ಕಾಲದಲ್ಲಿ ಪ್ರಕಟಿಸಲು ಎರಡು ಕಾರಣಗಳಿವೆ.

ಮೊದಲನೇ ಕಾರಣ:-ಆಕೆಯು ಲಜ್ಜೆಯಿಂದ ಈ ವಿಷಯವನ್ನು ನಿನ್ನ ಹತ್ತಿರ ತಿಳಿಸದೆ ಕಾಲಾಂತರದಲ್ಲಿ ಇನ್ನೊಬ್ಬರಿಂದ ನೀನದನ್ನು ತಿಳಿದು ಸಂದೇಹಪಟ್ಟರೆ ಅನರ್ಥ ಒದಗಿ ಆಕೆಗೇ ತೊಂದರೆಯುಂಟಾಗಬಹುದು.

ಎರಡನೇ ಕಾರಣ:—ನನ್ನ ಪರಿಚಯವಿಲ್ಲದ ನೀವು ನನ್ನನ್ನು ಮನೆಯೊಳಗೆ ಪ್ರವೇಶಗೊಳಿಸದೆ ಇರುತ್ತಿರಲು, ನಿನಗೆ ನಂಬಿಕೆಯನ್ನುಂಟು ಮಾಡುವ ಗುರುತೊಂದನ್ನು ತೋರಿಸಬೇಕಾಗಿತ್ತು. ಈ ಎರಡು ಕಾರಣಗಳಿಂದ ಆ ವಿಷಯವನ್ನು ತಿಳಿಸಿದೆನು. ಈಗ ನಿನ್ನ ಮನೆಯೊಳಗೆ ವಾಸವಿರಲು ಬಂದೆನು. ಇಲ್ಲಿನ ಕೊಲೆಯ ವಿಚಾರವು ಗುಪ್ತವಾಗಿಯೇ ನಿಂತಿದೆ. ಇನ್ನೂ ಬೇರೆ ಕೆಲಸಗಳಿವೆ. ಸ್ವಲ್ಪ ದಿನಗಳ ವರೆಗೆ ಇಲ್ಲಿ ನಿಲ್ಲುವ ಸಂಭವವೂ ಬರಬಹುದು. ಏನು ಸ್ಥಳವಿರುವದೇ? ಅಥವಾ ನಿನ್ನ ತಾಯಿಯು ಹೇಳಿದಂತೆ ಹಂಚಿನ ಮನೆಗಳಿಗೆ ಹೋಗಬೇಕೇ?

ಗೋಪಾಲ—ಇಲ್ಲ. ತಿಳಿಯದೆ ಹಾಗೆ ಹೇಳಿದೆವು. ನಮ್ಮ ಮನೆಯೆಲ್ಲವೂ ನಿಮ್ಮದೇ ಆಗಿದೆ. ಬೇರೆ ವಿಧವಾಗಿ ತಿಳಿಯಬಾರದು. ನನ್ನ ಸರ್ವಸ್ವವನ್ನೂ ನಿಮ್ಮ ಮಿತ್ರರೇ ಉಳಿಸಿದರು. ಯಾವ ಕಾರ್ಯವನ್ನು ಮಾಡಬೇಕಾದರೂ ನಾವು ಸಿದ್ಧರಿರುವೆವು.

ಪ್ರಿಯನಾಥ—ಆಗಲಿ. ನಾನು ಇಲ್ಲಿ ಇರುವದು ಅತ್ಯಂತ ಗೋಪ್ಯವಾಗಿ ಮಾತ್ರ ಇರಬೇಕು. ಯಾರಿಗೂ ತಿಳಿಯಬಾರದು. ಇಲ್ಲಿ ನಡೆದ ಕೊಲೆಯ ವಿಚಾರದಲ್ಲಿ ನೀನು ಏನನ್ನು ತಿಳಿದಿರುವಿ? ಇನ್ಸಪೆಕ್ಟರರು ಯಾವ ಸ್ಥಿತಿಯಲ್ಲಿ ಇರುವರು?

ಗೋಪಾಲ—ಇನ್‌ಸ್ಪೆಕ್ಟರರ ಯಾವ ಕಾರ್ಯವೂ ಸಫಲವಾಗಲಿಲ್ಲ. ರಾಮಚಂದ್ರರಾಯರೊಬ್ಬರನ್ನು ಬಿಟ್ಟು ಉಳಿದವರೆಲ್ಲರೂ ಪರಾರಿಯಾಗಿರುವರು. ಅವರೊಬ್ಬರು ಓಡಿ ಹೋಗದೆ ಇಲ್ಲಿಯೇ ಇರುವುದನ್ನು ನೋಡಿ ಅವರು ನಿರಪರಾಧಿಗಳೆಂದು ಇನ್‌ಸ್ಪೆಕ್ಟರರ ಊಹೆ ಇದೆ.

ಪ್ರಿಯನಾಥ—ನಿನ್ನ ಅಭಿಪ್ರಾಯವೇನು?

ಗೋಪಾಲ—ನನಗವರಲ್ಲಿ ವಿಶ್ವಾಸವಿಲ್ಲ. ಹಿಂದೆ ನಡೆದುದೂ, ಈಗ ನಡೆಯುತ್ತಿರುವುದೂ ಎಲ್ಲವೂ ಅವರ ಅಧ್ಯಕ್ಷತೆಯಿಂದಲೇ ನೆರವೇರುತ್ತಿದೆ

ಎಂದು ನನಗೆ ತೋರುತ್ತಿದೆ.

ಪ್ರಿಯನಾಥ—ಹಾಗಾದರೆ ಒಡನೆ ರಾಯರನ್ನು ಹಿಡಿದರೆ ತೊಂದರೆ ಏನು?

ಗೋಪಾಲ—ನನಗೆ ಮಾತ್ರ ಹಾಗೆ ತೋರುತಲಿದೆ. ವಸ್ತುಸ್ಥಿತಿಯು ಹೇಗಿರುವದೋ ಯಾರು ಬಲ್ಲರು! ನಿಜವು ಯಾವುದೆಂಬದನ್ನು ಪರೀಕ್ಷಿಸಿ ನಿರ್ಣಯವನ್ನು ಮಾಡಲು ತಾವಿರುವಿರಿ.

ಪ್ರಿಯನಾಥ—ನಿಜ. ಪರೀಕ್ಷಿಸುವೆನು. ಪ್ರಿಯನಾಥನು ಗೋಪಾಲನ ಮನೆಯಲ್ಲಿ ವಾಸವಿದ್ದು ಗೋಪಾಲನು ಸಂದೇಹದಿಂದ ತೋರಿಸಿದ ಮನೆಗಳೆಲ್ಲವನ್ನೂ ಪರೀಕ್ಷಿಸುತ್ತಾ ಬಂದನು ರಾಮಚಂದ್ರರಾಯರನ್ನು ಪರೀಕ್ಷಿಸುವದೇ ಪ್ರಥಮವೂ, ಪ್ರಮುಖವೂ ಆದ ಕಾರ್ಯವೆಂದು ಪ್ರಿಯನಾಥನು ಭಾವಿಸಿದನು. ಎರಡು ಬಾರಿ ವೇಷಧಾರಿಯಾಗಿ ರಾಯರ ಮನೆಯೊಳಗೆ ಹೋಗಿದ್ದನು. ಅದರಿಂದ ಪ್ರಯೋಜನವು ಮಾತ್ರ ಸಿಗಲಿಲ್ಲ; ಆದರೂ ಅವರನ್ನು ಕೊನೆಯತನಕ ಪರೀಕ್ಷಿಸಿಯೇ ತೀರುವೆನೆಂದು ಹಟಹಿಡಿದು ತಿರುಗುತಲಿದ್ದನು. ಪ್ರಯೋಜನವೇನೂ ಲಭಿಸದೆ ಆರು ದಿನಗಳು ವ್ಯರ್ಥವಾಗಿ ಪ್ರಿಯನಾಥನಿಗೆ ಕಳೆದು ಹೋದವು. ರಾಯರು ಮನೆಯಿಂದ ಹೊರಗೆ ಎಲ್ಲಿಗೂ ಹೊರಡುತ್ತಿಲ್ಲವಾದುದರಿಂದ ಅವರನ್ನು ಪರೀಕ್ಷಿಸಲು ಪ್ರಿಯನಾಥನಿಗೆ ಕಷ್ಟವಾಗಿತ್ತು. ಹಗಲೂ ರಾತ್ರಿಯೂ ಒಬ್ಬನೇ ಹೊಂಚುಹಾಕುತ್ತಿರುವದೆಂದರೆ ಸಣ್ಣ ಕಷ್ಟವೇ! ರಾಯರನ್ನು ಹಿಡಿದು ಅವರಿಂದಲೇ ಉಳಿದವರನ್ನು ಹಿಡಿಯಬೇಕಾಗಿತ್ತು. ಒಂದೊಂದು ಸಮಯದಲ್ಲಿ ಪ್ರಿಯನಾಥನ ಮನಸ್ಸಿನಲ್ಲಿ: "ರಾಯರು ಈ ಕಾರ್ಯದಲ್ಲಿ ಸೇರಿರುವರೋ ಇಲ್ಲವೊ" ಎಂಬ ಸಂದೇಹವೂ ಬಂದುಬಿಡುತ್ತಿತ್ತು; ಆದರೂ ಹಿಡಿದ ಕೆಲಸವನ್ನು ಕೊನೆಗಾಣಿಸುವ ದೃಢನಿಶ್ಚಯವು ಇದ್ದುದರಿಂದ ಪ್ರಿಯನಾಥನು ಹಿಂದೆಗೆಯುತ್ತಲಿರಲಿಲ್ಲ. ರಾಯರ ಮನೆಗೆ ಅನ್ಯರಾರೂ ಬರುತ್ತಿರಲಿಲ್ಲ. ಬರುತ್ತಿದ್ದರೆ ಅವರನ್ನಾದರೂ ಪ್ರಿಯನಾಥನು ಹಿಂಬಾಲಿಸುತ್ತಿದ್ದನು. ಆರನೇ ದಿನ ರಾತ್ರಿ ಪ್ರಿಯನಾಥನು ಹೊಂಚುಹಾಕಿ ನಿಂತಿರಲು, ಒಂಭತ್ತು ಗಂಟೆಯ ಸಮಯದಲ್ಲಿ ಒಂದು ವ್ಯಕ್ತಿಯು ಅಶ್ವಾರೋಹಿಯಾಗಿ ರಾಯರ ಮನೆಯಿಂದ ಹೊರ

ಟಿತು. ಅಶ್ವಾರೋಹಿಯು ಯಾರೆಂಬದನ್ನು ನೋಡಲು ಪ್ರಿಯನಾಥನು ದುರ್ಬಿನ್ನನ್ನು ಕಣ್ಣಿಗೆ ಇಟ್ಟುಕೊಂಡನು. ರಾಮಚಂದ್ರರಾಯರೇ ಎಂದು ತಿಳಿಯಿತು. ರಾಯರನ್ನು ಹಿಂಬಾಲಿಸಲು ಪ್ರಿಯನಾಥನು ಸಿದ್ಧನಾಗುವಷ್ಟ ರಲ್ಲಿ ಕುದುರೆಯು ಉತ್ತರ ದಿಕ್ಕಿಗಭಿಮುಖವಾಗಿ ವೇಗದಿಂದ ಹೊರಟು ಹೋಯಿತು. ಕಾಲುನಡಿಗೆಯಿಂದ ಆತನನ್ನು ಹಿಂಬಾಲಿಸುವದು ಅಸಾಧ್ಯ ವೆಂದು ಪ್ರಿಯನಾಥನು ಸುಮ್ಮನೆ ನಿಂತನು. ಮಾರನೇ ದಿನ ಬೆಳಿಗ್ಗೆ ಆರು ಗಂಟೆಯ ಸಮಯದಲ್ಲಿ ಪಾದಚಾರಿಯಾಗಿ ರಾಯರು ಮನೆಗೆ ಬರುತ್ತಿರುವ ದನ್ನು ಪ್ರಿಯನಾಥನು ನೋಡಿ ಅಲ್ಲಿಂದ ಗೋಪಾಲನ ಮನೆಗೆ ಹೊರಟು ಹೋದನು. "ಆ ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ ಪಕ್ಕದ ಊರಿನಲ್ಲಿ ಹಿಂದಿನ ರಾತ್ರಿ ಒಂದು ದೊಡ್ಡ ಕಳವು ನಡೆಯಿತು" ಎಂಬ ಒಂದು ಸಮಾ ಚಾರವು ಎಲ್ಲಾ ಕಡೆಗಳಲ್ಲಿಯೂ ಹಬ್ಬಿ ಪ್ರಿಯನಾಥನಿಗೂ ತಿಳಿಯಿತು. ಮಾರನೇ ದಿನ ಪ್ರಿಯನಾಥನು (ಆ ಗ್ರಾಮಕ್ಕೆ ಎರಡು ಮೈಲಿ ದೂರದಲ್ಲಿ ರುವ) ಪೋಲೀಸ ಸ್ಟೇಷನ್ನಿಗೆ ಹೋಗಿ ಇನ್ಸಪೆಕ್ಟರರಿಗೆ ತನ್ನ ಪರಿಚಯವನ್ನು ತಿಳಿಸಿ "ಮೋಹನನು ಹೇಳಿ ಹೋದ ಕೊಲೆಯ ವಿಚಾರವೇನಾಯಿತು" ಎಂದು ಕೇಳಿದನು.

ಇನ್ಸಪೆಕ್ಟರ—ಯಾವದೂ ನಿಶ್ಚಯವಾಗಲಿಲ್ಲ. ಓಡಿ ಹೋದ ಅಪಾ ದಿತರು ಇನ್ನೂ ಹಿಂದಿರುಗಲಿಲ್ಲ. ಕಳವುಗಳು ಹತ್ತಿರವಿರುವ ಊರುಗಳ ಲ್ಲಿಯೇ ಈಗ ತುಂಬಾ ನಡೆಯುತಲಿವೆ. ಓಡಿ ಹೋದ ಜನರೇ ಇದನ್ನು ನಡೆಸುತ್ತಿರಬಹುದೆಂದು ಸಂದೇಹವುಂಟಾಗಿದೆ. ಮೊನ್ನೆ ರಾತ್ರಿ ಒಂದು ದೊಡ್ಡ ಕಳವು ಪಕ್ಕದ ಊರಿನಲ್ಲಿ ನಡೆಯಿತು. ನಿನ್ನೆ ಮಧ್ಯಾಹ್ನ ಅಲ್ಲಿಗೆ ಹೋಗಿದ್ದೆನು. ಹೆಚ್ಚೂ-ಕಡಿಮೆ ಐದುಸಾವಿರ ರೂಪಾಯಿಗಳ ಪದಾರ್ಥಗಳು ಅಪಹರಿಸಲ್ಪಟ್ಟಿವೆ. ಕಳ್ಳರು ಅಶ್ವಾರೋಹಿಗಳಾಗಿ ಬಂದಿದ್ದರಂತೆ.

ಪ್ರಿಯನಾಥ—ಏನು? ಅಶ್ವಾರೋಹಿಗಳೇ?

ಇನ್ಸಪೆಕ್ಟರ—ಹೌದು. ಕೊಲೆಯು ನಡೆಯಲಿಲ್ಲ. ಒಬ್ಬ ಸೇವಕನು ಮಾತ್ರ ಕುದುರೆಯ ಕಾಲಿಗೆ ಸಿಕ್ಕಿ ಮರಣಾವಸ್ಥೆಯಲ್ಲಿರುವನು. ಆ ಕಳವು ನಡೆದ ಮನೆಯ ಯಜಮಾನನ ಸಮೀಪಕ್ಕೆ ಎರಡು ದಿನಗಳ ಹಿಂದೆ ಪುರುಷ

ನೊಬ್ಬನು ಬಂದು ಒಳ್ಳೇ ಮಾತುಗಳಿಂದ ತಮ್ಮ ಪಂಗಡಕ್ಕೆ ಸೇರಲು ಉಬ್ಬಿಸಿದನಂತೆ, ಅದಕ್ಕೆ ಯಜಮಾನನು ಸಮ್ಮತಿಸದೆ ಇದ್ದುದರಿಂದ ಹೀಗಾಗಿರಬಹುದೆಂದು ಊಹಿಸಲಾಗಿದೆ.

ಪ್ರಿಯನಾಥ—ಉಬ್ಬಿಸಲು ಬಂದಿರುವ ಪುರುಷನ ಆಕಾರ ವಿಶೇಷವು ಹೇಗಿದೆ ಎಂಬುದನ್ನು ನೀವು ಅವರ ಹತ್ತಿರ ವಿಚಾರಸಿದ್ದೀರಾ?

ಇನ್ಸಪೆಕ್ಟರ:—ಹೌದು. ಅದನ್ನು ವಿಚಾರಿಸಿ ನೋಟ್ ಮಾಡಿಕೊಂಡಿರುವೆನು. ಇದೇ ನೋಡಿರಿ ಎಂದು ಹೇಳಿ ತಮ್ಮ ಡೈರಿ ಪುಸ್ತಕವನ್ನು ತೆರೆದು ತೋರಿಸಿದನು. ಪ್ರಿಯನಾಥನದನ್ನೋದಿ ಹೇಳಿದನು: "ಇದನ್ನೋದಿದ್ದರಿಂದ ನನಗೊಬ್ಬರಲ್ಲಿ ಸಂದೇಹವುಂಟಾಗಿದೆ. ಅದಕ್ಕಾಗಿ ಈಗ ನಾನು ಹೊರಟು ಹೋಗುವೆನು ನಾನಿಲ್ಲಿಗೆ ಬಂದಿರುವದು ಗೋಪ್ಯವಾಗಿರಲಿ." ಅಲ್ಲಿಂದ ಪ್ರಿಯನಾಥನು ಹೊರಟು ಹೋದನು.

† † † † †

ಇತ್ತ ಮೋಹನನು ರಮೇಶನ ಅಕೃತ್ಯಗಳನ್ನು ಕ್ಯಾಮರಾದಿಂದ ಚಿತ್ರಿಸುವದರಲ್ಲಿ ಆಸಕ್ತನಾಗಿದ್ದನು. ಎರಡು ಮೂರು ಬಾರಿ ರಮೇಶನು ರಘುವಿನೊಡನೆ, ಮತ್ತಾತನ ಸಂಗಡಿಗರೊಡನೆ ಅಲ್ಲಲ್ಲಿ ಸೇರಿದ್ದಾಗ ಫೋಟೋಗಳನ್ನು ತೆಗೆದಿದ್ದನು. ಆ ಕಾಲದಲ್ಲಿ ಅವರನ್ನು ಹಿಡಿಯಲು ಯತ್ನಿಸಬಹುದಾಗಿದ್ದರೂ ಮೋಹನನು ಯತ್ನಿಸಲಿಲ್ಲ. ರಮೇಶನ ಅನ್ಯಾಯವನ್ನು ಸಿದ್ಧಗೊಳಿಸಿ ತೋರಿಸುವ ಹವಣಿಕೆಯಲ್ಲಿಯೇ ಇದ್ದುಬಿಟ್ಟಿದ್ದನು. ಪ್ರಿಯನಾಥನು ಇನ್ಸಪೆಕ್ಟರರಿಂದ ಬೀಳ್ಕೊಂಡು ಗೋಪಾಲನಿಗೆ ಹೇಳಿ ಮೋಹನನಿರುವಲ್ಲಿಗೆ ಬಂದನು. ತಾನು ನೋಡಿದ ವಿಚಾರವನ್ನೂ, ಹತ್ತಿರ ಗ್ರಾಮುಗಳಲ್ಲಿ ನಡೆಯುತ್ತಿರುವ ಕಳವುಗಳನ್ನೂ, ಹೇಳಿ, ಇನ್ಸಪೆಕ್ಟರರು ತೋರಿಸಿದ ಕಾಗದದಿಂದ ಆ ಕಾರ್ಯಗಳಲ್ಲಿ ರಘುವೇ ಪ್ರಧಾನನಾಯಕನಾಗಿ ಇರಬಹುದೆಂದು ತೋರುತ್ತಿದೆ ಎಂದೂ, ಗೋಪಾಲನ ಗ್ರಾಮುದಲ್ಲಿ ಕೊಲೆಗಡುಕರಾಗಿ ಓಡಿಹೋದ ಜನರು ರಘುವಿನೊಡನೆ ಸೇರಿರಬಹುದೆಂದೂ ಪ್ರಿಯನಾಥನು ತಿಳಿಸಿದನು.

ಮೋಹನ—ರಘುವೇ ನಾಯಕನಾಗಿ ಇರಬಹುದು. ಆತನು ಸಮ

ರ್ಥನು. ಮಾತಿನಲ್ಲಿ ತುಂಬಾ ಚತುರನು. ಆತನ ಮಾತಿನಿಂದಲೇ ಜನರು ಮರುಳಾಗುವರು. ಎಷ್ಟೋ ಗ್ರಾಮದವರನ್ನು ಹೀಗೆ ವಶಪಡಿಸಿಕೊಳ್ಳು ತ್ತಿರುವನು. ನಮ್ಮಿಂದ ಒಂದು ಗ್ರಾಮದವರು ರಘುವಿನ ಸಂಸರ್ಗದಿಂದ ಬಿಡಿಸಲ್ಪಟ್ಟರೆ ಅಷ್ಟರೊಳಗೆ ಆತನು ಇನ್ನೊಂದು ಗ್ರಾಮದವರನ್ನು ವಶ ಮಾಡಿಕೊಳ್ಳುವನು. ಈಗ ಅವನು ಪಟ್ಟಣಗಳಲ್ಲಿ ತಂಟೆ ಮಾಡದೆ ಗ್ರಾಮ ಗಳಲ್ಲಿಯೇ ತನ್ನ ಕಾರ್ಯವನ್ನು ನಡೆಸುತ್ತಲಿರುವನು. ಈಗ ಎಲ್ಲೆಲ್ಲಿಯೂ ಆತನ ಹೆಸರು ಕೇಳಿ ಬರುತಲಿದೆ. "ಯೇನ ಕೇನ ಪ್ರಕಾರೇಣ ಪ್ರಸಿದ್ಧ ಪುರುಷೋ ಭವ" ಎಂಬಂತೆ ರಘುವು ಈಗ ಪ್ರಸಿದ್ಧಿಯನ್ನು ಸಂಪಾದಿಸಿ ಅಶ್ವಾರೋಹಿಗಳೊಂದಿಗೆ ತನ್ನ ಕಾರ್ಯವನ್ನು ನಡೆಸುತ್ತಿರುವನು. ಸ್ವಲ್ಪ ಯೋಚನಾಸ್ಪದವಾಗಿಯೇ ಇದೆ. ಈಗ ಆತನೊಂದಿಗೆ ಹೋರಾಡುವ ದಾದರೆ ನಾವೂ ಆ ಗುಡ್ಡ ಬೆಟ್ಟಗಳಲ್ಲಿ ತಿರುಗಲು ಅಶ್ವಾರೋಹಿಗಳಾಗಿಯೇ ಹೋಗಬೇಕು. ಅಂತಹ ಗುಡ್ಡಗಾಡು ಪ್ರದೇಶದಲ್ಲಿ ಕಾಲುನಡಿಗೆಯಿಂದ ರಘುವನ್ನು ಕಡೆಗಟ್ಟುವದು ಅಸಾಧ್ಯವೇ ಸರಿ. (ಸ್ವಲ್ಪ ಹಾಸ್ಯಮಾಡಲಿಚ್ಛೆ ಯಿಂದ ನಗುತ್ತಾ) ಅದಿರಲಿ. ಈಗ ಅಲ್ಲಿಗೆ ಯಾರಾರು ಬರುವಿರಿ? ಕುದುರೆ ಸವಾರಿಯು ಯಾರಾರಿಗೆ ಬರುವದು?

ಪ್ರಿಯನಾಥ—ಇದೇನು? ಒಬ್ಬಿಬ್ಬರು ಅಲ್ಲಿಗೆ ಹೋದರೆ ಕಾರ್ಯವು ನೆರವೇರಬಹುದೇ?

ಕೋಮಲೆ—ಅಣ್ಣಾ! ಆ ಪ್ರಶ್ನೆಯು ನಿನಗೆ ಯಾಕೆ! ಯಾರಾದರೂ ಇಷ್ಟವಿದ್ದವರು ಹೋಗಲಿ ಸುಮ್ಮನಿರು.

ಮೋಹನ—(ನಗುತ್ತಾ) ಹೌದು. ಅದಲ್ಲದೆ ಹೆಂಗಸರಿಗೆ ಅಲ್ಲೇನು ಕಾರ್ಯ? ಕುದುರೆಯ ಸವಾರಿಯು ತಿಳಿಯದೇ ಇದ್ದ ಮೇಲೆ ಅಲ್ಲಿಗೆ ಹೋಗುವು ದಾದರೂ ಹೇಗೆ?

ಕೋಮಲೆ—ನಾನೂ ಅದನ್ನೇ ಹೇಳಿದೆನು. ಬೇರೆ ಏನನ್ನೂ ಹೇಳ ಲಿಲ್ಲ! (ಪ್ರಿಯನಾಥನ್ನ ಕುರಿತು) ಅಣ್ಣಾ ನೀನು ಮಾತ್ರ ಹೋಗಬೇಡ.

ಮೋಹನ—ಅವನು ಅಲ್ಲಿಗೆ ಹೋದರೆ ನಿನಗೇನು ಹಾನಿ?

ಕೋಮಲೆ—ಹಾನಿ ಇದೆ. ನೀವೆಲ್ಲರೂ ಹೊರಟುಹೋದರೆ ನಾನೊ

ಬ್ಬಳೇ ಇಲ್ಲಿ ಹೇಗೆ ಇರಲಿ. ಅದಕ್ಕಾಗಿ ಅಣ್ಣನನ್ನು ಇಲ್ಲಿಯೇ ಇರೆಂದೆನು. ಅವನಿಲ್ಲಿಯೇ ಇದ್ದರೆ ಅದರಿಂದ ನಿಮಗೇನು ಹಾನಿ? ಇನ್ನೂ ಬೇರೆಯವರು ಇರುವರಷ್ಟೆ?

ಮೋಹನ—ಸರಿ. ಹೇಗಾದರೂ ನಮ್ಮೊಡನೆ ಬರಲೇಬೇಕೆಂದು ನಿನ್ನ ಹಟವಷ್ಟೇ?

ಕೋಮಲೆ—ನಾನು ಹೇಳದೆ ಇದ್ದದ್ದನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಹಂಗಿಸಬೇಡಿರಿ. ನಾನು ಖಂಡಿತವಾಗಿಯೂ ಬರುವದಿಲ್ಲ. ಇನ್ನಾದರೂ ಕಷ್ಟ ತಪ್ಪಿತೆ?

ಮೋಹನ—ಸರಿ. ಶಪಥವೂ ಆಯಿತು. ನೀನಲ್ಲಿಗೆ ಬರದೆ ಹೋದರೆ ನಾನೂ ಹೋಗುವದಿಲ್ಲ. ಬಲಗೈಯಿಲ್ಲದೆ ನಾನಲ್ಲಿಗೆ ಹೋಗಿ ಸುಮ್ಮನೆ ಕುಳಿತಿರುವುದೇನು? ಪ್ರಿಯನಾಥ, ನೀನೇ ಉಳಿದವರನ್ನು ಕರೆದುಕೊಂಡು ಅಲ್ಲಿಗೆ ಹೋಗು. ನಾನು ಬರುವದಿಲ್ಲ.

ಕೋಮಲೆ—ಸರಿಯಪ್ಪ. ಇರಲೂ ಬಿಡುವದಿಲ್ಲ ಸಾಯಲೂ ಬಿಡುವದಿಲ್ಲ ಸುಮ್ಮನೆ ಏನಾದರೂ ಹಾಸ್ಯಮಾಡುತ್ತಾ ಇದ್ದರೆ ಸರಿ. ಯಾವ ಕೆಲಸಕ್ಕೆ ಹೋಗುವಾಗಲೂ ಹೀಗೆಯೇ ಸರಿ. ಕಾರ್ಯದ ಆರಂಭದಲ್ಲಿ ಹೀ-ಗೊಂದು ಶಕುನವಾಗಲೇ ಬೇಕು. ಕೊನೆಗೆ ಆ ಕಾರ್ಯವು ಸಾಧಿಸಲ್ಪಡದೆ ಹೋದರೆ ನನ್ನನ್ನೇ ಹೀಯಾಳಿಸಿ ಬಿಡುವಿರಿ. ಕಾರ್ಯವು ಸಾಧಿಸಿದರೆ ಮಾತ್ರ ಯಾರ ನೆನಪೂ ಇರುವದಿಲ್ಲ. ಎಂದಿನಂತೆ ಈಗಲೂ ಶಕುನಕ್ಕಾರಂಭವಾಗಿದೆ. ಇನ್ನೀಕಾರ್ಯವು ನೆರವೇರುವದೆಂದು ನಾನು ಹೇಳಲಾರೆನು

ಮೋಹನ:-"ಈಗ ಯಾರ ವಚನವು ಅಪಶಕುನವನ್ನು ಸೂಚಿಸುತ್ತಿದೆ! ನೀನೇ ಹೇಳು. 'ಕಾರ್ಯವು ನೆರವೇರುವದಿಲ್ಲ'ವೆಂದು ನೀನಿಗ ಹೇಳಿರುವದು ಸುಶಕುನವಲ್ಲವೇ? ಆಗಲಿ. ಹೇಳುವಷ್ಟು ಹೇಳಿಯಾಯಿತು. ಇನ್ನು ಹೊರಡಬಹುದಷ್ಟೆ?" ಹೊರಡಲು ಕುದುರೆಗಳು ಸಿದ್ಧವಾದವು. ಮೋಹನನು ಕೋಮಲೆಯನ್ನು ಕುರಿತು "ನೀನು ಮೊದಲು ನಿನ್ನ ಕುದುರೆಯನ್ನು ಹತ್ತು. ಇದೊಂದು ಶಕುನ" ಎಂದು ಹೇಳಿದನು. ಕೋಮಲೆಯು ನಗುತ್ತಾ: "ಹಾಗಾದರೆ ಈಗ ಹೊರಡುವ ನಮ್ಮ ಕಾರ್ಯವು ಖಂಡಿತವಾಗಿ

ಯೂ ನೆರವೇರುವದು. ನೀವು ಶಕುನಶಾಸ್ತ್ರವನ್ನು ಬಲ್ಲವರಷ್ಟೆ?" ಎಂದು ಹೇಳಿ ತನ್ನ ಶುಭ್ರವರ್ಣದ ಕುದುರೆಯನ್ನು ಏರಿದಳು. ಆಗ ಕೋಮಲೆಯು ಪುರುಷವೇಷವನ್ನು ಧರಿಸಿದ್ದಳು. ಒಡನೆ ಎಲ್ಲರೂ ತಮ್ಮ ತಮ್ಮ ಕುದುರೆಗಳನ್ನು ಹತ್ತಿ, ಅಲ್ಲಿಂದ ಹೊರಟು ಗುಪ್ತವಾಗಿ ಗುಡ್ಡಗಾಡಿನ ಪ್ರದೇಶದಲ್ಲಿಯೇ ಹೋಗುತ್ತಾ, ಯಾರಿಗೂ ಸಂದೇಹಕ್ಕಾಸ್ಪದವಾಗದಂತೆ ಮೂರನೇ ದಿನ ರಾತ್ರಿ ಹತ್ತುಗಂಟೆಯ ಹೊತ್ತಿಗೆ ಗೋಪಾಲನಿದ್ದ ಗ್ರಾಮದ ಬಳಿಗೆ ಬಂದರು. ಗ್ರಾಮಕ್ಕೆ ಸ್ವಲ್ಪ ದೂರದಲ್ಲಿ ಒಂದು ಸಣ್ಣ ಗುಡ್ಡವಿದ್ದಿತ್ತು. ಆ ಗುಡ್ಡದ ಒಂದೆಡೆಯಲ್ಲಿ ಎಲ್ಲರೂ ಕುದುರೆಗಳಿಂದಿಳಿದರು. ಕುದುರೆಗಳನ್ನು ಅಲ್ಲಿಯೇ ಗುಪ್ತವಾದ ಒಂದೆಡೆಯಲ್ಲಿ ಕಾಪಾಡುವ ವ್ಯವಸ್ಥೆಯನ್ನು ಮಾಡಿ ಮೋಹನನು ಕೋಮಲೆ, ಪ್ರಿಯನಾಥರೊಂದಿಗೆ ಪಾದಚಾರಿಗಳಾಗಿ ಗೋಪಾಲನ ಮನೆಗೆ ಹೋದರು. ಮನೆಯಲ್ಲಿನ ಜನರು ನಿದ್ರಿಸಿದ್ದರು. ಪ್ರಿಯನಾಥನು ಗೋಪಾಲನನ್ನು ಕೂಗಿ ಕರೆದನು. ಗೋಪಾಲನು ಎಚ್ಚತ್ತು ದೀಪವನ್ನು ಹಚ್ಚಿ ಬಾಗಿಲನ್ನು ತೆರೆದನು. ಮೂರು ಜನರೂ ಒಳಹೊಕ್ಕರು. ಬಂದವರು ಯಾರೆಂದು ತವಕದಿಂದ ನೋಡುತ್ತಾ ನಿಂತಿದ್ದ ಗೋಪಾಲನ ಪತ್ನಿಯನ್ನು ತೋರಿಸುತ್ತಾ ಮೋಹನನು ಕೋಮಲೆಯನ್ನು ಕುರಿತು ಹೇಳಿದನು:— "ಇದೋ! ಈಕೆಯೇ ಗೋಪಾಲನ ಹೆಂಡತಿ." ಕೋಮಲೆಯು ಪುರುಷವೇಷವಿದ್ದಂತೆಯೇ ಹಾಸ್ಯ ಮಾಡಲು ಬೇಕೆಂದೇ ಗೋಪಾಲನ ಪತ್ನಿಯ ಹತ್ತಿರಕ್ಕೆ ಹೋಗಿ: 'ಏನೇ ತಂಗಿ? ಸುಖವಾಗಿದ್ದಿಯಾ?' ಎಂದು ಕೇಳುತ್ತಾ ಆಕೆಯ ಕೈಯನ್ನು ಹಿಡಿದುಕೊಂಡಳು. ತರುಣಿಯು ಪರಪುರುಷ ಸ್ಪರ್ಶದ ಭಾವನೆಯಿಂದ ಕಂಪಿತಳಾಗಿ ಕೈಯನ್ನು ಬಿಡಿಸಿಕೊಳ್ಳಲು ಎಳೆಯುತಲಿದ್ದಳು ಗೋಪಾಲನೂ ಕೂಡ "ಇದೆಲ್ಲಿಯ ಅಸಭ್ಯತನ!" ಎಂದು ಮನಸ್ಸಿನಲ್ಲಿ ಹೇಳಿಕೊಂಡನು. ಮೋಹನನೂ, ಪ್ರಿಯನಾಥನೂ ಅವರಿಬ್ಬರ ಸ್ಥಿತಿಯನ್ನು ನೋಡಿ ನಗುತ್ತಿದ್ದರು. ಕೋಮಲೆಯು ತನ್ನ ವೇಷವನ್ನು ತೆಗೆದು ಹಾಕಿ: "ಇನ್ನೇನೂ ಸಂದೇಹಕ್ಕಾಸ್ಪವಿಲ್ಲವಷ್ಟೇ?" ಎಂದು ನಗುತ್ತಾ ಹೇಳಿದಳು. ಗೋಪಾಲನು: "ನಾನೂ ಭ್ರಾಂತನಾದೆನು. ನನಗೂ ಗೊತ್ತಾಗಲಿಲ್ಲ" ಎಂದನು.

ಮೋಹನ—ನಾವೀಗ ತಿರುಗಿ ನಿಮ್ಮ ಮನೆಯಲ್ಲಿ ವಾಸವಿರುವದಕ್ಕಾಗಿ ಬಂದೆವು. ನಿಮಗಿದರಿಂದ ತೊಂದರೆಯಾಗುವದಲ್ಲವೇ?

ಗೋಪಾಲ—ಇಲ್ಲ. ತಾವು ಏನನ್ನೂ ತಿಳಿದುಕೊಳ್ಳಬಾರದು. ಮನೆಯು ನಿಮ್ಮದೇ ಆಗಿದೆ.

ಮೋಹನ—ನಾವೀಗ ಅಶ್ವಾರೋಹಿಗಳಾಗಿ ಬಂದಿರುವೆವು. ಒಂದು ಕುದುರೆಯನ್ನು ಮಾತ್ರ ಇಲ್ಲಿಯೇ ಸಮಯಕ್ಕೆ ಉಪಯೋಗಿಸುವಂತೆ ಗುಟ್ಟಾಗಿ ಇಟ್ಟಿರಬೇಕಾಗಿದೆ. ಸ್ಥಳವಿರುವದೇ?

ಗೋಪಾಲ—ದನವಿನ ಕೊಟ್ಟಿಗೆಯಲ್ಲಿ ಸ್ಥಳವಿದೆ. ಅದು ಗುಪ್ತವಾಗಿಯೂ ಇದೆ.

ಎಲ್ಲವೂ ವ್ಯವಸ್ಥೆಯಾದ ಮೇಲೆ ತಿರುಗಿ ರಾಮಚಂದ್ರರಾಯರ ಮನೆಯನ್ನು ಹೊಂಚು ಹಾಕುವ ಕಾರ್ಯಕ್ಕಾರಂಭವಾಯಿತು. ಸರತಿಯ ಪ್ರಕಾರ ಒಬ್ಬೊಬ್ಬರೇ ನಿಂತು ಕಾಯತೊಡಗಿರು. ಎರಡು ದಿನಗಳು ವ್ಯರ್ಥವಾದವು. ಮೂರನೇ ದಿನ ಸಾಯಂಕಾಲ ಎಂಟು ಗಂಟೆಯ ಸಮಯದಲ್ಲಿ ರಾಯರು ಮನೆಯಿಂದ ಪಾದಚಾರಿಗಳಾಗಿ ಹೊರಗೆ ಹೊರಟುದುದನ್ನು ಮೋಹನನು ನೋಡಿದನು. ಥಟ್ಟನೆ ಗೋಪಾಲನ ಮನೆಯಿಂದ ಹೊರಟು ಕುದುರೆಯನ್ನು ಹತ್ತಿ ರಾಯರನ್ನು ಹಿಂಬಾಲಿಸಿದನು. ರಾಯರು ಸುಮಾರು ಎರಡು ಫರ್ಲಾಂಗ್ ದೂರ ಉತ್ತರ ದಿಕ್ಕಿಗೆ ಹೋಗಿ ಒಂದು ಬಾರಿ ಕೈಚಪ್ಪಾಳೆ ತಟ್ಟಿದರು. ಒಡನೆ ಒಬ್ಬ ಪುರುಷನು ಒಂದು ಕುದುರೆಯನ್ನು ರಾಯರ ಹತ್ತಿರ ತಂದು ನಿಲ್ಲಿಸಿದನು. ರಾಯರು ಕುದುರೆಯನ್ನು ಹತ್ತಿ ಪೂರ್ವದಿಕ್ಕಿಗಭಿಮುಖವಾಗಿ ಕುದುರೆಯನ್ನು ವೇಗವಾಗಿ ಬಿಟ್ಟರು. ಕಾಡುಗುಡ್ಡಗಳನ್ನು ಸುತ್ತಿ ಹೆಚ್ಚು ಕಡಿಮೆ ಸುಮಾರು ಐದು ಮೈಲಿ ದೂರ ರಾಯರ ಕುದುರೆಯು ಹೋಗಿ ಒಂದು ಸಣ್ಣ ಅಡವಿಯೊಳಗೆ ಹೊಕ್ಕಿತು. ರಾಯರು ಕುದುರೆಯಿಂದಿಳಿದು ಕಡಿವಾಣವನ್ನು ಹಿಡಿದುಕೊಂಡು ಒಂದು ಕಾಲುದಾರಿಯಿಂದ ನಡೆಯತೊಡಗಿದರು. ಒಂದು ಫರ್ಲಾಂಗ್ ದೂರ ಕಳೆದೊಡನೆ ದೂರದಲ್ಲಿ ಒಂದು ದೀಪವು ತೋರಿತು. ಅಲ್ಲಿ ಒಂದು ಸಣ್ಣ ಗುಡಿಸಲು ಇದ್ದಿತ್ತು. ರಾಯರು ಆ ಸ್ಥಳವನ್ನು ಸೇರಿ ಗುಡಿಸಲಿನ ಹತ್ತಿರ ಕುದುರೆಯನ್ನು ಒಂದು ಮರಕೆ

ಕಟ್ಟೆಹಾಕಿ ಗುಡಿಸಲನ್ನು ಪ್ರವೇಶಿಸಿದರು. ರಾಯರನ್ನು ಅಲ್ಲಿಯ ವರೆಗೆ ಹಿಂಬಾಲಿಸಿ ಬಂದಿದ್ದ ಮೋಹನನು ಗುಡಿಸಲಿಗೆ ಸ್ವಲ್ಪ ದೂರದಲ್ಲಿ ಅಡವಿಯ ಮಧ್ಯದಲ್ಲಿ ತನ್ನ ಕುದುರೆಯನ್ನು ನಿಲ್ಲಿಸಿ, ಗುಡಿಸಲಿನ ಹತ್ತಿರಕ್ಕೆ ಹೋದನು. ಗುಡಿಸಲಿನೊಳಗೆ ದೀಪದ ಹತ್ತಿರ ಕುಳಿತಿರುವವರನ್ನು ನೋಡಿದನು. ರಘು, ರಾಮಚಂದ್ರರಾಯರು, ಗೋಪಾಲನ ಗ್ರಾಮದ ಕೊಲೆಗೆ ಸೇರಿದ್ದ ಸೀತಾ ರಾಮಶೆಟ್ಟಿ, ಇಬ್ರಾಹಿಮ್ ಈ ನಾಲ್ಕು ಜನರು ಎದುರಿನಲ್ಲಿಯೇ ಕಾಣಿಸು ತ್ತಿದ್ದರು.

ಮೋಹನನು ನಿಶ್ಶಬ್ದವಾಗಿ ಆ ನಾಲ್ವರ ಫೋಟೋವನ್ನು ತೆಗೆದಿಟ್ಟು ಕೊಂಡನು. ಒಳಗೆ ಏನೇನು ಮಾತನಾಡುವರೆಂದು ಮೆಲ್ಲಗೆ ಮೋಹನನು ಆಲಿಸುತ್ತಾ ನಿಂತನು. ಆರೇಳು ದಿನಗಳ ಹಿಂದೆ ಎಲ್ಲಿ ದೊಡ್ಡದಾದೊಂದು ಕಳವು ನಡೆದಿತ್ತೋ ಆ ಮನೆಯ ಹತ್ತಿರವಿದ್ದ ಮನೆಯಲ್ಲಿಯೇ ಬರುವ ಮಂಗಳವಾರ ಇನ್ನೊಂದು ಕಳವನ್ನು ಮಾಡಲು ಒಳಗೆ ನಿಶ್ಚೈಸಿದರು. ಮೋಹನನು ತಾನೀಗ ಏನು ಮಾಡಬೇಕೆಂದು ಯೋಚಿಸಿದನು. ಒಳಗಿರು ವವರನ್ನು ಹಿಡಿಯಲು ಸಾಧ್ಯವಿಲ್ಲ. ಏಳೆಂಟು ಜನರನ್ನು ಆ ಕಾಡಿನ ಮಧ್ಯ ದಲ್ಲಿ ಒಬ್ಬನೇ ಹಿಡಿಯಲು ಸಾಧ್ಯವೇ? ಒಬ್ಬಿಬ್ಬರನ್ನು ಮಾತ್ರ ಗುಂಡು ಹೊಡೆದು ಕೊಲ್ಲಬಹುದು. ಅದು ಮೋಹನನಿಗಿಷ್ಟವಿಲ್ಲ. ಸುಮ್ಮನೆ ಅವ ರನ್ನು ಬಿಡಲೂ ಇಚ್ಛೆಯಿಲ್ಲ. 'ರಘುವನ್ನೇ ಹಿಂಬಾಲಿಸುವೆನೆ'ಂದು ಮೋಹ ನನು ಕೊನೆಗೆ ನಿಶ್ಚಯ ಮಾಡಿದನು. "ಬರುವ ಮಂಗಳವಾರ ಮುಂದಿನ ಕಳವು ನಡೆಯಬೇಕು" ಎಂದು ಒಳಗೆ ನಿರ್ಧರಿಸಲ್ಪಟ್ಟುದನ್ನು ಮೋಹನನು ಕೇಳಿದನು. ಆಲೋಚಿಸುವ ವಿಷಯವೆಲ್ಲವೂ ಮುಗಿದ ನಂತರ ಪಾನಸಮಾ ರಂಭಕ್ಕೆ ಆರಂಭವಾಯಿತು. 'ಇನ್ನಿವರು ಹೊರಡುವರು' ಎಂದೂಹಿಸಿ ಮೋಹ ನನು ತನ್ನ ಕುದುರೆಯನ್ನು ಸಿದ್ಧಗೊಳಿಸಿ ರಘುವು ಹೊರಗೆ ಬರುವದನ್ನು ನಿರೀಕ್ಷಿಸುತ್ತಿದ್ದನು. ಸ್ವಲ್ಪಹೊತ್ತಿನಲ್ಲಿಯೇ ಎಲ್ಲರೂ ಹೊರಗೆ ಬಂದರು. ತಮ್ಮ ತಮ್ಮ ಕುದುರೆಗಳ ಕಡಿವಾಣಗಳನ್ನು ಹಿಡಿದುಕೊಂಡು ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೊರಟರು. ರಘುವು ತನ್ನ ಕುದುರೆಯೊಂದಿಗೆ ದಕ್ಷಿಣ ದಿಕ್ಕಿಗಭಿಮುಖನಾಗಿ ಹೊರಟು ನಡೆದನು. ಮೋಹನನು ಆತನನ್ನು ಹಿಂಬಾ

ಲಿಸಿದನು. ರಘುವು ಆ ಕಾಡನ್ನು ದಾಟಿ ಕುದುರೆಯನ್ನು ಹತ್ತಿ ಗುಡ್ಡ ಗಾಡುಗಳನ್ನು ಸುತ್ತಿಕೊಂಡು ಒಂದು ಗ್ರಾಮದೊಳಕ್ಕೆ ಹೋದನು. ಅಲ್ಲಿ ಸಾಧಾರಣ ತರಹದ ಒಂದು ಮನೆಯ ಹತ್ತಿರ ಹೋಗಿ ಕುದುರೆಯನ್ನು ನಿಲ್ಲಿಸಿ ಅದನ್ನು ಅಲ್ಲಿದ್ದ ದನದ ಕೊಟ್ಟಿಗೆಯ ಒಂದು ಭಾಗದಲ್ಲಿ ಕಟ್ಟಿ ಮನೆಯವ ರನ್ನು ಎಬ್ಬಿಸದೆ ಮನೆಯ ಮುಂಭಾಗದಲ್ಲಿಯೇ ಇದ್ದ ಒಂದು ಕೊಠಡಿಯ ಬೀಗವನ್ನು ತೆಗೆದು ಬಾಗಿಲನ್ನು ತೆರೆದನು. ಒಳಹೊಕ್ಕು ಕದವನ್ನು ಮುಚ್ಚಿದನು. ಮೋಹನನು ಕೊಠಡಿಯ ಬಾಗಿಲಿಗೆ ಮುಖವಿಟ್ಟುಕೊಂಡು ನಿಂತನು. ಒಳಗೆ ದೀಪವು ಹಚ್ಚಲ್ಪಟ್ಟಂತೆ ತೋರಲಿಲ್ಲ. ಏನೋ ಸ್ವಲ್ಪ ಶಬ್ದವಾಗಿ ಆ ಮೇಲೆ 'ಹರೇ ಶಂಕರ' ಎಂದು ಕೇಳಿಸಿತು. ಹಾಸಿಗೆಯನ್ನು ಹಾಸಿ ರಘುವು ಮಲಗಿದನೆಂದು ಮೋಹನನು ಊಹಿಸಿ ಜೇಬಿನಲ್ಲಿದ್ದ ಗಡಿ ಯಾರವನ್ನು ನೋಡಿದನು. ಒಂದು ಗಂಟೆಯಾಗಿತ್ತು. "ಪ್ರಾತಃಕಾಲ ವಾಗಲು ಇನ್ನೂ ಹೆಚ್ಚುಹೊತ್ತಿದೆ" ಎಂದುಕೊಂಡು ಮೋಹನನು ಅಲ್ಲಿಯೇ ಒಂದೆಡೆಯಲ್ಲಿ ಕಾದು ಕುಳಿತನು. ಬೆಳಗಿನ ಐದು ಗಂಟೆಯ ಸಮಯದಲ್ಲಿ ಒಳಗೇನೋ ಸದ್ದಾಗಿ ದೀಪವು ಹಚ್ಚಲ್ಪಟ್ಟಂತೆ ಕಂಡಿತು. ಹತ್ತು ನಿಮಿಷ ಗಳು ಕಳೆದ ಮೇಲೆ ಕದವು ತೆರೆಯಲ್ಪಟ್ಟಿತು. ರಘುವು ಕೈಯಲ್ಲೊಂದು ಟ್ರಂಕನ್ನು ಹಿಡಿದುಕೊಂಡು ಹೊರಗೆ ಬಂದು ಬಾಗಿಲಿಗೆ ಬೀಗವನ್ನು ಹಾಕಿ ಅಲ್ಲಿಂದ ಹೊರಟನು. ಮೋಹನನು ಆತನ ವೇಷವನ್ನು ನೋಡಿ "ಈಗ ಇವನು ಪಾದಚಾರಿಯಾಗಿಯೇ ಎಲ್ಲಿಗೋ ಹೋಗುವಂತಿದೆ. ಕೈಯಲ್ಲಿ ದೊಡ್ಡದಾದ ಟ್ರಂಕು ಇರುವದರಿಂದ ಹೆಚ್ಚು ದೂರ ಗಮನವಿರಲಾರದು; ಅಥವಾ ಎಲ್ಲಾದರೂ ಮೋಟಾರನ್ನು ಹತ್ತಿ ಹೋಗಬಹುದು" ಎಂದೂಹಿಸಿ ತನ್ನ ಕುದುರೆಯ ಕಡಿವಾಣವನ್ನು ಹಿಡಿದುಕೊಂಡು ಮೆಲ್ಲನೆ ರಘುವನ್ನು ಹಿಂಬಾಲಿಸಿದನು. ಹೀಗೆ ಹೋಗುತ್ತಿರಲು ಮಾರ್ಗದಲ್ಲಿ ಶೂದ್ರರ ಮನೆ ಯೊಂದು ಸಿಕ್ಕಿತು. ರಘುವು ಅಲ್ಲಿಂದ ಮುಂದಾದನು ಮೋಹನನು ಆ ಮನೆಯ: ಹತ್ತಿರ ಹೋಗುತ್ತಿರುವ ಸಮಯಕ್ಕೆ ಸರಿಯಾಗಿ ಆ ಮನೆಯಿಂದ ಶೂದ್ರನೊಬ್ಬನು ಹೊರಗೆ ಬರುತ್ತಿದ್ದನು. ಮೋಹನನು ಆತನನ್ನು ಸಂಧಿಸಿ, ಹತ್ತು ರೂಪಾಯಿಗಳನ್ನು ಆತನ ಕೈಯಲ್ಲಿಟ್ಟು: "ನನಗೆ ನಿನ್ನಿಂದ ಈಗ

ದೊಡ್ಡದಾದ ಒಂದು ಉಪಕಾರವಾಗಬೇಕಾಗಿದೆ. ಈ ಕುದುರೆಯೊಂದನ್ನು ನಿನ್ನ ಮನೆಯೊಳಗೆಲ್ಲಿಯಾದರೂ ನಾನು ತಿರುಗಿ ಬರುವ ವರೆಗೆ ಕಟ್ಟಿಕೊಳ್ಳ ಬೇಕು. ಎರಡು-ಮೂರು ದಿನಗಳೊಳಗೆ ನಾನು ಹಿಂದಿರುಗಿ ಬರುವೆನು'' ಎಂದು ಹೇಳಿದನು. ಶೂದ್ರನೊಪ್ಪಿದನು. ಮೋಹನನು ಕುದುರೆಯನ್ನು ಆತನ ವಶಕ್ಕೊಪ್ಪಿಸಿ: 'ರಸ್ತೆಯು ಸಮೀಪದಲ್ಲಿರುವದೇ?' ಎಂದು ಕೇಳಿದನು.

ಶೂದ್ರ—ಎರಡು ಫರ್ಲಾಂಗ ದೂರದಲ್ಲಿದೆ.

ಮೋಹನ—ಅಲ್ಲಿ ಮೋಟಾರು ತಿರುಗುವುದೆ?

ಶೂದ್ರ—ಇದೆ. ಲಕವಳ್ಳಿಯಿಂದ ಈ ಮಾರ್ಗದಲ್ಲಿ ಸೂರ್ಯೋದಯಕ್ಕೆ ಸರಿಯಾಗಿ ಒಂದು ಮೋಟಾರು ಬರುವುದು.

ಮೋಹನ—ಈಗ ಇಲ್ಲಿಂದ ಮೋಟಾರಿನಲ್ಲಿ ಹೊರಟರೆ ಮಧ್ಯಾಹ್ನ ಎಲ್ಲಿಗೆ ಹೋಗಿ ಸೇರಬಹುದು?

ಶೂದ್ರ—ರಾತಲ್ಲಿಗೆ ಮಧ್ಯಾಹ್ನ ಹನ್ನೆರಡು ಗಂಟೆಗೆ ಸೇರುತ್ತದೆ.

ಮೋಹನ—''ನಾನೀಗ ಹೋಗುತ್ತೇನೆ'' ಎಂದು ಹೇಳಿ ಅಲ್ಲಿಂದ ಹೊರಟು ವೇಗವಾಗಿ ನಡೆದು ರಘುವನ್ನು ಹಿಂಬಾಲಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ರಸ್ತೆಯು ಸಮೀಪಿಸಿತು. ಬೆಳ್ಳಗೆ ಬೆಳಗಾಯಿತು. ರಘುವು ಹೋಗಿ ಒಂದು ಅಂಗಡಿಯ ಜಗಲಿಯ ಮೇಲೆ ಕುಳಿತನು. ಮೋಹನನು ರಘುವಿನ ಆ ಕಾಲದ ವೇಷವನ್ನು ನೋಡಿ: ''ಬೇಷ್! ಚನ್ನಾಗಿ ಕಲಿತಿರುವನು'' ಎಂದುಕೊಂಡು ಬಸ್ ಸ್ಟೇಷನ್ನಿಗೆ ಹೋದನು. ಸ್ವಲ್ಪ ಹೊತ್ತಿನಲ್ಲಿಯೇ ಮೋಟಾರ್ ಬಂದು ನಿಂತಿತು. ಮೋಹನನು ರಾತಲ್ಲಿಗೆ ಟಿಕೇಟನ್ನು ಪಡೆದು ಮೋಟಾರನ್ನು ಹತ್ತಿದನು. ಮೋಟಾರು ಅಲ್ಲಿಂದ ಹೊರಟು ಮುಂದಕ್ಕೆ ಹೋಗಲು ಜಗಲಿಯ ಮೇಲೆ ಕುಳಿತಿದ್ದ ರಘುವು ಮೋಟಾರನ್ನು ನಿಲ್ಲಿಸಲು ಹೇಳಿ, ರಾತಲ್ಲಿಗೆ ಟಿಕೇಟನ್ನು ತೆಗೆದುಕೊಂಡು ಹತ್ತಿದನು. ಮಧ್ಯಾಹ್ನ ಕಾಲಕ್ಕೆ ಸರಿಯಾಗಿ ಮೋಟಾರು ರಾತಲ್ಲಿಯನ್ನು ಮುಟ್ಟಿತು. ರಾತಲ್ಲಿಯು ಸಾಧಾರಣ ದೊಡ್ಡ ಊರೇ ಆಗಿತ್ತು. ರಜತದಿಂದ ಅಲ್ಲಿಗೆ ರೈಲ್ ಮಾರ್ಗವಿತ್ತು.

ರಘುವು ಒಂದೆಡೆಯಲ್ಲಿ ಇಳಿದನು. ಅದನ್ನು ನೋಡಿ ಮೋಹನನು

ಇನ್ನೊಂದು ಪಕ್ಕದಲ್ಲಿ ಇಳಿದು ರಘುವು ಎಲ್ಲಿಗೆ ಹೋಗುವನೆಂದು ನಿಂತು ನೋಡುತ್ತಿದ್ದನು. ರಘುವು ಟ್ರಂಕನ್ನು ತೆಗೆದುಕೊಂಡು ಪಕ್ಕದ ಓಣಿ ಯಲ್ಲಿಯೇ ಇದ್ದ ಒಂದು ಮನೆಯ ಹತ್ತಿರ ಹೋದನು ಬಾಗಿಲಿಗೆ ಬೀಗ ಹಾಕಿತ್ತು. ರಘುವು ಬೀಗವನ್ನು ತೆರೆದು ಒಳಹೊಕ್ಕನು. ತಿರುಗಿ ಕದವು ಮುಚ್ಚಲ್ಪಟ್ಟಿತು. ಮೋಹನನು ಆ ಮನೆಯು ಯಾರದ್ದೆಂದು ಹತ್ತಿರ ವಿದ್ದವರನ್ನು ವಿಚಾರಿಸಿದನು. ಅದು ಯಾರದ್ದೆಂಬುದು ತಮಗೆ ಸರಿಯಾಗಿ ತಿಳಿಯದೆಂದೂ, ಹೆಚ್ಚಾಗಿ ಯಾವಾಗಲೂ ಬಾಗಿಲು ಮುಚ್ಚಲ್ಪಟ್ಟೇ ಇರುವ ದೆಂದೂ ಅವರು ಹೇಳಿದರು. ಮೋಹನನು ಆ ಮನೆಯನ್ನು ಪರೀಕ್ಷಿಸಲು ಆತುರನಾದನು ವೇಷಾಂತರದಿಂದ ಒಳಗೆ ಪ್ರವೇಶಿಸಲು ಯೋಚನೆಯನ್ನು ಮಾಡಿ ಅಲ್ಲಿಂದ ಎತ್ತೋ ಹೊರಟು ಹೋದನು. ಸಾಯಂಕಾಲ ಐದೂವರೆ ಗಂಟೆಯ ಸಮಯದಲ್ಲಿ ಮೋಹನನು ಬೈರಾಗಿಯಂತೆ ವೇಷವನ್ನು ಧರಿಸಿ ರಘುವಿದ್ದ ಮನೆಗೆ ಹೋದನು. ಕದವು ಮೊದಲಿನಂತೆಯೇ ಮುಚ್ಚಲ್ಪ ಟ್ಟಿತ್ತು. ಮನೆಯೊಳಗೆ ಗ್ರಾಮಾಫೊನ್ ವಾದಿಸಲ್ಪಡುತ್ತಲಿತ್ತು. ಅದು ನಿಂತೊಡನೆ ಮೋಹನನು ಹೊರಗಿನಿಂದ ಬಾಗಿಲನ್ನು ಬಲನಾಗಿ ದೂಡ ಲಾರಂಭಿಸಿದನು. ಸ್ವಲ್ಪ ಹೊತ್ತಿನ ಮೇಲೆ ಬಾಗಿಲು ತೆರೆಯಲ್ಪಟ್ಟಿತು. ಬಾಗಿ ಲನ್ನು ತೆರೆದವಳು ಒಬ್ಬ ಸ್ತ್ರೀಯು ಆಕೆಯು ಜಾತಿಯಿಂದ ಶೂದ್ರಳಾಗಿ ಮೋಹನನಿಗೆ ತೋರಿತು. ಯಾರೋ ಪರಿಚಾರಿಕೆಯಿರಬಹುದೆಂದೂಹಿಸಿ: "ತಾಯಿ, ನಮಸ್ಕಾರ. ಪ್ರಾಣ ಹೋಗುತ್ತದೆ ಕಾಪಾಡಿರಿ. ಅನ್ನವಿಲ್ಲದೆ ಎರಡು ದಿನಗಳಾದವು. ತಾಯಿ, ಏನನ್ನಾದರೂ ಕೊಟ್ಟು ಪುಣ್ಯಕಟ್ಟಿ ಕೊಳ್ಳಿ" ಎಂದು ಮೋಹನನು ಕೃತಕವಾದ ದುಃಖವನ್ನು ತೋರಿಸುತ್ತಾ ಕಣ್ಣೀರಿಟ್ಟು ಬೇಡಿದನು.

ಆ ಸ್ತ್ರೀಯು ಸ್ವಲ್ಪ ಮೃದುಹೃದಯದವಳಾದುದರಿಂದ: "ಈಗೆಲ್ಲಿಂದ ಅನ್ನ ತರಲಿ: ಈ ಸಂಜೆಯ ಹೊತ್ತಿನಲ್ಲಿ ಯಾರು ಅನ್ನವನ್ನು ಮಾಡಿಟ್ಟಿರು ವರು?" ಎಂದು ಕರುಣೆಯಿಂದ ನುಡಿದಳು.

ಮೋಹನ—ಏನಾದರೂ ಮಾಡಿರಿ ತಾಯಿ. ಹಸಿವೆಯಾಗಿ ತುಂಬಾ ಸಂಕಟವಾಗುತ್ತಿದೆ, ಎಂದು ಹೇಳಿ ಮೋಹನನು ಅಳಹತ್ತಿದನು. ಸ್ತ್ರೀಯು

ಏನನ್ನು ಮಾಡುವದಕ್ಕೂ ತೋಚದೆ ಸುಮ್ಮನೆ ನಿಂತಳು. ಅಳುವಿನ ಸದ್ದನ್ನು ಕೇಳಿ ರಘುವು ಅಲ್ಲಿಗೆ ಬಂದು "ಇದೇನವಸ್ಥೆಯು!" ಎಂದನು.

ಸ್ತ್ರೀ—ನೋಡಿ! ಅನ್ನವಿಲ್ಲದೆ ಎರಡು ದಿನವಾಯಿತಂತೆ. ಹಸಿವಾಗುತ್ತಿದೆ ಎಂದು ಅಳುತ್ತಿರುವನು. ರಘುವು ಆ ಸ್ತ್ರೀಯ ಹೆಗಲಿನ ಮೇಲೆ ಕೈಯನ್ನಿಟ್ಟುಕೊಂಡು, "ಈಗೇನು ಮಾಡಲಾದೀತು! ಅಷ್ಟು ಕನಿಕರವು ನಿನಗಿದ್ದರೆ ಅಡಿಗೆಯನ್ನು ಮಾಡಿ ಹಾಕು" ಎಂದನು.

ಸ್ತ್ರೀ—ಬೈರಾಗಿಯು ಬ್ರಾಹ್ಮಣನೆಂದು ತೋರುತ್ತದೆ.

ರಘು - ಹಾಗಾದರೆ ಅಲ್ಲಿ ಹಣ್ಣುಗಳಿವೆ. ತಂದು ಕೊಡು. ಸ್ತ್ರೀಯು ಹೋಗಿ ಕೆಲವು ಹಣ್ಣುಗಳನ್ನು ತಂದು ಬೈರಾಗಿಗೆ ಕೊಟ್ಟಳು.

ರಘು—ಹೊರಗೆ ಹೋಗಿ ತಿನ್ನು.

ಸ್ತ್ರೀ—ನಿಮಗೆ ಅದೂ ಒಂದು ಕಷ್ಟವೇನು? ತಿನ್ನಲಿ. ಅದರಿಂದ ಹಾನಿ ಏನು? ಎಂದು ನುಡಿದು ಸ್ತ್ರೀಯು ಒಂದು ಬಾರಿ ರಘುವಿನ ಮೇಲೆ ಕಟಾಕ್ಷನೋಟವನ್ನು ಬೀರಿದಳು. ಅದರಿಂದ ರಘುವು ಪರಮಾನಂದ ಭರಿತನಾಗಿ ಆಕೆಯನ್ನು ಪ್ರೀತಿಯಿಂದ ನೋಡತೊಡಗಿದನು. ಮೋಹನನು ಹಣ್ಣುಗಳನ್ನು ತಿಂದು "ಅಮ್ಮಾ! ನಿಮ್ಮಿಂದೀದಿನ ಈ ಜೀವವುಳಿಯಿತು. ನೀವು ತುಂಬಾ ಪುಣ್ಯವನ್ನು ಪಡೆದುಕೊಂಡಿರಿ. ನಿಮ್ಮ ಮಕ್ಕಳು ಚಿರಂಜೀವಿಗಳಾಗಲಿ. ಅದೇನು! ನಿಮ್ಮ ಮಕ್ಕಳಾರೂ ಇಲ್ಲಿ ಕಾಣಿಸಲಿಲ್ಲ?"

ಸ್ತ್ರೀ—ಅಂತಹ ಅದೃಷ್ಟವು ನನಗಿಲ್ಲ.

ರಘು (ನಗುತ್ತಾ)—ಅಂತಹ ಅದೃಷ್ಟವು ಬರುವಂತೆ ಆಶೀರ್ವಾದ ಮಾಡಲು ಬೈರಾಗಿಯ ಹತ್ತಿರ ಕೇಳಿಕೊ.

ಮೋಹನ-'ನಿಮಗೆ ಶುಭವಾಗಲಮ್ಮಾ! ಹೋಗಿ ಬರುತ್ತೇನೆ,' ಎಂದು ಹೇಳಿ ಮೋಹನನು ಅಲ್ಲಿಂದ ಹೊರಟು ಹೋದನು. ತನ್ನ ಕಾರ್ಯವು ಸಫಲವಾದುದಕ್ಕಾಗಿ ಮೋಹನನು ಸಂತುಷ್ಟನಾದನು. "ಆ ಮನೆಯು ರಘುವಿನ ಪ್ರಧಾನ ವಸತಿ. ಭೋಗಕ್ಕೆ ಶೂದ್ರ ಸ್ತ್ರೀ. ಮನೆಯಲ್ಲಿ ಇನ್ನಾರೂ ಇಲ್ಲ" ಎಂಬುದನ್ನು ಅವರಿಬ್ಬರ ಮಾತುಗಳಿಂದ ಮೋಹನನು ತಿಳಿದನು. ಅಲ್ಲಿಯ ಕಾರ್ಯವನ್ನು ಮುಗಿಸಿ ಮೋಹನನು ಅಲ್ಲಿಂದ ಹೊರಟು ಹಿಂದೆ ಕುದುರೆಯನ್ನಿ

ರಿಸಿದ್ದ ಗ್ರಾಮಕ್ಕೆ ಹೋಗಿ ಕುದುರೆಯನ್ನು ತೆಗೆದುಕೊಂಡು, ಅದನ್ನು ಹತ್ತಿ ಗೋಪಾಲನ ಗ್ರಾಮಕ್ಕೆ ಹೋದನು. ಹಿಂದೆ ರಘುವು ಯಾವ ಮನೆಯಲ್ಲಿ ಕುದುರೆಯನ್ನಿರಿಸಿ ಮಲಗಿದ್ದನೋ ಆ ಮನೆಯನ್ನು ಪ್ರಕೃತಕಾಲದಲ್ಲಿ ವಿಚಾರಿಸುವದು ಅನಾವಶ್ಯಕವೆಂದು ತಿಳಿದು ಮೋಹನನದನ್ನು ವಿಚಾರಿಸಿರಲಿಲ್ಲ.

ಮಾರನೇ ದಿನವೇ ಮಂಗಳವಾರವಾಗಿತ್ತು. ಮೋಹನನು ಅದಕ್ಕೆ ತಕ್ಕ ಸಿದ್ಧತೆಯನ್ನು ಮಾಡಿಕೊಂಡನು. ಮಂಗಳವಾರ ರಾತ್ರಿ ಯಾವ ಮನೆಯಲ್ಲಿ ಕಳವನ್ನು ಮಾಡಲು ಕಳ್ಳರೆಲ್ಲರೂ ಸೇರಿ ಕಾಡಿನ ಮಧ್ಯದ ಗುಡಿಸಲಿನಲ್ಲಿ ನಿಶ್ಚಯ ಮಾಡಿದ್ದರೋ ಆ ಮನೆಯನ್ನು ಹುಡುಕಿಕೊಂಡು ಮೋಹನನೂ, ಆತನ ಮಿತ್ರರೂ ಸೋಮವಾರ ರಾತ್ರಿಯೇ ಹೋಗಿ ಅಲ್ಲಿ ಯಾರಾರು ಎಲ್ಲೆಲ್ಲಿ ನಿಂತು ಏನೇನು ಮಾಡಬೇಕೆಂಬುದನ್ನು ನಿಶ್ಚಯ ಮಾಡಿ ಹಿಂದಿರುಗಿದರು. ಮಂಗಳವಾರ ರಾತ್ರಿ ಒಂಭತ್ತು ಗಂಟೆಯ ಸಮಯದಲ್ಲಿ ಮೋಹನನು ಅಶ್ವಾರೋಹಿಯಾಗಿ ಅಶ್ವಾರೋಹಿಗಳಾದ ತನ್ನವರೊಂದಿಗೆ ಹಿಂದಿನ ದಿನದಲ್ಲಿ ನೋಡಿಟ್ಟಿದ್ದ ಸ್ಥಳಕ್ಕೆ ಹೋಗಿ ಅಲ್ಲಿ ಸಿದ್ಧನಾಗಿ ನಿಂತನು. ಎಲ್ಲವೂ ಗುಪ್ತವಾಗಿತ್ತು.

ರಾತ್ರಿ ಒಂದು ಗಂಟೆಯ ಸಮಯದಲ್ಲಿ ಅಶ್ವಾರೋಹಿಗಳಾದ ಹದಿನೈದು ಜನ ಕಳ್ಳರು ಅಲ್ಲಿಗೆ ಬಂದರು. ಮನೆಯ ಹಿಂಭಾಗದಲ್ಲಿ ಕುದುರೆಗಳಿಂದ ಇಳಿದರು. ಕುದುರೆಗಳ ರಕ್ಷಣೆಗೆ ಇಬ್ಬರು ನಿಂತು ಉಳಿದವರು ಸುಲಿಗೆ ಮಾಡಲು ಮುಂದಾದರು. ಇಬ್ಬರು ಮನೆಯ ಒಂದು ಭಾಗದಲ್ಲಿ ಕನ್ನವನ್ನು ಹಾಕಿದರು. ಹತ್ತು ನಿಮಿಷಗಳಲ್ಲಿ ಎಲ್ಲವೂ ಸಿದ್ಧವಾಯಿತು. ಒಳಗೆ ಪ್ರವೇಶಿಸಲು ಸಿದ್ಧರಾದರು. ಅಷ್ಟರೊಳಗೆ 'ಢಂ' ಎಂದು ಸದ್ದಾಗಿ, ಅಲ್ಲಿಯೇ ಇದ್ದ ಒಂದು ಮರದ ರೆಂಬೆಯಲ್ಲಿ ಐವತ್ತು ಮಾರು ದೂರದವರೆಗೂ ವ್ಯಾಪಿಸುವ ಪ್ರಕಾಶವುಳ್ಳ ಒಂದು ದೀಪವು ಧಿಗ್ಗನೆ ಹತ್ತಿಕೊಂಡಿತು. ಕಳ್ಳರೆಲ್ಲರೂ ಸ್ಪಷ್ಟವಾಗಿ ಕಾಣತೊಡಗಿದರು. ಕಳ್ಳರು ಭೀತರಾದರು. ಒಡನೆ ರಘುವು ದೀಪಕ್ಕೆ ಗುರಿಯಿಟ್ಟು ಒಂದು ಗುಂಡನ್ನು ಹಾರಿಸಿದನು; ಆದರೆ ಗುರಿಯು ತಪ್ಪಿ ಹೋಯಿತು. ಇನ್ನೊಂದು ಗುಂಡನ್ನು ಹೊಡೆ

ಯಲುದ್ಯುಕ್ತನಾಗುತ್ತಿರುವಷ್ಟರಲ್ಲಿ ಅಶ್ವಾರೋಹಿಯೊಬ್ಬನು ಥಟ್ಟನೆ ಬಂದು ಉದ್ದವಾದ ದೊಣ್ಣೆಯಿಂದ ರಘುವಿನ ಪಿಸ್ತೂಲನ್ನು ಬಲವಾಗಿ ಬಡಿದು ಹಾರಿ ಹೋದನು. ಪಿಸ್ತೂಲು ರಘುವಿನ ಕೈಯಿಂದ ತಪ್ಪಿ ಎತ್ತೊ ಹಾರಿ ಹೋಯಿತು. ಕಳ್ಳರು ಹಿಂದೆ ಮುಂದೆ ನೋಡುವಷ್ಟರಲ್ಲಿ ರಘುವು: "ಕುದುರೆಗಳನ್ನು ಹತ್ತಿ ಓಡಿರಿ" ಎಂದು ಕೂಗಿ ಹೇಳಿದನು.

ಎಲ್ಲರೂ ಕುದುರೆಗಳನ್ನು ನಿಲ್ಲಿಸಿದ ಸ್ಥಳಕ್ಕೆ ಓಡಿದರು. ಅಲ್ಲಿ ಕುದುರೆಗಳೂ, ರಕ್ಷಣೆಗೆ ನಿಂತ ಇಬ್ಬರೂ, ಇರಲಿಲ್ಲ. ಕುದುರೆಗಳೆಲ್ಲವೂ ಮೋಹನನ ತಂತ್ರದಿಂದ ಅಲ್ಲಿಂದ ಬೇರೆ ಕಡೆಗೆ ಒಯ್ಯಲ್ಪಟ್ಟಿದ್ದವು. ಅವುಗಳ ರಕ್ಷಕರು ಸೆರೆಹಿಡಿಯಲ್ಪಟ್ಟಿದ್ದರು. ಇನ್ನು ಬೇರೆ ಗತಿಯಿಲ್ಲದೆ ಕಳ್ಳರು ಓಡಲು ಸಿದ್ಧರಾಗುವಷ್ಟರಲ್ಲಿ ಕುದುರೆಗಳು ಹಿಂದಿನಿಂದಲೂ, ಮುಂದಿನಿಂದಲೂ ನೆಗೆದು ನೆಗದು ಹಾರುತ್ತಾ ಬಂದವು. ಅಶ್ವಾರೋಹಿಗಳು ಬಲವಾದ ದೊಣ್ಣೆಗಳಿಂದ ಸಿಕ್ಕಿದಲ್ಲಿ ಬಡಿಯತೊಡಗಿದರು. ಕಳ್ಳರು ಎಲ್ಲೆಲ್ಲಿ ಓಡಿದರೂ ಅಡ್ಡಗಟ್ಟಿ ಬಡಿದರು. ನಾಲ್ಕೂ ಕಡೆಗಳಲ್ಲಿಯೂ ಅಡ್ಡಗಟ್ಟಿ ಬಡಿಯುತ್ತಿದ್ದರು. ಆದದ್ದಾಗಲೆಂದು ಯಾರು ಧೈರ್ಯ ಮಾಡಿ ತಪ್ಪಿಸಿ ಓಡಿ ಹೋಗಲು ಯತ್ನಿಸಿದರೊ ಅವರು ಮೈ ಮುರಿಯುವಂತೆ ಪೆಟ್ಟುಗಳನ್ನು ತಿಂದರು. ತಪ್ಪಿಸಿಕೊಳ್ಳಲು ಒಬ್ಬರಿಂದಲೂ ಆಗಲಿಲ್ಲ. ಗುಂಡಿನ ಸದ್ದಾದೊಡನೆ ಎಚ್ಚತ್ತು ಮನೆಯ ಜನರು ಅಲ್ಲಿಗೆ ಬಂದು ತಮ್ಮಿಂದಾದ ಸಹಾಯವನ್ನು ಮಾಡುತ್ತಿದ್ದರು. ದೀಪವು ಆ ಸ್ಥಳವೆಲ್ಲವನ್ನೂ ಬೆಳಗುತ್ತಿದ್ದುದರಿಂದ ಭಯಪಟ್ಟ ಕಳ್ಳರು ತಾವಾಗಿಯೇ ಸೆರೆಸಿಕ್ಕುತ್ತಿದ್ದರು. ಪೆಟ್ಟಿನ ನೋವಿನಿಂದ ನರಳುತ್ತಿದ್ದ ಕಳ್ಳರು ತಮ್ಮ ಭವಿಷ್ಯತ್ಪರಿಣಾಮವನ್ನು ನೆನೆದು ದುಃಖಿಸುತ್ತಿದ್ದರು. ಮೋಹನನು ಯಾರನ್ನೂ ಗುಂಡಿನಿಂದ ಹೊಡೆಯಲು ಇಚ್ಛಿಸಿರಲಿಲ್ಲ. ಅಂತಹ ದುರ್ಮಾರ್ಗಿಗಳಿಗೆ ಗುಂಡಿನ ಪೆಟ್ಟಿಗಿಂತಲೂ, ದೊಣ್ಣೆಗಳ ಪೆಟ್ಟೇ ಸರಿಯಾದುದೆಂದು ಮೋಹನನು ಭಾವಿಸಿದ್ದನು. ಹತ್ತು ನಿಮಿಷದೊಳಗೆ ಕಳ್ಳರೆಲ್ಲರೂ ಹಿಡಿಯಲ್ಪಟ್ಟರು. ಅಷ್ಟರೊಳಗೆ ಊರಿನ ಜನರೆಲ್ಲರೂ ಸೇರಿಬಿಟ್ಟಿದ್ದರು. ಮೋಹನನೂ, ಆತನ ಸಂಗಡಿಗರೂ ಕುದುರೆಗಳಿಂದಿಳಿದು ಹದಿನೈದು ಜನರಿಗೂ ಬೇಡಿಗಳನ್ನು ತೊಡಿಸಿದರು. ಬಳಿಕ ಮೋಹನನು ಮಿತ್ರರನ್ನು ಕುರಿತು:

"ನಮ್ಮಲ್ಲಿ ಹಠಾತ್ತಾಗಿ ಮುಂದೆ ಹೋಗಿ ರಘುವಿನ ಪಿಸ್ತೂಲನ್ನು ಹಾರಿಸಿರುವವರು ಯಾರು?" ಎಂದು ಕೇಳಿದನು.

ಪ್ರಿಯನಾಥ—ಕೋಮಲೆಗಲ್ಲದೆ ಇನ್ನಾರಿಗೆ ಆ ಸಾಹಸವು ಬರುವದು?

ಮೋಹನ—ಕೋಮಲೆ, ಬೇಷ್! ಚೆನ್ನಾಗಿ ಕೆಲಸ ಮಾಡಿದಿ. ರಘುವು ತೀಕ್ಷ್ಣಬುದ್ಧಿಯು. ಅಂಧಃಕಾರವಾದರೆ ತನಗೆ ಓಡಿ ಹೋಗಲು ಸುಲಭವೆಂದು ಆತನ ಆಶೆ. ಪಾಪ! ಅಷ್ಟರಲ್ಲಿ ನೀನು ಬಿಡಲಿಲ್ಲ. ಈ ದಿನದ ಜಯಲಕ್ಷ್ಮಿಯು ನಿನ್ನ ಕಂಠಕ್ಕೆ ಮಾಲಿಕೆಯನ್ನು ಹಾಕಿರುವಳು. ನಾನು ಹೇಳುವದು ಸುಳ್ಳೇ? ಕೋಮಲಾ!

ಕೋಮಲೆ—ಸಾಕು. ಕಾರ್ಯವಾಯಿತಷ್ಟೆ! ಇನ್ನೇನು ನಿಮಗೆ?

ಮೋಹನ—ಸರಿ. ಇಷ್ಟಕ್ಕೇ ಸಿಟ್ಟುಬಂದಾಯಿತು. ಹೋಗಲಿ. (ಅಲ್ಲಿ ಬಂದ ಆ ಮನೆಯ ಯಜಮಾನನನ್ನು ಕುರಿತು) ನಿಮ್ಮ ಪುಣ್ಯ ಚೆನ್ನಾಗಿತ್ತು ನೋಡಿ. ನಿಮ್ಮ ಮನೆಯನ್ನು ಪ್ರವೇಶಿಸುವದರೊಳಗೆ ಕಳ್ಳರು ಹಿಡಿಯಲ್ಪಟ್ಟರು.

ಯಜಮಾನ—ತಮ್ಮ ದಯೆಯಿಂದ ನಾನು ಉಳಿದೆನು. ತಮ್ಮ ಪರಿಚಯವಾಗಲಿಲ್ಲ.

ಮೋಹನ— ಜನರು 'ಮೋಹನ' ಎಂದು ಯಾರನ್ನೊ ಹೇಳಿಕೊಳ್ಳುತ್ತಿರುವರಷ್ಟೆ? ಅವನೇ! ಇವರೆಲ್ಲರೂ ನನ್ನ ಮಿತ್ರರು.

ಯಜಮಾನನು ಒಡನೆ ಎಲ್ಲರಿಗೂ ಕೈಮುಗಿದು ಮೋಹನನನ್ನು ಕುರಿತು: "ತಮ್ಮನ್ನು ಕೇಳಿ ಬಲ್ಲೆನು. ಇದು ವರೆಗೂ ನೋಡುವ ಅದೃಷ್ಟವು ಬಂದಿರಲಿಲ್ಲ. ಈ ದಿನ ನೋಡಿ ಅತ್ಯಾನಂದಿತನಾದೆನು" ಎಂದನು.

ಅಲ್ಲಿ ನೆರೆದ ಜನರೆಲ್ಲರೂ 'ಮೋಹನ' ಎಂದೊಡನೆ ಮೇಲೆ ಮೇಲೆ ಬಂದು ತವಕದಿಂದ ನೋಡಲಾರಂಭಿಸಿದರು.

ಪ್ರಾತಃಕಾಲದ ವರೆಗೆ ಮೋಹನನು ಅಲ್ಲಿಯೇ ಇದ್ದು ಆ ಮೇಲೆ ಕಳ್ಳರೆಲ್ಲರನ್ನೂ ಅಲ್ಲಿಗೆ ಸಮೀಪವಿದ್ದ ಠಾಣ್ಯಕ್ಕೆ ಒಯ್ದನು. ಜೈಲಿನಲ್ಲಿಟ್ಟು ಬಲವಾದ ಕಾವಲನ್ನಿಡಿಸಿದನು. ಠಾಣ್ಯದಲ್ಲಿ ಇದ್ದ ರಘುವಿನ ಮನೆಯನ್ನು ಮೋಹನನು ಪೋಲೀಸರಿಂದ ಜಪ್ತಿ ಮಾಡಿಸಿದನು.

ಕಳವು ಮಾಡಿ ಅದು ಅರಿಗೆ ರಘುವು ಸಂಪಾದಿಸಿದ ಅಪಾರ ಸಂಪತ್ತು ಅಲ್ಲಿ ಸಿಕ್ಕಿತು. ಅದೆಲ್ಲವನ್ನೂ ಅಲ್ಲಲ್ಲಿ ಕಳವಾದ ಮನೆಯವರಿಗೆ ವ್ಯವಸ್ಥೆಯಿಂದ ಸರ್ಕಾರದವರು ಮುಂದೆ ಕೊಟ್ಟರು. ಮೋಹನನ ಅಪ್ಪಣೆಯಿಂದ ಮದನನು ಅಲ್ಲಿಂದ ರಜತಕ್ಕೆ ಹೋಗಿ ತನ್ನ ಅಧಿಕಾರದಿಂದ ರಮೇಶನನ್ನು ಪೋಲೀಸರಿಂದ ಹಿಡಿಸಿ ರಾತಲ್ಲಿಗೆ ಕರೆತಂದನು

ಈ ಅಪರಾಧಿಗಳೆಲ್ಲರನ್ನೂ ವಿಚಾರಿಸಲು ರಾತಲ್ಲಿಯಲ್ಲಿ ಪ್ರತ್ಯೇಕವಾದ ಒಂದು ಸಭೆಯು ಏರ್ಪಟ್ಟಿತು. ಸರಿಯಾದ ಮೂರು ಜನ ಜಡ್ಜಿಗಳು ವಿಚಾರಣೆಗಾಗಿ ನಿಯಮಿಸಲ್ಪಟ್ಟರು. ವಿಚಾರಣೆಯು ನಡೆಯುತ್ತಿದ್ದ ದಿನಗಳಲ್ಲಿ ಪೋಲೀಸ್ ಕಮೀಶನ್ನರೇ ಮುಂತಾದ ದೊಡ್ಡ ಅಧಿಕಾರಿಗಳು ಹಾಜರಿದ್ದರು. ರಮೇಶನು ನಿರಪರಾಧಿಯೆಂದು ವಾದಿಸಲು ರಜತದ ಮ್ಯಾಜಿಸ್ಟ್ರೇಟರು ಮುಂದೆ ಬಂದರು. ಮೋಹನನು ರಮೇಶನ ಅಕೃತ್ಯಗಳನ್ನು ಫೋಟೊಗಳಿಂದ ಸ್ಪಷ್ಟಗೊಳಿಸಿದನು. ಮೋಹನನ ಈ ಯುಕ್ತಿಯನ್ನು ನೋಡಿ ಮ್ಯಾಜಿಸ್ಟ್ರೇಟರು ತಬ್ಬಿಬ್ಬಾದರು. ಜಡ್ಜಿಗಳು ಮೋಹನನ ಯುಕ್ತಿಯನ್ನು ಹೊಗಳಿದರು. ರಮೇಶನು ಪತ್ತೇದಾರಿ ಉದ್ಯೋಗದಿಂದ ನಿವೃತ್ತನಾಗಿ ಒಂದು ಸಾವಿರ ರೂಪಾಯಿಗಳ ಜುಲ್ಮಾನೆಯನ್ನು ಒಡನೆ ಕೊಡಬೇಕಾಗಿ ಜಡ್ಜಿಗಳು ತೀರ್ಮಾನಿಸಿದರು. ರಘುವೂ, ಆತನ ಸಂಗಡಿಗರೂ ಹೆಚ್ಚು ಹೊತ್ತಿಲ್ಲದೆ ಶಿಕ್ಷಿಸಲ್ಪಟ್ಟರು. ರಘುವಿಗೆ ಗಲ್ಲಿನ ಶಿಕ್ಷೆಯಾಯಿತು. ಉಳಿದವರಿಗೆ ಅಪರಾಧಾನುಗುಣವಾಗಿ ಶಿಕ್ಷೆಯು ವಿಧಿಸಲ್ಪಟ್ಟಿತು.

ಅಪರಾಧಿಗಳಿಗೆ ಶಿಕ್ಷೆಯು ವಿಧಿಸಲ್ಪಟ್ಟ ಮೇಲೆ ಜಡ್ಜಿಗಳೂ, ಕಮಿಷನ್ನರು, ಉಳಿದ ದೊಡ್ಡ ದೊಡ್ಡ ಅಧಿಕಾರಿಗಳೂ ಎದ್ದು ಮೋಹನನ ಹತ್ತಿರ ಬಂದು ತುಂಬಾ ಅಭಿನಂದಿಸಿ ಆನಂದಸೂಚಕವಾಗಿ ಪುಷ್ಪಹಾರಗಳನ್ನು ಮೋಹನನ ಕಂಠಕ್ಕೆ ಹಾಕಿ ಆನಂದದಿಂದ ಚಪ್ಪಾಳೆ ಹೊಡೆದರು

ಆ ಮೇಲೆ ಎಲ್ಲರೂ ಅಲ್ಲಿಂದ ತಮ್ಮ ತಮ್ಮ ನಿವಾಸ ಸ್ಥಳಗಳಿಗೆ ಹೊರಟು ಹೋದರು.

---

## ಸಂಪೂರ್ಣಂ

# ಈಶಸಂಕಲ್ಪ

ಲೇಖಕ] [ನಾ. ರ. ಕುಲಕರ್ಣಿ

ಕರ್ನಾಟಕ ಸಾರ್ವಭೌಮನಾಗಿದ್ದ ಸತ್ಯಾಶ್ರಯ ಪುಲಿಕೇಶಿಯ ಕಾಲದ ವಿಶ್ವಸನೀಯ ಐತಿಹಾಸಿಕ ಸಂಗತಿಗಳನ್ನೊಳಗೊಂಡ ಹೃದಯಂಗಮವಾದ ಕಾದಂಬರಿಯಿದು. ಉತ್ತರಾಪಥದ ಸಾರ್ವಭೌಮನಾದ ಕನ್ಯಕುಬ್ಜದ ಹರ್ಷವರ್ಧನನ ಗರ್ವಭಂಗಮಾಡಿ ಅವನನ್ನು ಸಮರಾಂಗಣದಲ್ಲಿ ಸೋಲಿಸಿ ಓಡಿಸಿ ಕರ್ಣಾಟಕ ಸಾಮ್ರಾಜ್ಯದ ಮೇರೆಯನ್ನು ನರ್ಮದಾ ತೀರದವರೆಗೆ ಸ್ಥಿರಪಡಿಸಿದ ಐತಿಹಾಸಿಕ ಸಂಗತಿಗಳಿಂದ ಪರಿಪ್ಲುತವಾಗಿದೆ. ರೇವತಿ ಯೆಂಬ ಷೋಡಶವರ್ಷದ ತರುಣಿಯು ರೈವತಸೇನನೆಂಬ ಹೆಸರಿನಿಂದ ತೋರಿಸಿದ ಧೈರ್ಯ-ಸಾಹಸಗಳೂ ಒಳ್ಳೇ ನಿಕರದ ಕಾಲಕ್ಕೆ ಪುಲಿಕೇಶಿ ಮಹಾ ರಾಜನಿಗೆ ಮಾಡಿದ ಅಪೂರ್ವ ಸಹಾಯವೂ ವಾಚಕರನ್ನು ಆಶ್ಚರ್ಯಗೊಳಿಸ ದಿರಲಾರವು. ಕ್ರೌನ ಪುಟ ೧೪೪. ಬೆಲೆ ೧೪ ಆಣೆ

---

# ವಿಮಲಾ,

ಅಥವಾ ಮತ್ಸರಗ್ರಸ್ತ ಭಗಿನಿ. (೨ನೇ ಆವೃತ್ತಿ)

ಲೇಖಕ:-ಭಿ. ಪ. ಕಾಳೆ, ಕ್ರೌನ ಪುಟ ೧೬೦. ಪೃಥ್ವೀರಾಜನಿಗೆ ಸಂಬಂಧಿಸಿದ ಶ್ರೇಷ್ಠವಾದ ಐತಿಹಾಸಿಕ ಕಥಾನಕವು. ಮತ್ಸರಗ್ರಸ್ತಳಾದ ವಿಮಲೆಯು- ಪೃಥ್ವೀರಾಜನ ದೊಡ್ಡಪ್ಪನು ತನ್ನ ತಂಗಿಯನ್ನು ಸದ್ಗುಣಿಕಮಲೆಯಲ್ಲಿಯೂ ಆಕೆಯ ಸುಪುತ್ರನಾದ ಪೃಥ್ವೀರಾಜ ಚಹ್ವಾಣನಲ್ಲಿಯೂ ವಿಕಲ್ಪವನ್ನು ತಾಳಿ, ಅವರ ಸೇಡು ತೀರಿಸಿಕೊಳ್ಳುವದಕ್ಕೆಂದು ಆಗಿನ ಕಾಲದಲ್ಲಿ ಸುಪ್ರಸಿದ್ಧ ನಾಗಿದ್ದ ಕಾಪಾಲಿಕನೆಂಬ ಶಾಕ್ತನ ಮಂತ್ರ-ತಂತ್ರಗಳ ಆಡಂಬರಕ್ಕೆ ಮನ ಸೋತು, ತಾನೂ ತನ್ನ ಮಗನಾದ ಜಯಚಂದನೂ ಎಂಥ ಕಠಿಣ ಪ್ರಸಂಗ ದಲ್ಲಿ ಸಿಕ್ಕರೆಂಬದೂ, ಎಂಥ ಅವಮಾನಕ್ಕೆ ಗುರಿಯಾದರೆಂಬದೂ ವ್ಯಕ್ತವಾ ಗುವದಲ್ಲದೆ, ಆ ಚಂಡಿವಿಮಲೆಯ ಕಾರಸ್ಥಾನದಿಂದಲೇ ನಮ್ಮ ಹಿಂದುಸ್ಥಾ ನವು-ಆರ್ಯಭೂಮಿಯು ಅವಿಂಧರ ಆಕ್ರಮಣಕ್ಕೆ ಹೇಗೆ ಬಲಿಯಾಯಿ ತೆಂಬದು ಈ ಕಥಾನಕದಿಂದ ಬಹು ಚೆನ್ನಾಗಿ ಗೊತ್ತಾಗುತ್ತದೆ. ಬೆಲೆ ೧ ರೂ

---

# ರಾಜಕೀಯ [illegible] ರಹಸ್ಯ.

ಲೇಖಕ—ಭಿ. ಪ. ಕಾಳೆ. [illegible]ನ ಪುಟ ೨೦೦. ನಭೂತಪೂರ್ವ ಪಾಶ್ಚಿಮಾತ್ಯ ಘಟನಾ ಸುಧಾರಣೆಗಳಿಂದ ಯುಕ್ತನಾಗಿರುವ ಈ ಕಥೆಯು ಕನ್ನಡ ವಾಚಕವರ್ಗವನ್ನು ದಂಗುಗೊಳಿಸಿ ಬಿಡುವದು. ಬೆಲೆ ೧|| ರೂ.

---

# ಹಂಸಾ.

ಲೇಖಕ:—ಭಿ. ಪ. ಕಾಳೆ, ಡೆಮ್ಮಿ ಪುಟ ೧೮೮. ಔರಂಗಜೇಬನು ದಕ್ಷಿಣಕ್ಕೆ ದಂಡೆತ್ತಿ ಬಂದ ಕಾಲಕ್ಕೆ ಸಂಭವಿಸಿದ ಒಂದು ಐತಿಹಾಸಿಕ ಪ್ರಸಂಗದ ಚಿತ್ರವಿದು. ಶ್ರೀ ಶಿವಛತ್ರಪತಿಯ ರಾಜಧಾನಿಯ ದುರ್ಗಾಧಿಪತಿಯಾಗಿದ್ದ ಸೂರ್ಯಾಜಿ ಪಿಸಾಳನು ಔರಂಗಜೇಬನ ಸವಿಮಾತಿಗೆ ಮರುಳಾಗಿ ಫಿತೂರಾಗಲು, ಬಾದಶಹನ ಸೈನಿಕರು ಆ ದುರ್ಗವನ್ನು ವಶಪಡಿಸಿಕೊಂಡು ಸಂಭಾಜಿಯನ್ನು ಕೊಲೆಗೆಯ್ದು ನಂತರ ಸೂರ್ಯಾಜಿಯನ್ನು ಕುಲಗೆಡಿಸಿ ಮುಸಲ್ಮಾನನನ್ನಾಗ ಮಾಡಿ, ಆತನಿಗೆ ವಾಯಿಯ ದೇಶಮುಖಗಿರಿಯನ್ನು ಕೊಟ್ಟರು; ಆದರೆ ಶಿವಛತ್ರಪತಿಯಲ್ಲೂ, ಹಿಂದೂಧರ್ಮದಲ್ಲೂ ಅತ್ಯಂತ ನಿಷ್ಠೆಯುಳ್ಳ ಸೂರ್ಯಾಜಿಯ ಹೆಂಡಿರು-ಮಕ್ಕಳು ಮಾತ್ರ ಸೂರ್ಯಾಜಿಯಂತೆ ಕುಲಗೇಡಿಗಳಾಗದೆ, ಪ್ರಾಣಾಂತಿಕ ಕಷ್ಟ-ನಷ್ಟಗಳನ್ನು ಸಹಿಸಿದರೂ ಧರ್ಮಬಾಹಿರರಾಗಲಿಲ್ಲ. ಹಂಸೆಯು ಪ್ರಾಯಕ್ಕೆ ಬರಲು, ಸೂರ್ಯಾಜಿಯು ಆಕೆಯನ್ನು ಬಾದಶಹನ ಝನಾನಖಾನೆಗೆ ಕಳಿಸಿ, ತಾನು ಬಹು ದೊಡ್ಡ ಪದವಿಗೇರಲಿಕ್ಕೆ ಪ್ರಯತ್ನಿಸಿದನು; ಆದರೆ ತನ್ನ ಭವಿತವ್ಯದ ಮೂಲಕ ಹಂಸೆಯು ಎಂಥ ವಿಪತ್ತಿನಲ್ಲಿಯೂ ಕುಲಹೀನಳಾಗದೆ ಎಷ್ಟೋ ದಿನಗಳವರೆಗೆ ಬಾದಶಹನ ಸೆರೆಯಲ್ಲಿದ್ದರೂ ನಂತರ ಶ್ರೀ ಶಾಹೂರಾಜನ ಸಹಾಯದಿಂದ ಬಂಧಮುಕ್ತಳಾಗಿ ತನ್ನ ಶೀಲವನ್ನು ಕಾಯ್ದುಕೊಂಡ ಅತ್ಯಂತ ಮನೋವೇಧಕವಾದ ಕಥೆಯು ಈ ಕಾದಂಬರಿಯಲ್ಲಿ ವರ್ಣಿಸಲ್ಪಟ್ಟಿದೆ.

ಬೆಲೆ ೧| ರೂ.

ಸಿಗುವ ವಿಳಾಸ—ಶ್ರೀ ಶೇಷಾಚಲ ಗ್ರಂಥಮಾಲಾ

ಪೋ. ಆನಂದವ ಡಿ. ಧಾರವಾಡ